ಸರ್ಕಾರಿ ಮುದ್ರಣಾಲಯ, ಬೆಂಗಳೂರು

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಶಾಂತವೇರಿ ಗೋಪಾಲಗೌಡ





ಪ್ರಕಟಣೆ :
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

ಡಾ|| ಸೂರ್ಯನಾಥ ಕಾಮತ್
ಅವರ ಕೊಡುಗೆ

# ಶಾಂತವೇರಿ ಗೋಪಾಲಗೌಡ


ನಿರೂಪಣೆ :

ಪ್ರೊ. ಎನ್.ಬಿ. ಪಾಂಗಣ್ಣಾಯ
ಪ್ರೊ. ಹೆಚ್.ಆರ್. ಅಚ್ಯುತ್‌ರಾವ್
ಡಾ. ಡಿ.ಎಸ್. ಜಯಪ್ಪಗೌಡ



ಪ್ರಕಟಣೆ :
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001.

ಪ್ರತಿಭಾವಂತ ಸಂಸದೀಯ ಪಟುಗಳ
ಬದುಕು ಬರಹ ಮಾಲಿಕೆ

# ಶಾಂತವೇರಿ ಗೋಪಾಲಗೌಡ



Eminent Parliamentairan Series

# SHANTAVERI GOPALA GOWDA



ಮೊದಲ ಮುದ್ರಣ :

ಮಾರ್ಚ್, 1999 - 1,500 ಪ್ರತಿಗಳು



ಪ್ರಕಟಣೆ :
ಕರ್ನಾಟಕ ವಿಧಾನಸಭೆ ಸಚಿವಾಲಯ
ವಿಧಾನಸೌಧ, ಬೆಂಗಳೂರು - 560 001.

## ಮುನ್ನುಡಿ

ರಾಜ್ಯದ ಹಿರಿಯ ಸಂಸದೀಯ ಪಟುಗಳ ಕುರಿತು ಕಿರುಹೊತ್ತಿಗೆಗಳ ಮಾಲಿಕೆಯಡಿಯಲ್ಲಿ ಈ ಹಿಂದೆ ಶ್ರೀ ಕೆ. ಹನುಮಂತಯ್ಯ ಮತ್ತು ಶ್ರೀ ಎಸ್. ನಿಜಲಿಂಗಪ್ಪ ಅವರುಗಳ ಬಗೆಗಿನ ಕಿರುಹೊತ್ತಿಗೆಗಳನ್ನು ಹೊರತರಲಾಗಿದೆ. ಈಗ ಶ್ರೀ ಎಸ್. ಗೋಪಾಲಗೌಡ ಅವರ ಬಗ್ಗೆ ರಚಿತವಾಗಿರುವ ಮೂರನೆಯ ಕಿರುಹೊತ್ತಿಗೆಯಲ್ಲಿ ಶ್ರೀಯುತರು ವಿಧಾನ ಸಭೆಯ ಚರ್ಚೆಯಲ್ಲಿ ಭಾಗವಹಿಸಿ ಪ್ರತಿಪಾದಿಸಿರುವ ಪ್ರಮುಖ ವಿಚಾರಗಳನ್ನು ಇದರಲ್ಲಿ ಸೇರಿಸಲಾಗಿದೆ.

ರಾಜ್ಯದ ರಾಜಕೀಯದಲ್ಲಿ ಉತ್ತುಂಗಕ್ಕೇರಿದ್ದ ಶ್ರೀಯುತರನ್ನು ಕುರಿತು ರಚಿತವಾಗಿರುವ ಈ ಕಿರುಹೊತ್ತಿಗೆಯನ್ನು ನಿರೂಪಿಸಿರುವ ಮೈಸೂರು ವಿಶ್ವವಿದ್ಯಾನಿಲಯದ ಹಿರಿಯ ಪ್ರಾಧ್ಯಾಪಕರುಗಳಾದ ಪ್ರೊ ಎಸ್.ಬಿ. ಪಾಂಣ್ಣಾಯ, ಪ್ರೊ ಹೆಚ್. ಆರ್. ಅಚ್ಯುತರಾವ್ ಮತ್ತು ಪ್ರೊ ಡಿ.ಎಸ್. ಜಯಪ್ಪಗೌಡ ಅವರುಗಳಿಗೂ ಮತ್ತು ಅತ್ಯಾದ್ಯತೆಯ ಮೇರೆಗೆ ಈ ಕಿರುಹೊತ್ತಿಗೆಯನ್ನು ಮುದ್ರಿಸಿದ ಸರ್ಕಾರಿ ಮುದ್ರಣಾಲಯದ ನಿರ್ದೇಶಕರಿಗೂ ಈ ಮೂಲಕ ಧನ್ಯವಾದಗಳನ್ನು ಅರ್ಪಿಸುತ್ತೇವೆ.

ಯಾಕೂಬ್ ಷರೀಫ್
ಕಾರ್ಯದರ್ಶಿ
ಕರ್ನಾಟಕ ವಿಧಾನ ಸಭೆ ಸಚಿವಾಲಯ

ಬೆಂಗಳೂರು
ಮಾರ್ಚ್, 1999

## ಪೀಠಿಕೆ

ಭಾರತ ದೇಶದ ಸ್ವಾಂತ್ರ್ಯ ಸುವರ್ಣ ಮಹೋತ್ಸವವನ್ನು ಆಚರಿಸುತ್ತಿರುವ ಈ ಸಂದರ್ಭದಲ್ಲಿ ದೇಶಕ್ಕಾಗಿ ದುಡಿದ ಸಂಸದೀಯ ಪಟುಗಳಾಗಿ ಮಹತ್ವದ ಕೊಡುಗೆಯನ್ನು ನೀಡಿದಂತಹ ರಾಜ್ಯದ ಹಿರಿಯ ಸಂಸದೀಯ ಪಟುಗಳ ಬಗ್ಗೆ ರಾಜ್ಯದ ಜನತೆ ಮತ್ತು ವಿಧಾನ ಮಂಡಲದ ಸದಸ್ಯರುಗಳಿಗೆ ಪರಿಚಯ ಮಾಡಿಕೊಡುವ ಉದ್ದೇಶದಿಂದ ಗ್ರಂಥಾಲಯ ಉಪ ಸಮಿತಿಯನ್ನು ವಿಧಾನ ಸಭೆಯ ಸದಸ್ಯರಾದ ಶ್ರೀ ಬಿ.ಬಿ. ಶಿವಪ್ಪನವರ ಅಧ್ಯಕ್ಷತೆಯಲ್ಲಿ ರಚಿಸಿ ಸಮಿತಿಗೆ ಈ ಕಾರ್ಯವನ್ನು ವಹಿಸಲಾಯಿತು.

ಈ ಪ್ರತಿಭಾವಂತ ಸಂಸದೀಯ ಪಟುಗಳ ಮಾಲಿಕೆಯಲ್ಲಿನ ರಾಜ್ಯದ ಹಿಂದಿನ ಮಾಜಿ ಮುಖ್ಯಮಂತ್ರಿಗಳಾಗಿದ್ದಂತಹ  ಶ್ರೀ ಕೆ. ಹನುಮಂತಯ್ಯ ಮತ್ತು ಶ್ರೀ ಎಸ್. ನಿಜಲಿಂಗಪ್ಪ ಅವರುಗಳದ್ದಾಗಿರುತ್ತದೆ.

ಈ ಸಾಲಿನಲ್ಲಿ ರಾಜ್ಯದ ಮತ್ತೊರ್ವ ಹಿರಿಯ ಸ್ವಾತಂತ್ರ್ಯ ಹೋರಾಟಗಾರರೂ, ಸಮಾಜವಾಧಿ ಧುರೀಣರೂ ಹಾಗೂ ವಿಧಾನ ಸಭೆಯ ಸದಸ್ಯರಾಗಿ ಸೇವೆ ಸಲ್ಲಿಸಿದ್ದ ಚೈತನ್ಯಶೀಲ ವ್ಯಕ್ತಿ ಶ್ರೀ ಎಸ್. ಗೋಪಾಲ ಗೌಡರ ಬಗೆಗಿನ ಕಿರುಹೊತ್ತಿಗೆಯನ್ನು ಹೊರತರಲಾಗಿದೆ.

ಪ್ರತಿಭಾವಂತ ಸಂಸದೀಯ ಪಟುಗಳ ಬಗೆಗಿನ ಈ ಕಿರುಹೊತ್ತಿಗೆಗಳು ಮಾನ್ಯ ಸದಸ್ಯರುಗಳಿಗೆ, ಸಂಶೋಧಕರಿಗೆ ಹಾಗೂ ಸಾಮಾನ್ಯ ಓದುಗರಿಗೆ ಸಂಸದೀಯ ವಿಷಯಗಳಲ್ಲಿ ಉಪಯುಕ್ತವಾಗುತ್ತವೆಂದು ಭಾವಿಸುತ್ತೇವೆ.

ಡಿ.ಬಿ. ಕಲ್ಮಣ್‌ಕರ್
ಸಭಾಪತಿ
ವಿಧಾನ ಪರಿಷತ್ತು

ರಮೇಶ್ ಕುಮಾರ್
ಅಧ್ಯಕ್ಷ
ವಿಧಾನ ಸಭೆ

# ಅರಿಕೆ

ಕರ್ನಾಟಕ ರಾಜ್ಯದ ವಿಧಾನ ಮಂಡಲ ಸಚಿವಾಲಯದವರು ರಾಜ್ಯದ ಹಿರಿಯ ಪ್ರತಿಭಾವಂತ ಸಂಸದೀಯ ಪಟುಗಳನ್ನು ಕುರಿತು ಹೊರ ತರಲು ಉದ್ದೇಶಿಸಿರುವ ನಿರ್ಧಾರವು ನಿಜಕ್ಕೂ ಶ್ಲಾಘನೀಯವಾದ ಕಾರ್ಯ. ಇದರಿಂದ ಶಾಸಕಾಂಗಗಳಲ್ಲಿ ಈ ಸಂಸದೀಯ ಪಟುಗಳು ಸಲ್ಲಿಸಿದ ಸೇವೆ ಮತ್ತು ಭಾಗವಹಿಸಿದ ನಡವಳಿಕೆಯು ಅವರ ಉತ್ತರಾಧಿಕಾರಿಗಳಿಗೆ ದಾರಿದೀಪಗಳಾಗುವುದರಲ್ಲಿ ಸಂದೇಹವಿಲ್ಲ. ಈ ಯೋಜನೆಯಂತೆ ಶ್ರೀ ಕೆ. ಹನುಮಂತಯ್ಯ, ಶ್ರೀ ಎಸ್. ಗೋಪಾಲಗೌಡ ಮತ್ತು ಶ್ರೀಮತಿ ಕೆ.ಎಸ್. ನಾಗರತ್ನಮ್ಮ ಅವರುಗಳ ಕಿರುಹೊತ್ತಿಗೆಗಳನ್ನು ಸಿದ್ಧಪಡಿಸುವ ಜವಾಬ್ದಾರಿಯನ್ನು ಸಮಿತಿಯು ನಮಗೆ ವಹಿಸಿರುವುದು ಸಂತೋಷದ ಸಂಗತಿಯಾಗಿರುತ್ತದೆ.

ಶ್ರೀ ಎಸ್. ಗೋಪಾಲ ಗೌಡರ ರಾಜಕೀಯ ಹೋರಾಟ, ಸಮಾಜವಾದಿ ಧೋರಣೆಗಳು ಮತ್ತು ರಾಜ್ಯದ ವಿಧಾನ ಸಭೆಯಲ್ಲಿ ವಿವಿಧ ವಿಷಯಗಳ ಬಗ್ಗೆ ಮಾಡಿದ ಚರ್ಚೆ ಇವುಗಳನ್ನು ಕ್ರೋಡೀಕರಿಸಿ ಈ ಒಂದು ಕಿರು ಹೊತ್ತಿಗೆಯಲ್ಲಿ ಅಳವಡಿಸಲಾಗಿರುತ್ತದೆ. ರಾಜ್ಯದ ರಾಜಕೀಯ ಇತಿಹಾಸದಲ್ಲಿ ಗ್ರಾಮೀಣ ಜನರ ಅದರಲ್ಲೂ ರೈತಾಪಿ ಜನಗಳ ಬಗ್ಗೆ ಅವರಿಗಿದ್ದ ಸಾಮಾಜಿಕ ಕಳಕಳಿ ಅವಿಸ್ಮರಣೀಯವಾದುದು. ಅವರು ಉತ್ತಮ ವಾಗ್ಮಿಯೂ ವಿಚಾರವಂತರೂ ಆಗಿದ್ದರು. ಈ ಕಿರುಹೊತ್ತಿಗೆಯಲ್ಲಿ ಅಡಕವಾಗಿರುವ ವಿಷಯಗಳು ಮಾನ್ಯ ಶಾಸಕರುಗಳಿಗೆ ಮತ್ತು ಸಾಮಾನ್ಯ ಓದುಗರಿಗೆ ಉಪಯುಕ್ತವಾದರೆ ನಮ್ಮ ಶ್ರಮ ಸಾರ್ಥಕವಾಯಿತೆಂದು ಭಾವಿಸುತ್ತೇವೆ.

ಈ ಹೊತ್ತಿಗೆಯನ್ನು ರಚಿಸಲು ಸಾಕಷ್ಟು ಸ್ವಾತಂತ್ರ್ಯ ನೀಡಿದ ಕರ್ನಾಟಕ ವಿಧಾನ ಮಂಡಲದ ಗ್ರಂಥಾಲಯ ಉಪಸಮಿತಿಗೆ ನಾವು ಕೃತಜ್ಞರಾಗಿದ್ದೇವೆ. ಈ ಕಾರ್ಯದಲ್ಲಿ ನಮಗೆ ಪ್ರೋತ್ಸಾಹ ನೀಡಿದ ಮೈಸೂರು ವಿಶ್ವವಿದ್ಯಾನಿಲಯದ ಸನ್ಮಾನ್ಯ ಕುಲಪತಿಗಳಾದ ಪ್ರೊ. ಎಸ್.ಎನ್. ಹೆಗ್ಗಡೆ ಅವರಿಗೂ ನಾವು ಚಿರಋಣಿಗಳಾಗಿದ್ದೇವೆ.

ಪ್ರೊ. ಎನ್.ಬಿ. ಪಾಂಗಣ್ಣಾಯ
ಪ್ರೊ. ಎನ್.ಆರ್. ಅಚ್ಯುತರಾವ್
ಪ್ರೊ. ಡಿ.ಎನ್. ಜಯಪ್ಪಗೌಡ

ಮೈಸೂರು.
ದಿನಾಂಕ 22.3.1999

ಪ್ರತಿಭಾವಂತ ಸಂಸದೀಯ ಪಟುಗಳ ಬದುಕು ಬರಹ ಮಾಲಿಕೆ

# ಶ್ರೀ ಶಾಂತವೇರಿ ಗೋಪಾಲ ಗೌಡ

ಪರಿವಿಡಿ

## ಭಾಗ - 1

## ಎಸ್.ಗೋಪಾಲಗೌಡರ ಜೀವನ ಪರಿಚಯ

ಎಸ್.ಗೋಪಾಲಗೌಡರು ಅಂದರೆ ಶಾಂತವೇರಿ ಗೋಪಾಲಗೌಡರು ಕರ್ನಾಟಕ ಕಂಡ ಜನಪ್ರಿಯ ಸಂಸದೀಯ ಪಟುಗಳಲ್ಲಿ ಅಗ್ರಗಣ್ಯರು. ಹಾಗೂ ಒಂದು ರೀತಿಯಲ್ಲಿ ಅದೃಷ್ಟವಂತರೂ ಹೌದು. ಬಹುಶಃ ಅವರ ಸಂಸದೀಯ ಚಟುವಟಿಕೆಗಳು ಪುಸ್ತಕ ರೂಪದಲ್ಲಿ ಪ್ರಕಟವಾಗಿರುವಷ್ಟು ಇನ್ನೊಬ್ಬರದು ಅದಂತಿಲ್ಲ. ಆದ್ದರಿಂದ ಈಗಾಗಲೇ ಸಾದರಪಟ್ಟಿರುವ ವಿವರಗಳ ಬೆಳಕಿನಲ್ಲಿ ಅವರ ಜೀವನ ಮತ್ತು ಸಾಧನೆಯ ಮುಖಗಳನ್ನು ಗುರುತಿಸಬಹುದು.

### ಬಾಲ್ಯ ಮತ್ತು ಶಿಕ್ಷಣ :

ಶಾಂತವೇರಿ ಗೋಪಾಲಗೌಡರು 1923ರ ಮಾರ್ಚ್ 14 ರಂದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಅರಗ ಗ್ರಾಮದಲ್ಲಿ ಹುಟ್ಟಿದರು. ಗೋಪಾಲಗೌಡರ ಮನೆಗೆ ಶಾಂತವೇರಿಯವರ ಮನೆ ಎಂದು ಹೆಸರಿದ್ದು ಕ್ರಮೇಣ ಅವರ ವಂಶಸ್ಥರ ಮನೆಗಳ ಸ್ಥಳ ಶಾಂತವೇರಿ ಎಂದು ಕರೆಯಲ್ಪಟ್ಟಿತು. ಇದರಿಂದ ಗೋಪಾಲಗೌಡರೂ ಮುಂದೆ ಶಾಂತವೇರಿ ಗೋಪಾಲಗೌಡರೆಂದು ಪರಿಚಿತರಾದರು. ಗೋಪಾಲಗೌಡರೇ ನಂಬಿದ್ದಂತೆ ಆ ಮನೆಗೆ ಆ ಹೆಸರು ಬರಲು ಚಿಕ್ಕಮಗಳೂರು ಜಿಲ್ಲೆಯ ತರೀಕೆರೆ ತಾಲ್ಲೂಕಿನ ಶಾಂತವೇರಿ ಎಂಬ ಊರಿನಿಂದ ಅವರ ಹಿರಿಯರು ಇಲ್ಲಿ ಬಂದು ನೆಲಸಿದ್ದೇ ಕಾರಣ.

ಗೋಪಾಲಗೌಡರದು ಸುಸಂಸ್ಕೃತ ದರ್ಪಿಷ್ಟ ಸಂಸ್ಕೃತಿಯ ಮನೆತನ. ಅರಗ ವಿಜಯ ನಗರದ ಕಾಲದಲ್ಲಿ ಒಂದು ಪ್ರಾಂತರ ಕೇಂದ್ರ ಸ್ಥಳವಾಗಿತ್ತು. ಗೌಡರ ತಾಯಿಯ ಕಡೆಯವರು ತರೀಕೆರೆ ಪಾಳೆಯಗಾರರಲ್ಲಿ ಮತ್ತು ಬಿದನೂರು ನಾಯಕರಲ್ಲಿ ಸೈನ್ಯಾಧಿಕಾರಿಗಳಾಗಿದ್ದ ಮನೆತನಕ್ಕೆ ಸೇರಿದವರು. ಈ ಶತಮಾನದ ಪ್ರಾರಂಭಕ್ಕೆ ದೊಡ್ಡಭೂಮಿಕಾಣಿ ಇದ್ದ ಕುಟುಂಬ ಗೌಡರದು. ಆದರೆ ಅವರ ದೊಡ್ಡಪ್ಪನವರ ಅಸಮರ್ಪಕ ವ್ಯವಹಾರ ನಿರ್ವಹಣೆಯಿಂದಾಗಿ ಹಾಗೂ ಅಂದು ವ್ಯವಸಾಯ ವೃತ್ತಿಗೆ ಇದ್ದ ಕ್ಷೀಣ ಆರ್ಥಿಕ ಸ್ಥಿತಿಯಿಂದಾಗಿ ಈ ಮನೆ ಹಣಕಾಸಿನ ಬಿಕ್ಕಟ್ಟಿನಲ್ಲಿ ಸಿಲುಕಿಕೊಂಡಿತು. ಅಂತಿಮವಾಗಿ 1912ರಲ್ಲಿ ಗೋಪಾಲಗೌಡರ ತಂದೆ ಕೊಲ್ಲೂರಯ್ಯಗೌಡರು ಮತ್ತು ತಾಯಿ ಶೇಷಮ್ಮ ಅವಿಭಕ್ತ ಕುಟುಂಬದಿಂದ ಬೇರೆಯಾದರು. ಆದರೆ ಕಾನೂನುಗಳ ಬಗ್ಗೆ ಮುಗ್ಧವಾಗಿದ್ದ ಅವರು ಆಸ್ತಿ ಖಾತೆ ಮಾಡಿಸಲು ಸಾಧ್ಯವಾಗದೆ ತಮ್ಮ ಅಣ್ಣ ಮಾಡಿದ್ದ ಹಾಗೂ ಇವರ ಪಾಲಿಗೆ ಬರದಿದ್ದ ಸಾಲಕ್ಕೂ ಇವರೇ ಹೊಣೆಗಾರರಾದರು. ಜೊತೆಗೆ ಇವರ ಅವ್ಯವಸ್ಥಿತ ನಿರ್ವಹಣೆಯೂ ಕಾರಣವಾಗಿ 1923ರಲ್ಲಿ ಗೋಪಾಲಗೌಡರು ಹುಟ್ಟುವ ಕಾಲಕ್ಕೆ ಕುಟುಂಬದ ಆಸ್ತಿ ಕೈಬಿಟ್ಟುಹೋಯಿತು. ಕೊಲ್ಲೂರಯ್ಯಗೌಡರು ಅಂಚೆ ಪೇದೆಯಾಗಿ ಕೆಲಸಕ್ಕೆ ಸೇರಿ ಕೊಂಡರು. ಆಗ ಈ ದಂಪತಿಗಳಿಗೆ ಗೋಪಾಲಗೌಡರಲ್ಲದೆ ಅಣ್ಣ ಧರ್ಮಯ್ಯಗೌಡ ಮತ್ತು ಅಕ್ಕ ಸಿದ್ಧಮ್ಮ ಸೇರಿ ಒಟ್ಟು ಮೂವರು ಮಕ್ಕಳು.

ಕುಟುಂಬವೇನೋ ಚಿಕ್ಕದು. ಆದರೆ ಬಡತನ ಅವರ ಜೀವನವನ್ನು ಸುಗಮಗೊಳಿಸಲಿಲ್ಲ. ಅವರು ಗೇಣಿದಾರರ ಕುಟುಂಬದ ಪಾಲಿಗೆ ಸೇರಿದರು. ಗೌಡರ ಪ್ರಾಥಮಿಕ ಮತ್ತು ಮಾಧ್ಯಮಿಕ ಶಿಕ್ಷಣಗಳು ಅರಗದಲ್ಲೇ ನಡೆದವು. ಅಕ್ಷರಸ್ಥರಾಗಿದ್ದ ಮತ್ತು ಅರೆ ಸರ್ಕಾರಿ ನೌಕರರಾಗಿದ್ದ ತಂದೆ ತಮ್ಮ ಮಕ್ಕಳಿಗೆ ವಿದ್ಯೆ ಕಲಿಸುವಲ್ಲಿ ಹಿಂದೆ ಬೀಳಲಿಲ್ಲ. ಇದು ಅವರ ದೂರದೃಷ್ಟಿಗೂ ಸಾಕ್ಷಿ. ಇದರ ಫಲವಾಗಿ ಹಿರಿಯ ಮಗ ಧರ್ಮಯ್ಯಗೌಡರು ಓದಿ ರೆವಿನ್ಯೂ ಇನ್ಸ್‌ಪೆಕ್ಟರ್ ಕೆಲಸಕ್ಕೆ ಸೇರಿದರು. ಅಣ್ಣನೊಂದಿಗಿದ್ದು ಶಿಕಾರಿಪುರದಲ್ಲಿ ಗೌಡರು ಲೋಯರ್ ಸೆಕೆಂಡರಿ ಪರೀಕ್ಷೆ ಮುಗಿಸಿದರು.

1914ರಲ್ಲಿ ತೀರ್ಥಹಳ್ಳಿಯ ಸರ್ಕಾರಿ ಪ್ರೌಢಶಾಲೆಯಲ್ಲಿ ಅವರ ವಿದ್ಯಾಭ್ಯಾಸ ಮುಂದುವರಿಯಿತು. ಅಷ್ಟೊತ್ತಿಗೆ ಭುಗಿಲೆದ್ದಿದ್ದ ಸ್ವಾತಂತ್ರ್ಯ ಚಳವಳಿ ಗೌಡರನ್ನು ಆಕರ್ಷಿಸಿತು. ಎಳೆಯತನದಿಂದಲೂ ದಿಟ್ಟತೆ, ಕಷ್ಟಸಹಿಷ್ಣುತೆ ಮತ್ತು ಪರೋಪಕಾರಿ ಗುಣಗಳನ್ನು ಮೈಗೂಡಿಸಿಕೊಂಡಿದ್ದ ಗೋಪಾಲಗೌಡರು ಸ್ವಾತಂತ್ರ್ಯ ಚಳವಳಿಯಲ್ಲಿ ಸಕ್ರಿಯವಾಗಿ ಭಾಗವಹಿಸಿದರು. ಅಂಚೆ ಡಬ್ಬಗಳನ್ನು ಕೀಳುವುದು, ಟೆಲಿಗ್ರಾಂ ತಂತಿ ಕತ್ತರಿಸುವುದು ಮೊದಲಾದ ಕಾರ್ಯಕ್ರಮಗಳಲ್ಲಿ ಪಾಲ್ಗೊಂಡರು. 1942ರಲ್ಲಿ ಅವರು ಎಸ್.ಎಸ್.ಎಲ್.ಸಿ ಓದುತ್ತಿದ್ದಾಗ ಕ್ವಿಟ್ ಇಂಡಿಯಾ ಚಳವಳಿ ಧುತ್ತನೆ ಬಂದಿತು. ಅದಕ್ಕೆ ಸಮನಾಗಿ ಸ್ಪಂದಿಸಿದ ಗೌಡರು ರಾಜಕೀಯ ಆಂದೋಲನದಲ್ಲಿ ನೇರವಾಗಿ ಧುಮುಕಿದರು. ತೀರ್ಥಹಳ್ಳಿಯ ಶ್ರೀರಾಮ ಮಂದಿರದಲ್ಲಿ ಮೊದಲ ರಾಜಕೀಯ ಭಾಷಣ ಮಾಡಿ ಸರ್ಕಾರದ ದಮನಕಾರಿ ನೀತಿನಿಯಮಗಳನ್ನು ಖಂಡಿಸಿದರು. ಮುಂದೆ ಅದೇ ನವೆಂಬರ್‌ನಲ್ಲಿ ಟೆಲಿಗ್ರಾಫ್ ತಂತಿ ಕತ್ತಿರಿಸಿದ ಅಪಾದನೆಯ ಮೇಲೆ ದಸ್ತಗಿರಿಯಾಗಿ ಶಿವಮೊಗ್ಗದಲ್ಲಿ ಸೆರೆವಾಸ ಆಗ ಅವರಿಗೆ ಅಲ್ಲಿ ಗೋರೂರು ರಾಮಸ್ವಾಮಿ ಅಯ್ಯಂಗಾರ್, ಕೆ.ಟಿ. ಭಾಷ್ಯಂ, ಟಿ.ಮರಿಯಪ್ಪ, ಎಚ್.ಸಿದ್ದಯ್ಯ ಮೊದಲಾದ ಧುರೀಣರ ಪರಿಚಯವಾಯಿತು.

1944ರಲ್ಲಿ ಅವರ ಫ್ರೌಢಶಾಲಾ ವಿದ್ಯಾಭ್ಯಾಸ ಮುಗಿಯಿತು. ಅದೇ ವರ್ಷದ ಶಿವಮೊಗ್ಗದಲ್ಲಿ ಇಂಟರ್‌ಮೀಡಿಯಟ್ ಕಾಲೇಜು ಸೇರಿದರು. ಬಡತನದಲ್ಲಿ ಓದು ವಿದ್ಯಾಭ್ಯಾಸ ಮುಂದುವರಿಯಿತು. ಆದರೆ ಗೋಪಾಲಗೌಡರಿಗೆ ಆ ಅವಧಿ ಅವರ ಜೀವನದ ದಿಕ್ಕುದೆಸೆಗಳನ್ನು ಬದಲಿಸಿದ ಮಹತ್ವದ ಕಾಲ. ಅವರು ಮುಂದೆ ದೇಶಕ್ಕೆ ಸ್ವಾತಂತ್ರ್ಯ ಬರುವವರೆಗೂ ಎಡೆಬಿಡದೆ ಸಾರ್ವಜನಿಕ ಚಟುವಟಿಕೆಗಳಲ್ಲಿ ಪಾಲ್ಗೊಂಡಿದ್ದರಿಂದ ಅವರ ವಿದ್ಯಾಭ್ಯಾಸ ಹೆಚ್ಚು ಮುಂದುವರಿಯಲಿಲ್ಲ, ಜೀವನ ಶಾಲೆಯೇ ಅವರಿಗೆ ಬಹಳಷ್ಟು ಕಲಿಸಿತು.

**ಪರಿಸರ :**

ಗೋಪಾಲಗೌಡರು ಹುಟ್ಟಿ ಬೆಳೆದ ಪ್ರಾಂತ ವಿಶಿಷ್ಟ ಸಾಮಾಜಿಕ ಸನ್ನಿವೇಶವನ್ನು ಹೊಂದಿದ್ದಿತು. ತುಂಗಾ ನದಿಯ ತಟದಿಂದ ಉತ್ತರದ ಶರಾವತಿ ನದಿಯ ಬಯಲಿನುದ್ದಕ್ಕೂ ಹಬ್ಬಿದ ಘಟ್ಟ ಪ್ರದೇಶದಲ್ಲಿ ಅಪಾರ ತರೀ ಜಮೀನಿದ್ದಿತು. ಈ ಜಮೀನಿನಲ್ಲಿ ಗೇಣಿ



ಒಕ್ಕಲಾಗಿ ದುಡಿಯುತ್ತಿದ್ದವರು ಹೆಚ್ಚಾಗಿ ದೀವರ ರೈತರು, ಒಕ್ಕಲಿಗ ರೈತರು ಮತ್ತು ಹರಿಜನರು, ಭೂಮಾಲೀಕರಲ್ಲಿ ಬ್ರಾಹ್ಮಣರು, ಹವ್ಯಕರು, ಒಕ್ಕಲಿಗರು ಮತ್ತು ವೀರಶೈವರು ಅಧಿಕವಾಗಿದ್ದರು. ಈ ಭೂಮಾಲೀಕ ವರ್ಗಕ್ಕೂ ಗೇಣಿದಾರರಿಗೂ ಮಲೆನಾಡಿನ ಇತರ ಭಾಗದಲ್ಲಿ ಹಾಗೂ ಕರ್ನಾಟಕದ ಬಯಲು ಸೀಮೆಯಲ್ಲಿ ಕಂಡುಬರದಿದ್ದ ಜಟಿಲವಾದ ಸಂಬಂಧವಿದ್ದಿತು. ಕೆಳವರ್ಗದವರಲ್ಲಿ ಜಮೀನ್ದಾರಿ ವರ್ಗಕ್ಕೆ ಸೇರಿದ ಒಕ್ಕಲಿಗ ಕೆಟ್ಟ ಗೇಣಿದಾರನಾದನೆಂದರೆ ಅತನನ್ನು ಕೀಳಾಗಿ ಕಾಣಲಾಗುತ್ತಿದ್ದಿತು. ಅವನ ಸಾಮಾಜಿಕ ಸ್ಥಾನಮಾನ ಕುಸಿಯುತ್ತಿದ್ದಿತು. ಈ ಗೇಣಿದಾರ ಹಿನ್ನೆಲೆಯಲ್ಲಿ ಆ ಪ್ರಾಂತದಿಂದ ಬಂದಿದ್ದ ರಾಜಕಾರಣಿಗಳಾದ ಕಡಿದಾಳ್ ಮಂಜಪ್ಪನವರು ಮತ್ತು ಶಾಂತವೇರಿ ಗೋಪಾಲಗೌಡರು ಸಾಕಷ್ಟು ನೋವುಂಡರು, ಅವಮಾನ ಅನುಭವಿಸಿದರು. ಕಡಿದಾಳರು 'ನನಸಾಗದ ಕನಸು' ಎಂಬ ತಮ್ಮ ಆತ್ಮಚರಿತ್ರೆಯಲ್ಲಿ ಒಂದೆಡೆ "ದೇವರಿದ್ದಾನೆಯೇ? ದೇವರಿದ್ದಿದ್ದರೆ ನಮ್ಮ ತಂದೆಯಂತಹ ಸತ್ಯಸಂಧರು ಯಾಕೆ ಬಡತನದ ಬವಣೆಯಲ್ಲಿ ಸಿಲುಕಿ ಬಳಲುತ್ತಿದ್ದರು? ಅಸತ್ಯವಂತರೂ ಅಪ್ರಾಮಾಣಿಕರೂ ಯಾಕೆ ಅಗರ್ಭ ಶ್ರೀಮಂತರಾಗಿ ಮೆರೆಯುತ್ತಾರೆ? ಇವೇ ಮುಂತಾದ ಪ್ರಶ್ನೆಗಳು 'ಆಗಾಗ ಕಾಡುತ್ತಿದ್ದವು" ಎಂದು ಹೇಳಿದ್ದಾರೆ. ಇಂತಹ ಮನಃಸ್ಥಿತಿಯೇ ಗೋಪಾಲಗೌಡರದೂ ಆಗಿದ್ದಿತು. ಇವರಿಬ್ಬರೂ ಮುಂದೆ ಈ ನೆಲ ದೇಶಕ್ಕೆ ನೀಡಿದ ಅನರ್ಘ್ಯ ರಾಷ್ಟ್ರಧುರೀಣರಾದುದು ಇತಿಹಾಸ. ಗೇಣಿದಾರರಾಗುವುದು ಕಡುಕಷ್ಟದ ಜೀವನಸ್ಥಿತಿಯಾಗಿದ್ದಿತು. ಅವರು ದಣಿಗಳು ನಿಗದಿಪಡಿಸಿದ ಭತ್ತವನ್ನು ಗೇಣಿಕೊಟ್ಟು ಉಳಿದುದರಲ್ಲಿ ತಮ್ಮ ವ್ಯವಸಾಯದ ಖರ್ಚನ್ನು ಭರಿಸಿಕೊಂಡು ಮಿಕ್ಕಿದ್ದರಲ್ಲಿ ಜೀವನ ಸಾಗಿಸಬೇಕಿತ್ತು.

ಎಸ್.ಗೋಪಾಲಗೌಡರ ಯುವ ದಿನಗಳು ವಿಶಿಷ್ಟವಾಗಿದ್ದವು. ಅವರು ಪುರೋಹಿತ ಶಾಹಿಯನ್ನು, ಜಮೀನ್ದಾರಿ ಪಾಳೆಗಾರಿಕೆಯನ್ನು, ಕಂದಾಚಾರಫಲನ್ನು ವಿರೋಧಿಸುತ್ತಿದ್ದರು. ಆದರೇ ಅದೇ ವೇಳೆಗೆ ಸಮಾಜದ ಎಲ್ಲ ವರ್ಗಗಳ ಸಜ್ಜನರೊಂದಿಗೆ ವಿಚಾರವಂತರೊಂದಿಗೆ, ಸಮಾನ ಮನಸ್ಕರೊಂದಿಗೆ ಸಖ್ಯ ಬೆಳೆಸುತ್ತಿದ್ದರು ಮತ್ತು ಒಡನಾಡುತ್ತಿದ್ದರು. ಇದರ ಪರಿಣಾಮವಾಗಿ ಬಸವರಾಜಶಾಸ್ತ್ರಿಗಳು ಮತ್ತಿತರ ಬ್ರಾಹ್ಮಣ ಸಹಚಾರರು ಅವರ ಜೀವನದ ಮೇಲೆ ಬಹಳಷ್ಟು ಪರಿಣಾಮ ಬೀರಿದರು. ಒಕ್ಕಲಿಗೆ ಒಡನಾಡಿಗಳು ಈ ಯುವಕನ ವಿಚಾರಶಕ್ತಿಗೆ ಬೆರಗಾದರು. ದುರ್ಬಲ ವರ್ಗದವರು ಈ ಹುಡುಗ ತಮ್ಮ ಬಗ್ಗೆ ತೋರಿಸುತ್ತಿದ್ದ ಪ್ರೀತಿ ಮತ್ತು ಸಹಾನುಭೂತಿಗೆ ಕೃತಜ್ಞರಾದರು. ಅಂದರೆ ಜನರ ಪ್ರೀತಿಯೇ ಇವರ ಜೀವಸತ್ವವಾಯಿತು. ಅವರು ಓದಿಗೆ ಶರಣು ಹೇಳಿ ಸಾರ್ವಜನಿಕ ಕಾರ್ಯಗಳಲ್ಲಿ ತಮ್ಮನ್ನು ತೊಡಗಿಸಿಕೊಂಡರು. ಇಂತಹ ಪರಿಸ್ಥಿತಿಯಲ್ಲಿ ಗೋಪಲಗೌಡರು ಕೆಲಕಾಲ ಉಪಾಧ್ಯಾಯರಾಗಿ ಕೆಲಸ ಮಾಡಿದರು. ಸೇವಾ ಕರ್ತರನ್ನು ಕಟ್ಟಿಕೊಂಡು "ವಯಸ್ಕರ ರಾತ್ರಿ ಶಾಲೆ ನೆಡಸುವುದು, ಖಾದಿ ನೂಲುತೆಗೆಯುವುದು, ಸ್ವಾತಂತ್ರ್ಯ ಹೋರಾಟದ ಬಗ್ಗೆ ಮಾರ್ಗೋಪಾಯಗಳನ್ನು ಕಂಡುಕೊಳ್ಳುವುದು, ಜನರಿಗೆ ರಾಮಾಯಣ ಮಹಾಭಾರತಗಳನ್ನು ಓದಿ ಆ ಬಗ್ಗೆ ವಿವರಿಸುವುದು" ಮುಂತಾದ ಕಾರ್ಯಗಳನ್ನು

ಹಮ್ಮಿಕೊಂಡರು. ಇದರಿಂದಾಗಿ ಅವರಿಗೆ ಭಾರತೀಯ ಸಂಸ್ಕೃತಿಯಲ್ಲಿ ಒಳಿತನ್ನು ಹೀರಿಕೊಳ್ಳಲು, ಕೆಡಕನ್ನು ಉಗಿಯಲು ಸಾಧ್ಯವಾಯಿತು. ಅವರೊಬ್ಬ ಅಪ್ಪಟ ಅಹಿಂಸಾತ್ಮಕ ಕ್ರಾಂತಿಕಾರಿಯಾಗಿ ರೂಪುಗೊಳ್ಳತೊಡಗಿದರು. ಬಡವರ ಬಗ್ಗೆ ಕಾಳಜಿ, ಶೋಷಿತರ ಬಗ್ಗೆ ಜಿಗುಪ್ಸೆ, ಸತ್ಯ ಹೇಳಲು ಧೈರ್ಯ, ನಿಸ್ವಾರ್ಥ ಸೇವೆ, ಒಳ್ಳೆಯ ಗುರಿಸಾಧನೆಯಾಗಿ ತ್ಯಾಗ ಮತ್ತು ಹೋರಾಟದ ನಿರ್ಧಾರ ಶಕ್ತಿ ಅವರಲ್ಲಿ ಮನೆಮಾಡಿದವು. ಮುಂದು ಎಂದೂ ಅವರು ಈ ತತ್ವಗಳಿಂದ ವಿಚಲಿತರಾಗಲಿಲ್ಲ.

**ರಾಜಕೀಯ ನೆಲೆ.**

ಭಾರತದ ಸ್ವಾತಂತ್ರ್ಯ ಹೋರಾಟ ಕಾಂಗ್ರೆಸ್ ಪಕ್ಷದೊಂದಿಗೆ ಪ್ರಾರಂಭವಾಗಿ ಅದರ ಸಾರಥ್ಯದಲ್ಲೇ ಮುಗಿಯಿತು. ಕಾಂಗ್ರೆಸ್ ಪಕ್ಷ ಹೊಂದಿದ್ದ ಅಪಾರ ಜನಪ್ರಿಯತೆ ಅದಕ್ಕೆ ಎದುರಾಳಿಯೇ ಇಲ್ಲದಂತಹ ಪರಿಸ್ಥಿತಿಯನ್ನು ಸೃಷ್ಟಿಸಿತ್ತು. ಕಾಂಗ್ರೆಸ್‌ನಲ್ಲಿ ಬಂಡವಾಳಷಾಹಿಗಳು ಜಮೀನ್ದಾರರು, ಶ್ರೀಮಂತರು, ದಲಿತ ದುರ್ಬಲರು ಎಲ್ಲರೂ ಸೇರುವಂತಾದುದು ಮಹಾತ್ಮಗಾಂಧೀಜಿ ಮತ್ತಿತರ ಉದಾತ್ತ ನಾಯಕರ ವ್ಯಕ್ತಿತ್ವದಿಂದಾಗಿ. ಆದರೇ ದೇಶಕ್ಕೆ ಸ್ವಾತಂತ್ರ್ಯ ಬರುವ ದಿನಗಳು ಹತ್ತಿರವಾದಂತೆ ಈ ಪ್ರತಿಯೊಂದು ವರ್ಗವೂ ತನ್ನ ಹಿತಾಸಕ್ತಿಯನ್ನು ರಕ್ಷಿಸಿಕೊಳ್ಳಲು ಹವಣಿಸುತ್ತಿತ್ತು. ಈ ವಿದ್ಯಮಾನಗಳಿಂದ ದೂರದಲ್ಲಿ ನಿಂತ ಬಲವಂತದ ಮಾರ್ಗದಿಂದ ಅಧಿಕಾರ ಹಿಡಿದು ರೈತ, ಕಾರ್ಮಿಕರ ಸರ್ಕಾರ ಸ್ಥಾಪಿಸುವ ಸಿದ್ಧಾಂತ ಹೊಂದಿದ್ದವರು ಕಮ್ಯೂನಿಷ್ಟರು. ಅವರು ರಷ್ಯಾದಲ್ಲಿ 1917ರಲ್ಲಿ ನಡೆದ ಮಹಾಕ್ರಾಂತಿಯ ಯಶಸ್ಸಿನಿಂದ ಉತ್ಸಾಹಿತರಾಗಿದ್ದರು. ಆದರೆ ಭಾರತದ ಸಂಸತಿಗೆ ಸಾಮಾಜಿಕ ವ್ಯವಸ್ಥೆಗೆ ಮತ್ತು ಗಾಂಧೀಜಿಯವರು ಮೂಡಿಸಿದ್ದ ನೈತಿಕ ಪ್ರಜ್ಞೆಗೆ ಈ ಕಮ್ಯೂನಿಷ್ಟ್ ಸಿದ್ಧಾಂತ ಹೊಂದುವಂತಿರಲಿಲ್ಲ. ಅದು ಜನಾದರಣೆಗಳಿಸುವ ಸಂಭವ ಕಡಿಮೆ ಇತ್ತು.

ಈ ಪರಿಸ್ಥಿತಿಯಲ್ಲಿ ಜನಸಾಮಾನ್ಯರ ಸ್ಥಿತಿಗತಿಯ ಬಗ್ಗೆ ಮತ್ತು ಜೀವನಸ್ಥಿತಿಯಲ್ಲಿ ಸಮಾನತೆಯನ್ನು ತರುವ ಬಗ್ಗೆ ಕಳಕಳಿಹೊಂದಿದ್ದ ದೊಡ್ಡದೊಂದು ಗುಂಪು ಕಾಂಗ್ರೆಸ್ ಪಕ್ಷದಲ್ಲಿ ಇದ್ದಿತು. ಅದು 1930 ರ ದಶಕದಲ್ಲಿ ಕಾಂಗ್ರೆಸ್‌ನ ಸಮಾಜವಾದಿ ಗುಂಪೆಂದು ತನ್ನನ್ನು ಗುರುತಿಸಿಕೊಂಡಿತು. 1940ರ ದಶಕದಲ್ಲಿ ಈ ಗುಂಪು ಸ್ವಾತಂತ್ರ್ಯ ಹೋರಾಟದಲ್ಲಿ ಭಾಗವಹಿಸುವುದರ ಜೊತೆ ಜೊತೆಗೆ ತನ್ನ ಮುಂದಿನ ರಾಜಕೀಯ ಕಾರ್ಯತಂತ್ರದ ಬಗ್ಗೆಯೂ ಚಿಂತಿಸಿತು. ಶಾಂತವೇರಿ ಗೋಪಾಲಗೌಡರು ಈ ಸಮಾಜವಾದಿ ಗುಂಪಿನಲ್ಲಿ ತಮ್ಮ ರಾಜಕೀಯ ನೆಲೆಯನ್ನು ಗುರುತಿಸಿಕೊಂಡರು. 1946ರಲ್ಲಿ ನಂಜನಗೂಡಿನಲ್ಲಿ ವಿದ್ಯಾರ್ಥಿ ಕಾಂಗ್ರೆಸ್ಸ್‌ನ ಸಮಾವೇಶ ನಡೆಯಿತು. ಅದು 'ಕಾಂಗ್ರೆಸ್ - ಸೋಷಿಯಲಿಸ್ಟರ' ಒಂದು ಅಂಗವಾಗಿ ಕೆಲಸ ಮಾಡುತ್ತಿತ್ತು. ಗೌಡರು ಆ ಸಮಾವೇಶದಲ್ಲಿ ಸಕ್ರಿಯ ಪಾತ್ರವಹಿಸಿದರು. 1947ರಲ್ಲಿ ಗೋಪಾಲಗೌಡರು ಶಿವಮೊಗ್ಗದಲ್ಲೇ ವಿದ್ಯಾರ್ಥಿ ಕಾಂಗ್ರೆಸ್ ಸಮಾವೇಶವನ್ನು ಜರುಗಿಸುವಲ್ಲಿ ಪ್ರಮುಖ ಪಾತ್ರವಹಿಸಿದರು. ಆ ಸಮಾರಂಭದಲ್ಲಿ ಲೋಕನಾಯಕ



ಜಯಪ್ರಕಾಶ್‌ನಾರಾಯಣ್ ಮತ್ತು ಕಮಲಾದೇವಿ ಚಟ್ಟೋಪಾಧ್ಯಾಯ ಮೊದಲಾದವರು ಭಾಗವಹಿಸಿದ್ದರು. ಈ ಅವಧಿಯಲ್ಲೇ ಗೌಡರು ಮೈಸೂರಿನಲ್ಲಿ ಜವಾಬ್ದಾರಿ ಸರ್ಕಾರ ಸ್ಥಾಪಿಸಲು ನಡೆದ ಚಳವಳಿಯಲ್ಲಿ ಹೋರಾಟ ನಡೆಸಿ ಬಂಧನಕ್ಕೊಳಗಾದರು.

ಗೌಡರು ಭೂಗತ ಚಟುವಟಿಕೆಗಳಲ್ಲೂ ಅಪ್ರತಿಮರಾಗಿದ್ದು ಅವರು ಮಾರುವೇಶದಲ್ಲಿ ಬಂದು ಜನರನ್ನು ಉದ್ದೇಶಿಸಿ ಭಾಷಣಗಳನ್ನು ಮಾಡಿ ಪೊಲೀಸರನ್ನು ಯಾಮಾರಿಸುತ್ತಿದ್ದರು. ಅವರ ವಿವರಣಾತ್ಮಕವೂ ವಿಚಾರಪ್ರದವೂ ಆದ ಭಾಷಣಗಳು ಅವರನ್ನು ಮನೆಮಾತಾಗಿಸಿದವು. ಗೌಡರ ವ್ಯಕ್ತಿ ವಿಶೇಷವೇಂದರೆ ಕಡುಬಡವರಿಗಾಗಿ, ರೈತರಿಗಾಗಿ ಮಿಡಿಯುತ್ತಿದ್ದ ಅವರ ಮನಸ್ಸು ಅಷ್ಟೇ ವ್ಯಾಮೋಹದಿಂದ ಕಲಾವಿದರು, ಬುದ್ಧಿಜೀವಿಗಳು, ಸಾಹಿತಿಗಳು, ಮೊದಲಾದ ಭಿನ್ನ ಸಾಂಸ್ಕೃತಿಕ ಸ್ತರದ ವ್ಯಕ್ತಿಗಳತ್ತಲೂ ಸ್ನೇಹಹಸ್ತ ಚಾಚುತ್ತಿತ್ತು. ಇದರಿಂದ ಅವರು ಬಹುಬೇಗ ಸಾರ್ವಜನಿಕರಗೆ ಕೇಂದ್ರಬಿಂದುವಾದರು.

1948ರಲ್ಲಿ ರಾಷ್ಟ್ರೀಯ ಕಾಂಗ್ರೆಸ್‌ನಿಂದ ಸಮಾಜವಾದಿಗಳ ಗುಂಪು ಹೊರಬಂದು ಸಮಾಜವಾದಿ ಪಕ್ಷದ ರಚನೆ ಮಾಡಿತು. ಆಗ ಗೋಪಾಲಗೌಡರು ಕರ್ನಾಟಕದಲ್ಲಿ ಆ ಪಕ್ಷವನ್ನು ಸಂಘಟಿಸುವ ನೇತಾರರಾದರು. ಶಿವಮೊಗ್ಗದಲ್ಲಿ ಕರ್ನಾಟಕ ರಾಜ್ಯ ಸಮಾಜವಾದಿ ಪಕ್ಷದ ಪ್ರಥಮ ಸಮಾವೇಶದ ಸಂಘಟನೆ ಮಾಡಿದರು. ಅಶೋಕ ಮೆಹತಾ ಅವರು ಈ ಸಮಾವೇಶವನ್ನು ಉದ್ಘಾಟಿಸಿದರು. ಗೋಪಾಲಗೌಡರು, ಜಿ.ಸದಾಶಿವರಾವ್, ವೈ.ಆರ್.ಪರಮೇಶ್ವರಪ್ಪ, ಎನ್.ಕೆ.ಸೀತಾರಾಮ್, ಅಯ್ಯಂಗಾರ್, ಹೆಚ್.ಎಂ.ಶಿವರಾಮ್ ಮುಂತಾದವರು ಈ ಸಮ್ಮೇಳನದ ಸಂಘಟನೆಯಲ್ಲಿ ಮುಖ್ಯಪಾತ್ರ ವಹಿಸಿದರು. ಮುಂದೆ ಗೋಪಾಲಗೌಡರು ಮೈಸೂರು ರಾಜ್ಯದ ಸಮಾಜವಾದಿ ಪಕ್ಷದ ಮುಖವಾಣಿಯೇ ಆದರು. ಹಿಂದ್‌ಕಿಸಾನ್ ಪಂಚಾಯತ್ ವತಿಯಿಂದ 1948ರಲ್ಲಿ ತೀರ್ಥಹಳ್ಳಿಯಲ್ಲಿ ರೈತ ಸಮಾವೇಶ ನಡೆಸಿದರು. ಇದರಲ್ಲಿ ರಾಮನಂದನ್ ಮಿಶ್ರ ಮತ್ತು ಕಮಲಾದೇವಿ ಚಟ್ಟೋಪಾಧ್ಯಾಯ ಭಾಗವಹಿಸಿದ್ದರು. 1949ರಲ್ಲಿ ದಾವಣಗೆರೆಯಲ್ಲಿ ನಡೆದ ಕರ್ನಾಟಕ ಏಕೀಕರಣದ ಸಮ್ಮೇಳನದಲ್ಲೂ ಇವರದು ಸಕ್ರಿಯ ಪಾತ್ರ. ನೇತಾಜಿ ಸುಭಾಸ್‌ಚಂದ್ರಬೋಸ್‌ರ ಅಣ್ಣ ಶರತ್‌ಚಂದ್ರ ಬೋಸರು ಈ ಸಮ್ಮೇಳನದ ಉದ್ಘಾಟಕರು. ಗೌಡರು ಮೊದಲಿನಿಂದಲೂ ರಾಜ್ಯ ಮತ್ತು ರಾಷ್ಟ್ರಮಟ್ಟದ ನಾಯಕರೊಡನೆ ಸತತ ಸಂಪರ್ಕ ಹೊಂದಿದ್ದು ಅವರು ಬೇಗ ರಾಜಕೀಯ ಪ್ರಬುದ್ಧತೆಗಳಿಸಿಕೊಳ್ಳುವುದಕ್ಕೆ ಸಾಧ್ಯವಾಯಿತು.

**ಕಾಗೋಡು ಎಂಬ ಕುರುಕ್ಷೇತ್ರ:**

ಈ ಪ್ರಾಂತದ ಫಲವತ್ತಾದ ಭತ್ತ ಬೆಳೆಯುವ ವಿಸ್ತಾರವಾದ ಬಯಲುಗಳು ಒಕ್ಕಲುತನ ಮಾಡುವ ಅಪಾರ ಜನಸಂಖ್ಯೆಗೆ ಆಶ್ರಯ ನೀಡಿದ್ದವು. ರಾಜ ಮಹಾರಾಜರುಗಳು ಪೋಷಿಸಿ ಕೊಂಡು ಬಂದ ವ್ಯವಸ್ಥೆಯೆಂದರೆ ನಿರ್ದಿಷ್ಟ ಜಾತಿಯ ಬಹುಸಂಖ್ಯಾತರು ಗೇಣಿ ಒಕ್ಕಲುಗಳಾಗಿ ದುಡಿಯುವುದು ಮತ್ತು ಕೆಲವು ಜಮೀನ್ದಾರರುಗಳು ಈ ಜಮೀನಿನ ಒಡೆತನ

ಹೊಂದಿರುವುದು. ಇದರಿಂದಾಗಿ ರಾಜರುಗಳಿಗೆ ಕೆಲವೇ ಜಮೀನ್ದಾರರಿಂದ ಕಪ್ಪಕಂದಾಯ ವಸೂಲಿಗೆ ಸುಲಭವಿತ್ತು. ಮೈಸೂರು ರಾಜ್ಯದ ಕಾಲದಲ್ಲೂ ಇದರಲ್ಲಿ ಹೆಚ್ಚಿನ ಬದಲಾವಣೆಗಳಾಗಲಿಲ್ಲ. ಭೂ ಒಡೆಯರು ನಿರಂಕುಶ ಅಧಿಕಾರಿದಿಂದ ಈ ಒಕ್ಕಲುಗಳನ್ನು ನಿಯಂತ್ರಿಸುತ್ತಿದ್ದರು. ಗೇಣಿಪ್ರಮಾಣ, ದವಸದ ಅಳತೆಯ ಸಲಕರಣೆಗಳು, ಗೇಣಿ ಹಕ್ಕು ಇತ್ಯಾದಿ ವಿಷಯಗಳಲ್ಲಿ ಭೂ ಒಡೆಯರಿಗೂ ಗೇಣಿದಾರರಿಗೂ ವಿವಾದಗಳು ನಡೆಯುತ್ತಲೇ ಇರುತ್ತಿದ್ದವು. ಪರಿಸ್ಥಿತಿ ವಿಕೋಪಕ್ಕೆ ಹೋದಾಗ ಭೂ ಒಡೆಯರು ಸರ್ಕಾರದ ಬೆಂಬಲದಿಂದ ಮತ್ತು ತಮ್ಮ ಸಹಾಯಕರಾದ ಈ ಗೇಣಿ ಒಕ್ಕಲುಗಳನ್ನು ಬಲವಂತವಾಗಿ ಹೊರದೂಡುತ್ತಿದ್ದರು. ಭೂ ಒಡೆಯರು ಮತ್ತು ಗೇಣಿದಾರರ ಸಂಬಂಧಗಳು ಕೇವಲ ಜಮೀನಿಗೆ ಸಂಬಂಧಪಟ್ಟದ್ದು ಮಾತ್ರವಾಗಿರಲಿಲ್ಲ. ಅದಕ್ಕೆ ಸಾಮಾಜಿಕ ಆಯಾಮವೂ ಇದ್ದಿತು. ಗೇಣಿಒಕ್ಕಲುಗಳು ಕೆಳ ಜಾತಿಗಳಿಗೆ ಸೇರಿದವರಾದರೆ ಅವರ ಸ್ಥಿತಿ ಇನ್ನೂ ಹೀನಾಯವಾಗಿರುತ್ತಿತ್ತು. ಒಡೆಯರ ಮುಂದೆ ತಗ್ಗಿಬಗ್ಗಿ ನಡೆಯಬೇಕಾದ್ದಿತು. ಅವರು ನಾಜೂಕು ಉಡುಪು ಧರಿಸುವಂತಿರಲಿಲ್ಲ, ಕಾಲಿಗೆ ಚಪ್ಪಲಿ ಹಾಕಿಕೊಂಡು ದಣಿಗಳ ಅಂಗಳ ತುಳಿಯುವಂತಿರಲಿಲ್ಲ. ಬಿಟ್ಟಿ ಕೆಲಸಗಳೆಂದು ಮಾಮೂಲು ರೀತಿಯಲ್ಲಿ ಸಂಬಳವಿಲ್ಲದೆ ವರ್ಷಕ್ಕೆ ಇಂತಿಷ್ಟು ದಿನಗಳೆಂದು ದುಡಿಯಬೇಕಾಗಿದ್ದಿತು. ಒಟ್ಟಿನಲ್ಲಿ ಗೇಣಿ ಒಕ್ಕಲುಗಳಿಗೂ ಜಮೀನ್ದಾರರಿಗೂ ಆರ್ಥಿಕ ಮತ್ತು ಸಾಮಾಜಿಕ ವಿವಾದಗಳಿದ್ದವು.

ಕಾಗೋಡು, ಸಾಗರ ತಾಲ್ಲೂಕಿನ ಒಂದು ಪುಟ್ಟ ದಾಖಲೆ ಹಳ್ಳಿ. ಅಲ್ಲಿನ ಭೂ ಒಡೆಯರ ಮನೆತನದ ಕೆ.ಜಿ.ಒಡೆಯರು ಅಂದಿನ ಕಾಂಗ್ರೆಸ್ ಮುಂದಾಳು. ಅವರು ಕಾಗೋಡು ಸತ್ಯಾಗ್ರಹದ ಅನಂತರ ಎರಡು ಮೂರು ಬಾರಿ ಲೋಕಸಭೆ ಪ್ರವೇಶಿಸಿದರು. ಇದರಿಂದ ಈ ಕಾಗೋಡು ಸತ್ಯಾಗ್ರಹ ವಿರುದ್ಧವಿದ್ದ ಭೂಮಾಲೀಕ ವರ್ಗದ ಪ್ರಭಾವ ಮತ್ತು ಪ್ರತಿರೋಧಗಳು ಮನನವಾಗುತ್ತವೆ. 1951ರಲ್ಲಿ ಇದೊಂದು ಪ್ರಾತಿನಿಧಿಕ ಹೋರಾಟವಾಗಿ ಪರಿಣಮಿಸಿತು. ಮುಂದೆ ಅದು ಗೇಣಿ ರೈತರ ಬಗ್ಗೆ ಸರ್ಕಾರ ತನ್ನ ಕಾರ್ಯನೀತಿಯನ್ನು ಬದಲಾಯಿಸಿಕೊಳ್ಳಲು ಕಾರಣವಾಯಿತು. ಈ ಹೋರಾಟದಲ್ಲಿ ಎಸ್.ಗೋಪಾಲಗೌಡರು ವಹಿಸಿದ ಪಾತ್ರ ಅವರ ಸಾರ್ವಜನಿಕ ಜೀವನದ ಮಹತ್ತರ ಘಟ್ಟವಾಯಿತು. ಆದ್ದರಿಂದಲೇ ಇದೊಂದು ಕುರುಕ್ಷೇತ್ರ.

1948ನೇ ಏಪ್ರಿಲ್ 1 ರಂದು ಸಾಗರ ತಾಲ್ಲೂಕಿನ ಮುರುತ್ತೂರು ಗ್ರಾಮದಲ್ಲಿ ಬೃಹತ್ ರೈತ ಸಮಾವೇಶ ನಡೆದು ಅಂದೇ 'ಸಾಗರ ತಾಲ್ಲೂಕು ರೈತ ಸಂಘ' ಅಸ್ತಿತ್ವಕ್ಕೆ ಬಂದಿತು. ಈ ಸಂಘಕ್ಕೆ ಡಿ.ಮೂಕಪ್ಪನವರು ಅಧ್ಯಕ್ಷರಾಗಿಯೂ ಎಚ್.ಗಣಪತಿಯಪ್ಪನವರು ಪ್ರಧಾನ ಕಾರ್ಯದರ್ಶಿಯಾಗಿಯೂ ಆಯ್ಕೆಯಾದರು. ಈ ಸಂಘ ಗೇಣಿದಾರರ ಹಕ್ಕು ಬಾಧ್ಯತೆಗಳನ್ನು ಕುರಿತು ಹೋರಾಟ ನಡೆಸುತ್ತಿತ್ತು. ಈ ಸಂಘ ವ್ಯವಸ್ಥೆ ಮಾಡಿದ ಸಭೆಗಳಲ್ಲಿ ದಿನಕರ ದೇಸಾಯಿ, ಕಡಿದಾಳ್ ಮಂಜಪ್ಪ, ಎಸ್. ಗೋಪಾಲಗೌಡ, ಎಚ್.ಎಸ್.ಮಂಜಪ್ಪಗೌಡ, ಖಾದ್ರಿ ಶಾಮಣ್ಣ, ಜಿ. ಸದಾಶಿವರಾವ್, ವೈ.ಆರ್.ಪರಮೇಶ್ವರಪ್ಪ ಮೊದಲಾದ ಯುವ



ಮುಂದಾಳುಗಳು ಭಾಗವಹಿಸಿ ಬೆಂಬಲಿಸಿ ಮಾತನಾಡಿದ್ದರು. ಗೋಪಾಲಗೌಡರ ಒತ್ತಾಸೆಯಿಂದಾಗಿ ರಾಜ್ಯ ಸಮಾಜವಾದಿ ಪಕ್ಷದ ಅಧ್ಯಕ್ಷರಾಗಿದ್ದ ಸಿ.ಜಿ.ಕೆ.ರೆಡ್ಡಿಯವರು ಗೃಹ ಸಚಿವರಿಗೆ ಕಾಗೋಡು ಸಮಸ್ಯೆ ಕುರಿತು ದೀರ್ಘ ಪತ್ರವೊಂದನ್ನು ಬರೆದರು.

1951ರಲ್ಲಿ ರಾಜ್ಯ ಸಮಾಜವಾದಿ ಪಕ್ಷ ಕಾಗೋಡು ಗೇಣಿ ರೈತರ ಹೋರಾಟಕ್ಕೆ ನೇರವಾಗಿ ಬೆಂಬಲ ಘೋಷಿಸಿತ್ತು. ಇದರ ಪರಿಣಾಮವಾಗಿ ಚಳವಳಿ ತೀವ್ರವಾಯಿತು. ಸತ್ಯಾಗ್ರಹಿಗಳು ಶಿವಮೊಗ್ಗ ಜಿಲ್ಲೆ ಮತ್ತು ಹೊರಗಿನಿಂದ ಬಂದು ಭಾಗವಹಿಸಿ ಗೇಣಿದಾರರನ್ನು ಭೂ ಒಡೆಯರು ಒಕ್ಕಲೆಬ್ಬಿಸುವುದನ್ನು ವಿರೋಧಿಸಿದರು. ಮಲೆನಾಡು ರೈತ ಸಂಘದ ಅಧ್ಯಕ್ಷರಾಗಿದ್ದ ಕಡಿದಾಳ್ ಮಂಜಪ್ಪನವರು ಮತ್ತು ಕಾರ್ಯದರ್ಶಿ ಬಸವಾನಿ ರಾಮಶರ್ಮರು ರೈತರಿಗೆ ಬೆಂಬಲ ನೀಡಿದರು ಹಾಗೂ ಅವರು ಸರ್ಕಾರದೊಂದಿಗೆ ಮಾತುಕತೆಗೂ ಪ್ರಯತ್ನಿಸಿದರು. ಸಾಗರದ ರೈತರು ಬೆಂಗಳೂರಿಗೆ ತೆರಳಿ ಅಲ್ಲಿ ನಡೆಯುತ್ತಿದ್ದ ಕಾಂಗ್ರೆಸ್ ಅಧಿವೇಶನದ ಎದುರು ಪ್ರತಿಭಟನೆ ಮೆರವಣಿಗೆ ನಡೆಸಿದರು. ಇದು ಕಾಂಗ್ರೆಸ್‌ನ ರಾಷ್ಟ್ರ ನಾಯಕರ ಗಮನ ಸೆಳೆಯಿತು.

ಸಮಾಜವಾದಿ ಪಕ್ಷ ಈ ಚಳವಳಿಯನ್ನು ಒಂದು ಮಾದರಿ ಹೋರಾಟವಾಗಿ ರೂಪುಗೊಳಿಸಿತು. 1951ರ ಜೂನ್ 14ರಂದು ಸಮಾಜವಾದಿ ಪಕ್ಷದ ರಾಷ್ಟ್ರೀಯ ಧುರೀಣ ರಾಮಮನೋಹರ ಲೋಹಿಯಾರವರು ಕಾಗೋಡಿಗೆ ಬಂದು ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಅಂದು ಅದರಲ್ಲಿ ಎರಡು ಸಾವಿರ ಜನರು ಸೇರಿದ್ದರೆಂದು ಪ್ರಜಾವಾಣಿ ಪತ್ರಿಕೆ ವರದಿ ಮಾಡಿದೆ. ಲೋಹಿಯಾರವರು ಕಾಗೋಡಿನಿಂದ ವಾಪಸ್ಸಾಗುತ್ತಿದ್ದಾಗ ಅವರನ್ನು ಸಾಗರದಲ್ಲಿ ಬಂಧಿಸಲಾಯಿತು. ಅವರೊಂದಿಗೆ ಖಾದ್ರಿಶಾಮಣ್ಣ, ಮುಲ್ಕಾಗೋವಿಂದರೆಡ್ಡಿ, ಈಶ್ವರಪ್ಪ, ಮೊದಲಾದವರು ಬಂಧಿತರಾದರು. ಈ ಚಳುವಳಿಯ ಮುಖ್ಯ ಪ್ರೇರಣಶಕ್ತಿಯಾಗಿದ್ದ ಗೋಪಾಲಗೌಡರು ವಾರೆಂಟ್ ಆದೇಶದಿಂದ ತಪ್ಪಿಸಿಕೊಂಡು ಭೂಗತರಾಗಿ ಚಳವಳಿಗೆ ಚಾಲನೆ ನೀಡುತ್ತಿದ್ದರು. ಅಂದಿನ ಕಾಂಗ್ರೆಸ್ ಅಧ್ಯಕ್ಷ ಕೆಂಗಲ್ ಹನುಮಂತಯ್ಯನವರು ಜೂನ್ 27ರಂದು ಕಾಗೋಡಿಗೆ ಭೇಟಿ ನೀಡಿದರು. ಅವರು ಸರ್ಕಾರವನ್ನು ಬೆಂಬಲಿಸಲಾಗದೆ ಹಾಗೆಯೇ ಹಿಂದಿರುಗಿದರು. ಗೋಪಾಲಗೌಡರನ್ನು ಜುಲೈ 3ರಂದು ಬಂಧಿಸಲಾಯಿತು. ಅದೇ ಸೆಪ್ಟೆಂಬರ್ 21ರಂದು ಜಯಪ್ರಕಾಶ್ ನಾರಾಯಣರು ಸಾಗರಕ್ಕೆ ಬಂದು ಕಾಗೋಡು ಸತ್ಯಾಗ್ರಹಿಗಳನ್ನು ಸಮರ್ಥಿಸಿ ಭಾಷಣ ಮಾಡಿದರು.

ಕಾಗೋಡು ಸತ್ಯಾಗ್ರಹವನ್ನು ನಾಜೂಕಿನಿಂದ ನಿರ್ವಹಿಸಲು ಸರ್ಕಾರ ನಿರ್ಧರಿಸಿತು. ಅದೇ ವರ್ಷದ ಅಕ್ಟೋಬರ್‌ನಲ್ಲಿ ಎಲ್ಲ ಬಂಧಿತರನ್ನು ಬಿಡುಗಡೆ ಮಾಡಿತು. ಗೇಣಿದಾರರನ್ನು ಅವರ ಜಮೀನಿನಿಂದ ಹೊರದೂಡದಂತೆ ಏರ್ಪಾಡು ಮಾಡಲಾಯಿತು. ಈ ಸತ್ಯಾಗ್ರಹ ಇಡೀ ಮಲೆನಾಡಿನ ರೈತವರ್ಗದಲ್ಲಿ ಪ್ರಚಂಡ ರಾಜಕೀಯ ಜಾಗೃತಿ ಉಂಟುಮಾಡಿತು. ಗೋಪಾಲಗೌಡರು "ಹಿಂದ್ ಕಿಸಾನ್ ಪಂಚಾಯಿತಿಯ" ಕರ್ನಾಟಕ ಶಾಖೆಯ ಅಧ್ಯಕ್ಷರಾದರು. ಅವರು ತಮ್ಮ ಕಿರಿಯ ವಯಸ್ಸಿನಲ್ಲೇ ಹಿರಿಯದನ್ನು ಸಾಧಿಸಿದರು. **ಜನಪ್ರಿಯತೆ ಅವರನ್ನು ಹಿಂಬಾಲಿಸಿತು.**

ಈ ಕಾಗೋಡು ಸತ್ಯಾಗ್ರಹದ ಬೆನ್ನಿನಲ್ಲೇ ವಿಧಾನ ಸಭೆಗೆ ಪ್ರಥಮ ಮಹಾಚುನಾವಣೆ ನಡೆಯಿತು. ಆಗ ಕಾಂಗ್ರೆಸ್ ಪಕ್ಷ ಜವಾಹರಲಾಲ್ ನೆಹರೂರವರ ನಾಯಕತ್ವದಲ್ಲಿ ಜನಾದರಣೆಯ ಉತ್ತುಂಗ ಸ್ಥಿತಿಯಲ್ಲಿತ್ತು. ಮೈಸೂರು ರಾಜ್ಯದ 99 ಸ್ಥಾನಗಳ ಪೈಕಿ ಗೋಪಾಲಗೌಡರ ಸಮಾಜವಾದಿ ಪಕ್ಷವು 50 ಸ್ಥಾನಗಳಿಗೆ ಸ್ಪರ್ಧಿಸಿತು. ಈ ಸ್ಪರ್ಧೆ ಮುಖ್ಯವಾಗಿ ಪ್ರಜಾಪ್ರಭುತ್ವ ತತ್ವಕ್ಕನುಗುಣವಾಗಿತ್ತೆ ಹೊರತು ಗೆಲ್ಲುವ ವಿಶ್ವಾಸದಾಗಿರಲಿಲ್ಲ. ಚುನಾವಣೆಯಲ್ಲಿ ಗೌಡರು ಸಾಗರ ಹೊಸನಗರ ಕ್ಷೇತ್ರದಿಂದ ಸ್ಪರ್ಧಿಸಿದರು. ಆಗ ಕಾಂಗ್ರೆಸ್ ಧುರೀಣರಾಗಿದ್ದ ಎ.ಆರ್.ಬದರೀನಾರಾಯಣ ಅಯ್ಯಂಗಾರರು ಇವರ ಎದುರಾಳಿಯಾಗಿದ್ದರು. ಭೂಮಾಲೀಕ ವರ್ಗದಲ್ಲಿ ವೀರಶೈವರು, ಬ್ರಾಹ್ಮಣರು, ಕೆಲವು ಒಕ್ಕಲಿಗರು ಆ ಕ್ಷೇತ್ರದಲ್ಲಿದ್ದರೆ, ಗೇಣಿದಾರರಲ್ಲಿ ಹೆಚ್ಚಾಗಿ ದೀವರರಿದ್ದರು. ಗೌಡರಿಗೆ 'ಗೇಣಿದಾರರ ಅಖಂಡ ಬೆಂಬಲವಲ್ಲದೆ ಇತರ ಸುಧಾರಣಾವಾದಿಗಳ ಬೆಂಬಲವೂ ದೊರೆಯಿತು. ಅವರು ಸುಲಭವಾಗಿ ಚುನಾವಣೆಯಲ್ಲಿ ಗೆದ್ದರು.

ಎಸ್.ಗೋಪಾಲಗೌಡರು ವಿಧಾನ ಸಭಾ ಸದಸ್ಯರಾದದ್ದು ಕರ್ನಾಟಕದ ಸಂಸದೀಯ ಇತಿಹಾಸಕ್ಕೆ ಸಮೃದ್ಧತೆಯನ್ನು ತಂದುಕೊಟ್ಟಿತು. ಆಗ ವಿರೋಧ ಪಕ್ಷದಿಂದ ಆಯ್ಕೆಯಾಗಿ ಬಂದಿದ್ದವರು ಬೆರಳೆಣಿಕೆಯ ಮಂದಿ. ಸಮಾಜವಾದಿ ಪಕ್ಷದಿಂದ ಗೌಡರೂ ಸೇರಿ ಇಬ್ಬರು ಸದಸ್ಯರು ಮಾತ್ರ ಗೆದ್ದುಬಂದಿದ್ದರು. ಅಂದಿನ ವಿಧಾನಸಭೆ ಅತಿರಥ ಮಹಾರರಿಂದ ಕೂಡಿದ್ದಿತು. ಸ್ವತಃ ಕೆಚ್ಚೆದೆಯ ಕಲಿ ಎನಿಸಿದ ಬಡತನದ ಕುಲುಮೆಯಿಂದ ಎದ್ದುಬಂದಿದ್ದ ವಾಗ್ಮಿಯೂ ಹರಿತಮತಿಯೂ ಆಗಿದ್ದ ಕೆಂಗಲ್ ಹನುಮಂತಯ್ಯನವರೇ ಮುಖ್ಯಮಂತ್ರಿಗಳು. ಟಿ.ಸಿದ್ದಲಿಂಗಯ್ಯ, ಕೆ.ಟಿ.ಭಾಷ್ಯಂ, ಚನ್ನಬಸಪ್ಪ, ಟಿ.ಮರಿಯಪ್ಪ, ಡಿ.ಎಚ್.ಚಂದ್ರಶೇಖರಯ್ಯ ಕಡಿದಾಳ್ ಮಂಜಪ್ಪ ಮೊದಲಾದ ಸ್ವಾತಂತ್ರ್ಯ ಹೋರಾಟದ ಕಲಿಗಳೇ ವಿಧಾನಸಭಾ ಸದಸ್ಯರಾಗಿ ಅಧಿಕಾರ ಸ್ಥಾನಗಳಿಗೆ ಬಂದಿದ್ದವರು. ಅವರಲ್ಲಿ ಬಹಳಷ್ಟು ಜನ ವಕೀಲರಾಗಿ, ಪ್ರಸಿದ್ಧರಾಗಿದ್ದವರು. ಹಿಂದಿನ ಮಹಾರಾಜರಾಗಿದ್ದ ಜಯಚಾಮರಾಜ ಒಡೆಯರೇ ರಾಜಪ್ರಮುಖರು. ಕಾಂಗ್ರೆಸ್ ಬಗ್ಗೆ ರಾಜತ್ವದ ಬಗ್ಗೆ ಜನತೆ ಕೃತಜ್ಞತೆಯಿಂದ ಮಿಂದೇಳುತ್ತಿದ್ದ ಕಾಲ ಅದು. ಇಂತಹ ಅವಧಿಯಲ್ಲಿ ಅಲ್ಪ ಸಂಖ್ಯಾ ಬಲ ಹೊಂದಿದ್ದ ವಿರೋಧ ಪಕ್ಷ ಕಂಗೊಳಿಸುವುದಿರಲಿ ಗಟ್ಟಿ ಧ್ವನಿಯಲ್ಲಿ ವಿಷಯ ಮಂಡನೆ ಮಾಡುವುದೂ ಕಷ್ಟವಿತ್ತು.

ಆಗ ಗೌಡರು ಎಸ್.ನಿಜಲಿಂಗಪ್ಪನವರು ಒಂದು ಸಂದರ್ಭದಲ್ಲಿ ಹೇಳಿರುವಂತೆ ಒಂಟಿ ಸಲಗವಾಗಿ ವಿಧಾನ ಸಭೆಯಲ್ಲಿ ಹೋರಾಡುತ್ತಿದ್ದರು. ಅವರಲ್ಲಿದ್ದುದ್ದು ಹರಿತವಾದ ವಾಕ್‌ಪಟುತ್ವ, ಸಮಾಜವಾದದ ಬಗ್ಗೆ ಅಪ್ಪಟ ನಂಬುಗೆ, ಬಡವರ ಬಗ್ಗೆ ಅತೀವ ಪ್ರೀತಿ, ಪ್ರಜಾಪ್ರಭುತ್ವವನ್ನು ಬುಡದಿಂದ ನೆಲೆಯೂರಿಸುವ ಧ್ಯೇಯ ಇವೆಲ್ಲಕ್ಕೂ ಕಿರೀಟಪ್ರಾಯವಾಗಿ ಉಜ್ವಲ ನಿಸ್ವಾರ್ಥ ಮತ್ತು ಪ್ರಾಮಾಣಿಕತೆ.



ಕಾಗೋಡು ಸತ್ಯಾಗ್ರಹದ ಪರಿಮಾಮವೋ ಎಂಬಂತೆ ವಿಧಾನಸಭೆ ರಚಿತವಾದ ಸ್ವಲ್ಪ ಕಾಲದಲ್ಲೇ ಗೇಣಿದಾರರ ಶಾಸನ ಅಸ್ತಿತ್ವಕ್ಕೆ ಬಂದಿತು. ಗೌಡರು ಸಭೆಯಲ್ಲಿ ರಾಜ್ಯದ ಹಾಗೂ ಭಾರತದ ರೈತರ ಸ್ಥಿತಿಗತಿಗಳ ಬಗ್ಗೆ ಗೇಣಿ ಪದ್ಧತಿಯ ಒಳಿತು ಕೆಡಕುಗಳ ಬಗ್ಗೆ ತಮ್ಮ ಸ್ಪಷ್ಟವೂ ದೀರ್ಘವೂ ಆದ ಅಭಿಪ್ರಾಯಗಳನ್ನು ಮಂಡಿಸಿರುವುದು ಕಂಡುಬರುತ್ತದೆ. ಅವರು ಅದೇ ಉಸಿರಿನಲ್ಲಿ ಇನಾಂ ಭೂಮಿ ಮತ್ತು ಜಹಗೀರಿಗಳ ರದ್ದಿಗೂ ಒತ್ತಾಯ ಮಾಡುತ್ತಾ ಬಂದವರು. ಭೂಸುಧಾರಣೆ ಶಾಸನದ ಮಂಡನೆಯಾದಾಗ ಅದರ ಚರ್ಚೆಯಲ್ಲಿ ಇವರದೇ ಸಿಂಹಪಾಲು. ಈ ಕಾಗೋಡು ವೀರ ಸ್ವತಃ ಅಂದಿನ ಮುಖ್ಯಮಂತ್ರಿಗಳ ಸಹೋದರರ ಭೂ ಹಗರಣದ ಬಗ್ಗೆ ಸತ್ಯಾಗ್ರಹ ಹೂಡಲೂ ಹಿಂದೆಗೆಯಲಿಲ್ಲ. ಇದರಿಂದ ಮುಜುಗರಕ್ಕೆ ಸಿಲುಕಿದ ಕೆಂಗಲ್ಲರು ತಾವೇ ಆದೇಶ ಹೊರಡಿಸಿ ರೈತರ ಹಿತ ಕಾಪಾಡಿಕೊಂಡರು.

**ಸಮಾನತೆ ಹೋರಾಟ :**

ರಾಜ್ಯಸ್ವ ಗೌಡರಿಗೆ ಕಳೆದುಹೋದ ಒಂದು ವ್ಯವಸ್ಥೆ ಆದರ ಗುರುತುಗಳಿರುವುದು ಮತ್ತು ಯಾವ ರೂಪದಲ್ಲಾದರೂ ಅದು ಮುಂದುವರಿಯುವುದು. ಗುಲಾಮಗಿರಿಯ ಸಂಕೇತವೆಂದು ಅವರ ಭಾವನೆ. ರಾಜಪ್ರಮುಖರ ಭಾಷಣ ಇಂಗ್ಲೀಷಿನಲ್ಲಿದ್ದುದಕ್ಕಾಗಿ ಅದನ್ನು ವಿಧಾನ ಸಭೆಯಲ್ಲೇ ಹರಿದು ಹಾಕಿದ ಗಟ್ಟಿಗ. "ದಸರಾ ಉತ್ಸವ" ಜನಪದ ಉತ್ಸವವಾಗಬೇಕೇ ಹೊರತು ಅದು ರಾಜತ್ವದ ಪಳೆಯುಳಿಕೆಯಾಗಬಾರದೆಂಬುದು ಅವರ ದೃಢ ನಂಬಿಕೆ. ಆ ಬಗ್ಗೆ ನಿರ್ಭೀತಿಯಿಂದ ಖಂಡಿಸುತ್ತಿದ್ದರು. ದಸರಾ ಮೆರವಣಿಗೆ ನಡೆಯುತ್ತಿದ್ದಾಗಲೇ ರಾಜ ಬೀದಿಯಲ್ಲಿ ಕಪ್ಪುಬಾವುಟ ತೋರಿಸಿ ಅದನ್ನು ವಿರೋಧಿಸಿ ಬಂಧನಕ್ಕೊಳಗಾದ ಛಲವಾದಿ. ಶ್ರೀ ಜಯಚಾಮರಾಜೇಂದ್ರ ಒಡೆಯರು ಗೌಡರನ್ನು ಮಾತನಾಡಲು ಅಹ್ವಾನಿಸಿದರು. ಆಗ ಗೌಡರು ಆ ಆಹ್ವಾನಕ್ಕೆ "ವೈಯಕ್ತಿಕವಾಗಿ ನಿಮ್ಮ ಬಗ್ಗೆ ಗೌರವ, ವಿಶ್ವಾಸವಿದೆ ಆದರೆ ಮಹಾರಾಜರ ಬಗ್ಗೆ ತಿರಸ್ಕಾರವಿದೆ. ತಾವು ರಾಜ-ರಾಜ್ಯ ಪ್ರತಿಷ್ಠೆಯಿಂದ ಹೊರಬಂದು ಸಾರ್ವಜನಿಕ ರಂಗದಲ್ಲಿ ಭೇಟಿಯಾಗುವುದಾದರೆ ನನ್ನ ಅಭ್ಯಂತರವಿಲ್ಲ, ಎಂದು ಹೇಳಿಕಳುಹಿಸಿದರು. ಹೀಗೆ ತಮ್ಮ ತಾತ್ವಿಕ ನಿಲುವನ್ನು ಎತ್ತಿಹಿಡಿಯುವುದಕ್ಕೂ ಮತ್ತು ಎಂತಹವರನ್ನಾಗಲೀ ಪ್ರಶ್ನಿಸುವುದಕ್ಕೂ ಅವರು ಹಿಂಜರಿಯುತ್ತಿರಲಿಲ್ಲ.

ಗೌಡರು ಎಲ್ಲವನ್ನೂ ಸಮಾಜವಾದದ ಕಣ್ಣಿನಿಂದ ನೋಡುವವರು. ವಿಧಾನಸೌಧದ ನಿರ್ಮಾಣವಾಗಲಿ, ಸಂಸ್ಕೃತಿ ಪ್ರಸಾರ ಕಾರ್ಯಕ್ರಮವಾಗಲೀ, ರಾಜಧನದ ಬಗ್ಗೆಯಾಗಲೀ, ಅವುಗಳು ಜನಸಾಮಾನ್ಯರಿಗೆ ಹೊರೆಯಾಗಬಾರದು ಎಂದು ಪ್ರತಿಪಾದಿಸುತ್ತಿದ್ದರು. ದೇವರ ಹೆಸರಿನಲ್ಲಿ ಪ್ರಮಾಣ ಮಾಡುವುದು ಒಂದು ಬಗೆಯ ಶೋಷಣೆ ಎಂದು ಭಾವಿಸಿದ್ದರು. ಅವರು ಎಲ್ಲ ವಿಚಾರಗಳು ಎಲ್ಲರಿಗೂ ಸಮ್ಮತಿಯಾಗಲಿ, ಬಿಡಲಿ ಅವುಗಳ ಹಿಂದಿದ್ದ ಮಾನವೀಯ ದೃಷ್ಟಿಕೋನ ಮುಖ್ಯವಾಗಿದ್ದಿತು. ವಾಚಾಳಿಯಾಗಿದ್ದ ಗೌಡರು ವಿಧಾನಸಭೆಯಲ್ಲಿ

ವಿರೋಧ ಪಕ್ಷದವರಿಗೆ ಗೊತ್ತುಪಡಿಸಿದ್ದ ಕಾಲಾವಧಿಯ ಸಿಂಹಪಾಲನ್ನು ಪಡೆಯುತ್ತಿದ್ದರು. ಅವರ ಮಾತು ವಿವರಣಾತ್ಮಕವಾಗಿರುತ್ತಿದ್ದುದರಿಂದ ಅವರಿಗೆ ವಿಷಯದ ಎಲ್ಲ ಮಗ್ಗುಲುಗಳನ್ನು ವಿಶ್ಲೇಷಿಸಲು ಸಾಧ್ಯವಾಗುತ್ತಿತ್ತು.

**ರಾಜಕೀಯ ವ್ಯಕ್ತಿತ್ವ ಗಳಿಕೆ**

ಗೋಪಾಲಗೌಡರು ತಮ್ಮ ಶಾಸಕತ್ವದ ಮೊದಲ ಅವಧಿಯಲ್ಲಿ ಬಹುಮುಖರಾಗಿ ತಮ್ಮ ವ್ಯಕ್ತಿತ್ವವನ್ನು ರೂಪಿಸಿಕೊಂಡರು. ಅವರಿಗೆ ಸಾಹಿತಿಗಳು, ಕಲಾವಿದರೊಂದಿಗೆ ಬೆರೆಯುವುದೆಂದರೆ ಎಲ್ಲಿಲ್ಲದ ಉತ್ಸಾಹ. ಗೌಡರು ಟಾಲ್‌ಸ್ಟಾಯ್, ಮಾರ್ಕ್ಸ್ ಗಾಂಧಿ ಮುಂತಾದವರ ಕೃತಿಗಳನ್ನು ಓದಿಕೊಂಡು ಕಮ್ಯುನಿಸ್ಟ್ ಮತ್ತು ಸೋಷಲಿಸ್ಟ್ ಹಾಗೂ ಮಾನವತಾವಾದದ ಬಗ್ಗೆ ಗಂಭೀರವಾಗಿ ತಿಳಿದುಕೊಳ್ಳಲು ಪ್ರಯತ್ನಿಸುತ್ತಿದರು. ಭಾರತದಾದ್ಯಂತ ಸಂಚರಿಸಿ ದೇಶ ಮತ್ತು ಜನರ ಸಂಸತಿಗಳನ್ನು ಜೀವನ ಪರಿಸ್ಥಿತಿಯನ್ನು ಅರಿತರು. ಪಕ್ಷದಲ್ಲಿಯು ಅವರ ವರ್ಚಸ್ಸು ಬೆಳೆಯಿತು. ಹೈದರಾಬಾದಿನಲ್ಲಿ 1955ರಲ್ಲಿ ನಡೆದ ಅಖಿಲ ಭಾರತ ಸಮಾಜವಾದಿ ಪಕ್ಷದ ಸಮಾವೇಶದಲ್ಲಿ ಭಾಗವಹಿಸಿದರು. ಪಕ್ಷದ ರಾಷ್ಟ್ರೀಯ ಕಾರ್ಯಕಾರಿ ಸಮಿತಿಗೆ ಆಯ್ಕೆ ಆದರು.

ಕನ್ನಡ ಭಾಷೆ ಮತ್ತು ಕರ್ನಾಟಕ ರಾಜ್ಯ ರಚನೆಯ ಬಗ್ಗೆ ಅವರು ಅತೀವ ಕಳಕಳಿ ಹೊಂದಿದ್ದರು. ಅವರು ವಿಧಾನ ಸಭೆಯ ಒಳಗೂ ಹೊರಗೂ ಇದಕ್ಕಾಗಿ ಬೆಂಬಲಿಸಿದರು. ಶ್ರೀ ಕುವೆಂಪು, ಮತ್ತು ಸರ್.ಎಂ.ವಿಶ್ವೇಶ್ವರಯ್ಯನವರ ಬಗ್ಗೆ ಅವರಿಗೆ ಅಭಿಮಾನ ಮತ್ತು ಗೌರವಗಳಿದ್ದವು. ಒಂದು ಕಡೆ ಸಮಾಜದಲ್ಲಿನ ಪಟ್ಟಭದ್ರ ಹಿತಾಸಕ್ತಿಗಳನ್ನು ವಿರೋಧಿಸುತ್ತಾ ಇನ್ನೊಂದೆಡೆ ನಾಡು, ನುಡಿಯ ಬಗ್ಗೆ ಅಭಿಮಾನ ಬೆಳೆಸಿಕೊಳ್ಳುತ್ತಾ ಸಾಗಿದ ಗೌಡರು ನಿಜವಾದ ದೇಶ ಸೇವಕರಾಗಿ ಮೂಡಿದರು. ಅವರ ನಿರ್ಭೀತ ನಡವಳಿಕೆಗೆ ಅವರ ಸರಳತೆ, ಭ್ರಷ್ಟಾಚಾರವಿಲ್ಲದ ಬದುಕು ಮತ್ತು ಜನಸಾಮಾನ್ಯರ ಬಗೆಗಿನ ಕಳಕಳಿಗಳು ಸೇರಿಕೊಂಡು ಅವರು ರಾಜ್ಯದ ಪ್ರಭಾವಶಾಲಿ ರಾಜಕಾರಣಿಯಾದರು.

ಗೌಡರು ವಿದ್ಯಾರ್ಥಿಗಳು, ಕಾರ್ಮಿಕರು ಮತ್ತು ದೀನದಲಿತರ ಪರವಾಗಿ ಎಲ್ಲೇ ಹೋರಾಟ ನಡೆಯಲಿ ಅಲ್ಲೆಲ್ಲ ತಮ್ಮ ಬೆಂಬಲ ನೀಡಿ ಅವರಿಗೊಂದು ಶಕ್ತಿ ಮತ್ತು ಸಂಘಟನೆ ತಂದುಕೊಡುತ್ತಿದ್ದರು. ಅವರು ಧರ್ಮ ಮತ್ತು ಮತಗಳ ಬಗ್ಗೆಯೂ ನಿರ್ದಿಷ್ಟ ಧೋರಣೆ ತಾಳಿದ್ದರು. ಈ ಬಗ್ಗೆ ಒಂದು ಪ್ರಸಂಗವನ್ನು ಶ್ರೀ ಕೋಣಂದೂರು ವೆಂಕಟಪ್ಪನವರು ವಿವರಿಸಿರುವುದು ಸ್ವಾರಸ್ಯಕರವಾಗಿದೆ. "ಒಮ್ಮೆ ತೀರ್ಥಹಳ್ಳಿಯ ಮುಳುಬಾಗಿಲು ಮಠದ ಸ್ವಾಮಿಗಳು ಅಲ್ಲಿನ ರಸ್ತೆಯ ಬದಿಯಲ್ಲಿ ನಿಂತು, ಗೌಡರನ್ನು ಕಂಡು ತಮ್ಮ ಮಠಕ್ಕೆ ಭೇಟಿ ಕೊಡಬೇಕೆಂದು ಆಹ್ವಾನಿಸಿದರು. ಆಗ ಅವರು ನಿಮ್ಮ ಬಗ್ಗೆ ವೈಯಕ್ತಿಕವಾಗಿ ಗೌರವ, ವಿಶ್ವಾಸವಿದೆ. ಆದರೇ ದೇವರು, ಧರ್ಮಗಳ ಬಗ್ಗೆ ನನ್ನದೇ ಆದ ಅಭಿಪ್ರಾಯವಿದೆ.



ಮಠ, ಸ್ವಾಮಿ - ಸಂಪ್ರದಾಯಗಳ ಬಗ್ಗೆ ವಿರೋಧವಿದೆ. ನನ್ನ ದೃಷ್ಟಿಯಲ್ಲಿ ಕಾವಿ ಬಡವರ ಶೋಷಣೆಯ ಸಂಕೇತ ಎಂಬ ಭಾವನೆ ಇರುವವನು, ಆದರೆ ನಿಮ್ಮಲ್ಲಿಗೆ ಬರಲಿಕ್ಕೆ ಅಭ್ಯಂತರವಿಲ್ಲ. ಅಲ್ಲಿ ನಾನು ಒಂದು ತೊಟ್ಟು ನೀರನ್ನೂ ಸ್ವೀಕರಿಸುವುದಿಲ್ಲ" ಎಂದರು, ಸ್ವಾಮಿಗಳು ಅವರ ವ್ಯಕ್ತಿತ್ವಕ್ಕೆ ಗೌರವಿಸಿ ಅವರನ್ನು ಕರೆದುಕೊಂಡು ಹೋಗಿ ಆದರಾಭಿಮಾನದಿಂದ ಕಳುಹಿಸಿಕೊಟ್ಟರು ಅವರದು ಸಮನ್ವಯ ದೃಷ್ಟಿ ಸಾರ್ವಜನಿಕ ಕ್ಷೇತ್ರದಲ್ಲಿರುವ ಅವರು ಬೆಳೆಸಿಕೊಂಡಿದ್ದ ಈ ನಿಲುವ ಅವರ ವ್ಯಕ್ತಿತ್ವಕ್ಕೂ ಹಿಡಿದ ಕನ್ನಡಿ ಎನ್ನಬಹುದು. ಯಾವ ದಾಕ್ಷಿಣ್ಯಕ್ಕೂ ಕಟ್ಟುಬೀಳದ ತಾನು ನಂಬಿದ್ದ ನಂಬಿಕೆಗಳಿಗೆ ದ್ರೋಹ ಬಗೆಯದ ಮತ್ತು ಅದಕ್ಕಾಗಿ ಏನೇ ಬೆಲೆಯಾದರು ತೆರಲು ಸಿದ್ಧವಾಗಿದ್ದ ವ್ಯಕ್ತಿಯಾಗಿದ್ದರು ಗೋಪಾಲಗೌಡರು.

**1957ರ ಚುನಾವಣೆ:**

1957ರ ವಿಧಾನಸಭೆಗೆ ಚುನಾವಣೆ ಬಂದಿತು. ಆಗ ಗೌಡರು ತಮ್ಮ ಕ್ಷೇತ್ರವನ್ನು ಸಾಗರ-ಹೊಸ ನಗರದಿಂದ ತೀರ್ಥಹಳ್ಳಿಗೆ ಬದಲಾಯಿಸಿದರು. ಇದಕ್ಕೆ ಸರಿಯಾದ ಕಾರಣ ತಿಳಿದುಬಂದಿಲ್ಲ. ಒಂದು ವಿಷಯ ಸ್ಪಷ್ಟವಿದೆ. ಕಡಿದಾಳ್ ಮಂಜಪ್ಪನವರು ತೀರ್ಥಹಳ್ಳಿ ಕ್ಷೇತ್ರವನ್ನು ಪ್ರತಿನಿಧಿಸಿದ್ದವರು ಈ ಬಾರಿ ಶೃಂಗೇರಿ - ಕೊಪ್ಪ ಕ್ಷೇತ್ರವನ್ನು ಆಯ್ದುಕೊಂಡರು. ರಾಜಕೀಯ ದೃಷ್ಟಿಧೋರಣೆಗಳು ಮತ್ತು ತಾತ್ವಿಕ ನಿಲುವಿನಲ್ಲಿ ಬಹುಮಟ್ಟಿಗೆ ಸಮಾನ ಗುಣಗಳನ್ನು ಹೊಂದಿದ್ದ ಆಡಳಿತ ಪಕ್ಷದಲ್ಲಿದ್ದ ಕಡಿದಾಳ್ ಮಂಜಪ್ಪನವರು ಮತ್ತು ವಿರೋಧ ಪಕ್ಷದಲ್ಲಿದ್ದ ಗೋಪಾಲಗೌಡರು ಪರಸ್ಪರರನ್ನು ಚುನಾವಣೆಯಲ್ಲಿ ಎದುರಿಸುವ ಸಂದರ್ಭ ಇದರಿಂದಾಗಿ ತಪ್ಪಿತು. ಗೌಡರಿಗೆ ಎದುರಾಗಿ ತಮ್ಮ ಹಳೆಯ ಸ್ಪರ್ಧಿ ಬದರಿನಾರಾಯಣ ಅಯ್ಯಂಗಾರ್ ಅವರು ಕಾಂಗ್ರೆಸ್‌ನಿಂದ ಸ್ಪರ್ಧಿಸಿದರು. ಗೋಪಾಲಗೌಡರು ಈ ಬಾರಿ ಚುನಾವಣೆಯಲ್ಲಿ ಸೋಲು ಅನುಭವಿಸಿದರು. ಕಾಂಗ್ರೆಸ್ ಬಗ್ಗೆ ಎಲ್ಲ ವರ್ಗಗಳಲ್ಲೂ ಒಲವಿದ್ದಿತು ಮತ್ತು ಗೌಡರು ಕ್ಷೇತ್ರ ಬದಲಿಸಿದ್ದು ಈ ಫಲಿತಾಂಶಕ್ಕೆ ಕಾರಣವಿರಬಹುದು.

ಗೌಡರು ಹುಟ್ಟು ಜನಸೇವಕರಾಗಿದ್ದು ಬಡವರ ಬಗ್ಗೆ ಬದ್ಧತೆ ಹೊಂದಿದ್ದ ವ್ಯಕ್ತಿ. ಜನಜಂಗುಳಿಯೊಳಗಿನ ಬದುಕೇ ಅವರ ಜೀವನಧರ್ಮ. ಇದರಿಂದಾಗಿ ಚುನಾವಣೆಯಲ್ಲಿ ಸೋತರೂ ಕೂಡ ಅವರು ರಾಜಕೀಯವನ್ನು ಮತ್ತಷ್ಟು ಬಲವಾಗಿ ಅಂಟಿಸಿಕೊಂಡರು. ಅವರ ಕಾರ್ಯಚಟುವಟಿಕೆಗಳು ಕೇವಲ ತಮ್ಮ ಹಿಂಬಾಲಕರನ್ನು ತೃಪ್ತಿಪಡಿಸುವ ಮತ್ತು ಸರ್ಕಾರದಿಂದ ಕೆಲಸಗಳನ್ನು ಮಾಡಿಸುವುದಷ್ಟಕ್ಕೇ ಸೀಮಿತವಾಗಿರಲಿಲ್ಲ. ಲೋಕವನ್ನು ತಿಳಿಯುವ ಮತ್ತು ಅದರಲ್ಲಿ ತಾನು ನಂಬಿದ್ದ ಧ್ಯೇಯಧೋರಣೆಗಳಿಗನುಗುಣವಾಗಿ ನಡೆದುಕೊಳ್ಳುವ ಪ್ರಯತ್ನ ಅವರದು. ಅದಕ್ಕಾಗಿ ಪ್ರವಾಸ, ವಿವಿಧ ಸಂಘ ಸಂಸ್ಥೆಗಳೊಂದಿಗೆ ಸಂಪರ್ಕ, ಲೋಹಿಯಾ ಮೊದಲಾದ ರಾಷ್ಟ್ರೀಯ ಮಟ್ಟದ ಸಮಾಜವಾದಿ ನಾಯಕರೊಂದಿಗೆ ಒಡನಾಟ ಇವೆಲ್ಲ ಅವರ ಕ್ರಿಯೆಗಳ ಭಾಗವಾಗಿದ್ದವು. ಸಮಾಜವಾದಿ ಪಕ್ಷದಿಂದ ಅಖಿಲ

ಭಾರತ ಮಟ್ಟದಲ್ಲಿ ಹದಿನೆಂಟು ಅಂಶಗಳ ಚಳವಳಿ ಆರಂಭವಾಯಿತು. ಅವರು ಕರ್ನಾಟಕದಲ್ಲಿ ಸಮಾಜವಾದಿ ಯುವಜನ ಸಭಾ ಸ್ಥಾಪನೆಯಲ್ಲಿ ಶ್ರಮಿಸಿದರು. 1958ರಲ್ಲಿ ರಾಜ್ಯಾದ್ಯಂತ ಕಾನೂನುಭಂಗ ಚಳವಳಿಯನ್ನು ಸಂಘಟಿಸಿ ನೂರಾರು ಜನರು ಬಂಧನಕ್ಕೊಳಗಾದರು.

ಗೋವಾ ವಿಮೋಚನಾ ಚಳವಳಿ 1960ರ ಪ್ರಾರಂಭದಲ್ಲಿ ಬಿರುಸಾಯಿತು. ಆಗ ಸರ್ವಪಕ್ಷೀಯ ಚಳವಳಿಗೆ ಚಾಲನೆ ನೀಡಿದ ಗೌಡರು ಸತ್ಯಾಗ್ರಹದಲ್ಲಿ ಭಾಗವಹಿಸಿದರು. ಸಮಾಜವಾದಿ ಪಕ್ಷದ 'ಮಾರ್ಗದರ್ಶಿ' ಎಂಬ ಪತ್ರಿಕೆ ಪ್ರಕಟಗೊಳ್ಳತೊಡಗಿತು. ಅದೇ ಜೂನ್ 19ರಂದು ಪಕ್ಷದ ವತಿಯಿಂದ ರಾಮನಗರ ತಾಲ್ಲೂಕು ಉರಗಹಳ್ಳಿ ಇನಾಂ ರೈತರ ಭೂಹಕ್ಕಿನ ಹೋರಾಟಕ್ಕೆ ಸಭೆ ಸೇರಿಸಿದರು. ಹೀಗೆ ಒಂದು ದಿಕ್ಕಿನಲ್ಲಿ ಸಾಮಾಜಿಕ ವಲಯದಲ್ಲಿ ಹೋರಾಟಗಳನ್ನು ನಡೆಸಿಕೊಂಡು ಬಂದ ಗೌಡರು ಇನ್ನೊಂದು ದಿಕ್ಕಿನಲ್ಲಿ ಬೌದ್ಧಿಕವಾಗಿಯೂ ಬೆಳೆಯುತ್ತಲೇ ಬಂದರು. ಯು.ಆರ್.ಅನಂತಮೂರ್ತಿ, ಪಿ.ಲಂಕೇಶ್, ಖಾದ್ರಿ ಶಾಮಣ್ಣ ಮೊದಲಾದ ಸಾಹಿತಿಗಳ ಮತ್ತು ಪತ್ರಕರ್ತರ ನಿಕಟ ಒಡನಾಟದಲ್ಲಿದ್ದರು. ಸಾಹಿತ್ಯ ಕೃತಿಗಳನ್ನು ಸತತವಾಗಿ ಅಭ್ಯಸಿಸುತ್ತಿದ್ದರು. ಕೆಂಗಲ್ ಹನುಮಂತಯ್ಯನವರು ಮುಖ್ಯಮಂತ್ರಿಗಳಾಗಿದ್ದಾಗ ಬೆಂಗಳೂರಿನಲ್ಲಿ ಶಾಸಕರಿಗೆ ನಿವೇಶನ ಕೊಡುತ್ತೇವೆಂದು ಹೇಳಿದಾಗ ಅದನ್ನು ನಿರಾಕರಿಸಿದರು. ಹಾಗೆಯೇ ಕಡಿದಾಳ್ ಮಂಜಪ್ಪನವರು ಕಂದಾಯ ಸಚಿವರಾಗಿದ್ದಾಗ ಗೌಡರ ಸ್ನೇಹಿತರೊಬ್ಬರ ಸಲಹೆಯಂತೆ ಕಡಿದಾಳರು ಗೌಡರಿಗೆ ಐದಾರು ಎಕರೆ ತರಿಜಮೀನು ಮಂಜೂರು ಮಾಡಿಸಿ ಕೊಡಲು ಒಪ್ಪಿದಾಗ ಅದನ್ನು ಸಹ ನಿರಾಕರಿಸಿದರು. ನಾನು ಜಮೀನು ಉಳುವವನಲ್ಲ, ನನಗೇಕೆ ಜಮೀನು ಎಂದು ತತ್ವಕ್ಕೆ ಅಂಟಿಕೊಂಡರು. ತಮ್ಮ ಬಳಿ ಇದ್ದ ನಾಲ್ಕು ಜೊತೆ ಬಟ್ಟೆಗಳು ಲಾಂಡ್ರಿಗೆ ಕೊಟ್ಟರೆ ಬೇಗ ಹರಿದುಹೋಗುತ್ತದೆ ಎಂಬ ಕಾರಣಕ್ಕಾಗಿ ತಾವೇ ಒಗೆದುಕೊಳ್ಳುತ್ತಿದ್ದರಂತೆ. ಇದು ಅವರ ಬದುಕಿನ ರೀತಿಯಾಗಿದ್ದಿತು.

ವೈಯಕ್ತಿಕವಾಗಿ ಅವರು ಅವಿವಾಹಿತರಾಗೇ ಉಳಿದಿದ್ದರು. ಮೊದಲಿನಿಂದಲೂ ಒಂದು ಘಟನೆಯಿಂದ ಜಿಗುಪ್ಸೆಗೊಂಡು ಸಸ್ಯಾಹಾರಿಗಳಾಗಿದ್ದರು. ಕೊನೆಯವರೆಗೂ ಅದನ್ನು ಪಾಲಿಸಿದರು. ಆದರೆ ಮಧ್ಯಪಾನ, ಧೂಮಪಾನದಂತಹ ಅಮಿಷಗಳು ಈ ಒಂಟಿ ಜೀವಿಯ ಸಂಗಾತಿಗಳಾಗಿ ಉಳಿದವು. ಈ ಅಭ್ಯಾಸಕ್ಕೆ ಅವರು ಮುಂದೆ ದೊಡ್ಡ ಬೆಲೆಯನ್ನೇ ತೆರಬೇಕಾಯಿತು. ಇವಾವೂ ಗೌಡರಿಂದ ಅವರ ಸ್ನೇಹಿತರನ್ನೂ ದೂರ ಮಾಡಲಿಲ್ಲ. ಖಾಲಿ ಜೇಬು, ಬಡತನದ ಬೇಗೆ ಆದರೂ ಜನರೇ ಇವರ ಆಸ್ತಿ. ಅವರ ಸೇವೆಯೇ ಇವರ ಆನಂದ.



**ಮತ್ತೆ ವಿಧಾನಸಭೆಗೆ ಪ್ರವೇಶ:**

1962ರ ವಿಧಾನಸಭಾ ಚುನಾವಣೆಗಳು ಎದುರಾದವು. ಮತ್ತೆ ಅವರು ತೀರ್ಥಹಳ್ಳಿ ಕ್ಷೇತ್ರದಿಂದ ಚುನಾವಣೆಗೆ ನಿಂತರು. ಜನಸಾಮಾನ್ಯರು ಗೋಪಾಲಗೌಡರ ನೈಜತೆ, ಜನಪ್ರೀತಿ, ಮತ್ತು ಪ್ರಾಮಾಣಿಕತೆಗಳನ್ನು ಮನಗಂಡಿದ್ದರು. ಅವರು ಚುನಾವಣೆಯಲ್ಲಿ ಗೌಡರ ಕೈಹಿಡಿದು ಗೆಲ್ಲಿಸಿದರು. ಅಂದಿನಿಂದ ಗೌಡರ ಕೊನೆಯಕಾಲದವರೆವಿಗೂ ತೀರ್ಥಹಳ್ಳಿಯ ಜನತೆ ಈ ಅಪ್ಪಟ ಮಾನವತವಾದಿ ಮತ್ತು ನಿಜವಾದ ಸಮಾಜವಾದಿ ಪುತ್ರನ ಕೈಬಿಡಲೇ ಇಲ್ಲ. ಚುನಾವಣೆಯ ಬಗ್ಗೆ ಇವರದು ಕ್ರೀಡಾ ಮನೋಭಾವ. ಈ ಚುನಾವಣೆಗೆ ಕಡಿದಾಳರು ಗೋಪಾಲಗೌಡರ ವಿರುದ್ಧ ಸ್ಪರ್ಧಿಸಬೇಕೋ ಬೇಡವೋ ಎಂಬ ತಾಕಲಾಟದಲ್ಲಿದ್ದರು. ಅವರು ಗೌಡರಲ್ಲಿಗೆ ಅಭಿಪ್ರಾಯ ತಿಳಿಯಲು ಒಬ್ಬ ಪ್ರತಿನಿಧಿಯನ್ನು ಕಳುಹಿಸಿಕೊಟ್ಟರು. ಆಗ ಗೌಡರು ಹೇಳಿದ ಮಾತುಗಳೆಂದರೆ "ನಾನೇನೋ ಚುನಾವಣೆಗೆ ನಿಲ್ಲುವವನೇ ನನಗೇನು ಭೂಮಿಯೇ ಹಾಸಿಗೆ, ಆಕಾಶವೇ ಹೊದಿಕೆ, ನನ್ನ ಪಾಲಿಗೆ ಗೆಲುವು-ಸೋಲು ಎರಡೂ ಒಂದೇ. ಆದರೆ ನಿಮ್ಮ ಕಡಿದಾಳರು ಈ ಚುನಾವಣೆಯಲ್ಲಿ ನಿಂತುಗೆದ್ದರಂತೂ ಸರಿಯೇ ..... ಆದರೆ ಒಂದು ವೇಳೆ ಅವರ ಗೆಲುವಿನ ಹಡಗು ಮುಳುಗಿಬಿಟ್ಟಿತು. ಅನ್ನಿ; ಆಗ ಅದನ್ನು ತಡೆದುಕೊಳ್ಳುವ ಶಕ್ತಿ ಅವರಿಗಿದೆಯಂತೇನು? ಇದು ಅವರು ಜೀವನವನ್ನು ಹಗುರವಾಗಿ ಮತ್ತು ತಾತ್ವಿಕವಾಗಿ ತೆಗೆದುಕೊಳ್ಳುತ್ತಿದ್ದ ರೀತಿ.

ಗೌಡರಿಗೆ 1962ರಲ್ಲೂ ಪ್ರತಿಸ್ಪರ್ಧಿಯಾಗಿದ್ದ ಎ.ಆರ್.ಬದರೀನಾರಾಯಣ ಅಯ್ಯಂಗಾರ್ ತಮ್ಮ ಒಬ್ಬ ದೂತನನ್ನು ಗೌಡರ ಬಳಿಗೆ ಕಳುಹಿಸಿ ಅಮಿಷವೊಡ್ಡಿದರಂತೆ. ಆಗ ಗೌಡರು ಕೋಪೋದ್ರಿಕ್ತರಾಗಿ ಅತನನ್ನು ಹೀನಾಯವಾಗಿ ಬೈದೂ ಕಳುಹಿಸಿದರು. ಈ ಪ್ರಸಂಗಗಳು ಗೋಪಾಲಗೌಡರ ಅಪ್ಪಟ ಪ್ರಾಮಾಣಿಕತೆಗೆ ಸಾಕ್ಷಿಯಾಗಿದೆ. ಗೌಡರಿಗೆ ಈ ಚುನಾವಣೆಯಲ್ಲಿಯೂ ಜಯ ಲಭಿಸಿತು.

ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿ 1962ರಲ್ಲಿ ರಾಜ್ಯ ಸಮಾಜವಾದಿ ಪಕ್ಷದ ಸಮಾವೇಶವನ್ನು ಸಂಘಟಿಸಿದರು. ತಾವು ಶಾಸಕರಾಗಿದ್ದಾಗಲೂ ಇಲ್ಲದಿದ್ದಾಗಲೂ ಅವರ ದೃಷ್ಟಿಧೋರಣೆಗಳಲ್ಲಿ ಬದಲಾವಣೆಗಳು ಕಂಡುಬರಲಿಲ್ಲ. ಅವರು ಎಂದೂ ಶೋಷಕರು ಮತ್ತು ಶ್ರೀಮಂತರೊಂದಿಗೆ ತಮ್ಮ ಅನುಕೂಲಕ್ಕಾಗಿ ರಾಜೀ ಮಾಡಿಕೊಳ್ಳಲಿಲ್ಲ. ಮಂತ್ರಿ, ಅಧಿಕಾರಿ, ಎಷ್ಟೇ ದೊಡ್ಡವರಾಗಿರಲಿ ಅವರ ತಪ್ಪುಗಳನ್ನು ಅವರೆದುರೇ ಆಡದೆ ಬಿಡುತ್ತಿರಲಿಲ್ಲ. ಕೆಲವೊಮ್ಮೆ ಅವಸರದಲ್ಲಿ ದುಡುಕಿ ಮಾತನಾಡುತ್ತಿದ್ದರು. ನಿಧಾನಕ್ಕೆ ತಮ್ಮ ತಪ್ಪನ್ನು ಮನಗಂಡು ಸಂಬಂಧಪಟ್ಟ ವ್ಯಕ್ತಿಗಳನ್ನು ಭೇಟಿಮಾಡಿ ಆದ ಅಚಾತುರ್ಯಕ್ಕೆ ಕ್ಷಮೆ ಕೇಳುತ್ತಿದ್ದರು. ವಿಧಾನ ಸಭೆಯಲ್ಲಿಯೂ ಸಹ ಇಂತಹ ಪ್ರಸಂಗಗಳಾಗುತ್ತಿದ್ದವು. ಅಧಿಕಾರ ಬಲದಿಂದ ಆಡಿದ್ದೆಲ್ಲ ಸರಿಯೆಂದು ಸಮರ್ಥಿಸಿಕೊಳ್ಳುವವರು ಅಧಿಕವಾಗಿರುವ ಕಾಲದಲ್ಲಿ ಇಂತಹ ವ್ಯಕ್ತಿ ಇದ್ದದ್ದು ವಿಶೇಷವೇ ಸರಿ.

## ಕೌಟುಂಬಿಕ ಜೀವನ:

1964 ಗೋಪಾಲಗೌಡರ ಜೀವನ ಹೊಸ ತಿರುವನ್ನು ಪಡೆದ ವರ್ಷ. ಅವರು ಆ ವರ್ಷ ವಿವಾಹವಾಗಲು ನಿರ್ಧರಿಸಿದರು. ಮಾರ್ಚ್ 2ರಂದು ಧಾರವಾಡದ ಟ್ಯಾಗೋರ್ ಹಾಲ್‌ನಲ್ಲಿ ಹುಬ್ಬಳ್ಳಿಯ ವಕೀಲರಾದ ಲಿಂಗನಗೌಡ ಪಾಟೀಲರ ಮಗಳು ಸೋನಕ್ಕ ಅವರೊಂದಿಗೆ ಗೌಡರ ವಿವಾಹವಾಯಿತು. ಮದುವೆ ಸರಳವಾಗಿಯೇ ನಡೆಯಿತು. ಆದರೆ ಸತ್ಕಾರಗಳು ವಿಶೇಷವಾಗಿ ನಡೆದರು. ವಿಧಾನಸೌಧದ ಬ್ಯಾಂಕ್ವೆಟ್ ಹಾಲ್‌ನಲ್ಲಿ ದಂಪತಿಗಳನ್ನು ಗೌರವಿಸಲಾಯಿತು. ಸ್ವಕ್ಷೇತ್ರದಲ್ಲಿ ದಂಪತಿಗಳ ಮೆರವಣಿಗೆಯು ನಡೆಯಿತು. ಇದೆಲ್ಲ ಜನರು ಗೌಡರನ್ನು ಕಾಣುತ್ತಿದ್ದ ರೀತಿಗೆ ಸಾಕ್ಷಿಯಾಗಿದ್ದಿತು. ಅವರ ದಾಂಪತ್ಯ ಅನ್ಯೋನ್ಯವಾಗಿ ನಡೆಯಿತು. 1967ರಲ್ಲಿ ಮಗಳು ಇಳಾಗೀತ ಜನಿಸಿದರೆ, 1968ರಲ್ಲಿ ಏಪ್ರಿಲ್‌ನಲ್ಲಿ ಮಗ ರಾಮಮನೋಹರ ಜನಿಸಿದ. ಆಗಷ್ಟೆ ಕಣ್ಮರೆಯಾಗಿದ್ದ ಸಮಾಜವಾದಿ ನಾಯಕ ಡಾ.ರಾಮಮನೋಹರ ಲೋಹಿಯರ ಹೆಸರನ್ನೆ ತಮ್ಮ ಮಗನಿಗೆ ಇಟ್ಟು ಗೌಡರು ಲೋಹಿಯಾ ಬಗ್ಗೆ ಹೊಂದಿದ್ದ ಅತೀವ ನಿಷ್ಠೆಯನ್ನು ದಾಖಲಿಸಿದ್ದಾರೆ. ಪತ್ನಿ ಸೋನಕ್ಕ ಶಾಲಾ ಶಿಕ್ಷಕಿಯಾಗಿದ್ದವರು. ಗೌಡರು ಸದಾ ಸಂಚಾರಿ. ಮಕ್ಕಳ ಲಾಲನೆ ಪಾಲನೆ ಹೊಣೆ ಹೆಚ್ಚಾಗಿ ಸೋನಕ್ಕನವರದೆ ಆಯಿತು. ಒಂದು ದಶಕಕ್ಕೂ ಕಡಿಮೆ ಅವಧಿಯ ಈ ದಾಂಪತ್ಯದಲ್ಲಿ ಗೋಪಾಲಗೌಡರ ಅಭಿರುಚಿಗಳಿಗೆ ಹೊಂದಿಕೊಂಡು ಸಮನಾಗಿ ಸಂಸಾರ ನಿಭಾಯಿಸಿದ್ದು ಸೋನಕ್ಕನವರ ಸಾಧನೆಯೇ ಸರಿ.

## 1967ರ ಚುನಾವಣೆ:

1967ರ ಸಾರ್ವತ್ರಿಕ ಚುನಾವಣೆಯು ಬಂದಿತು. ಗೋಪಾಲಗೌಡರು ಮತ್ತೆ ತೀರ್ಥಹಳ್ಳಿ ಕ್ಷೇತ್ರದಿಂದಲೇ ಸ್ಪರ್ಧಿಸಿದರು. ಇವರೊಂದಿಗೆ ದಿವಂಗತ ಮಾಕೋನಹಳ್ಳಿ ಹುಚ್ಚೇಗೌಡರು ಚಿಕ್ಕಮಗಳೂರು ಲೋಕಸಭಾ ಕ್ಷೇತ್ರದಿಂದ ವಿರೋಧಪಕ್ಷದ ವತಿಯಿಂದ ಸ್ಪರ್ಧಿಸಿದರು. ತೀರ್ಥಹಳ್ಳಿ ವಿಧಾನಸಭಾ ಕ್ಷೇತ್ರ ಚಿಕ್ಕಮಗಳೂರು ಲೋಕಸಭಾ ಕ್ಷೇತ್ರಕ್ಕೆ ಸೇರಿದ್ದಿತು. ಚುನಾವಣೆಯ ಕೊನೆಯ ದಿನಗಳು ಸಮೀಪಿಸುತ್ತಿದೆ. ಹುಚ್ಚೇಗೌಡರು ತೀರ್ಥಹಳ್ಳಿಗೆ ಬಂದು ನೋಡಿದರೆ ಬೆಳಗ್ಗೆ ಒಂಬತ್ತು ಗಂಟೆ ಆಗಿದ್ದರೂ ಗೋಪಾಲಗೌಡರು ಮಲಗಿಯೇ ಇದ್ದರು. ಆಗ ಹುಚ್ಚೇಗೌಡರು "ಏನು ಗೋಪಾಲ ಹೀಗೆ ಮಲಗಿಯೇ ಇದ್ದಿಯಲ್ಲ" ಎಂದರು. ಅದಕ್ಕೆ ಗೌಡರು "ನಾನು ಓಡಾಡುವಷ್ಟು ಓಡಾಡಿದ್ದೇನೆ ಹೇಳುವಷ್ಟು ಹೇಳಿದ್ದೇನೆ. ಸ್ನೇಹಿತರು ಕಾರೇನೋ ಸೌಜನ್ಯಕ್ಕೆ ಕಳುಹಿಸಿಕೊಡುತ್ತಾರೆ, ಜೊತೆಗೆ ಪೆಟ್ರೋಲು ಕೊಡಿ ಅನ್ನುವುದು ಮಾನವೀಯತೆ ಅಲ್ಲ" ಎಂದರು. ಈ ಪ್ರಸಂಗ ದೀರ್ಘಕಾಲ ರಾಜಕೀಯದಲ್ಲಿದ್ದ ಈ ವ್ಯಕ್ತಿಯ ಹಣಕಾಸಿನ ಸ್ಥಿತಿಯ ಬಗ್ಗೆ ಬೆಳಕು ಬೀರುತ್ತದೆ. ಇಂತಹ ನಿಷ್ಠುರ ಪರಿಸ್ಥಿತಿಯಲ್ಲಿಯೂ ಜನರು ಗೋಪಾಲಗೌಡರನ್ನೇ ವಿಧಾನಸಭೆಗೆ ಚುನಾಯಿಸಿ ಕಳುಹಿಸಿಕೊಟ್ಟರು. ತೀರ್ಥಹಳ್ಳಿ ವಿಧಾನಸಭಾ ಕ್ಷೇತ್ರ ಅವಿರತವಾಗಿ ಎರಡು ಬಾರಿ ಒಬ್ಬರನ್ನೆ ಚುನಾಯಿಸಿದ್ದಿಲ್ಲ ಎಂಬ ಪ್ರತೀತಿಗೆ ಒಳಗಾಗಿದೆ. ಆದರೆ ಗೌಡರು ಇದಕ್ಕೆ ವಿನಾಯಿತಿಯಾಗಿದ್ದಾರೆ.



## ಆದರ್ಶ ರಾಜಕೀಯ:

ಗೋಪಾಲಗೌಡರು ರಾಜಕೀಯದಲ್ಲಿ ತತ್ವಾದರ್ಶಗಳಿಗೆ ಕಟ್ಟುಬಿದ್ದು ಹೋರಾಡಿಕೊಂಡು ಬಂದವರು. ಅವರು ಒಮ್ಮೆ ಚುನಾವಣಾ ಸಂದರ್ಭದಲ್ಲಿ ತೀರ್ಥಹಳ್ಳಿಯ ಪ್ರವಾಸ ಮಂದಿರದಲ್ಲಿ ತಂಗಿದ್ದರು. ಅಲ್ಲಿಗೆ ಆಗಿನ ಮುಖ್ಯಮಂತ್ರಿ ವೀರೇಂದ್ರ ಪಾಟೀಲರು ಚುನಾವಣಾ ಪ್ರಚಾರಕ್ಕೆ ಬಂದರು. ಗೌಡರು ಬಂದು ಮುಖ್ಯಮಂತ್ರಿಗಳನ್ನು ಎದುರುಗೊಳ್ಳಲಿಲ್ಲ. ಪಾಟೀಲರೇ ಗೌಡರ ಕೊಠಡಿಗೆ ಹೋಗಿ ಮಾತುಕತೆ ನಡೆಸಿದರು. ಅಧಿಕಾರ ಇದ್ದವರನ್ನು ಓಲೈಸುವುದು ಗೌಡರ ಜಾಯಮಾನವಾಗಿರಲಿಲ್ಲ.

ಗೋಪಾಲಗೌಡರು ಶೋಷಣೆಯ ಬಗ್ಗೆ ಹೋರಾಡಿಕೊಂಡೇ ಬಂದರು. ಜನರ ಸಮಸ್ಯೆಗಳು ಏನೇ ಇರಲಿ, ಯಾವ ಭಾಗದಲ್ಲಾದರೂ ಇರಲಿ ಗೌಡರು ಅಂತಹ ನೊಂದವರ ಪರವಾಗಿ ಹೋರಾಟ ನಡೆಸುತ್ತಿದ್ದರು. 1968ರಲ್ಲಿ ಚಿಕ್ಕಮಗಳೂರಿನಲ್ಲಿ ಕೋಮು ಗಲಭೆಯಾದಾಗ ಗೌಡರು ಅಲ್ಲಿಗೆ ಹೋಗಿ ಪರಿಶೀಲಿಸಿ ಬಂದು ವಿವರವಾದ ವರದಿಯನ್ನು ತಮ್ಮ ಪಕ್ಷಕ್ಕೆ ಸಲ್ಲಿಸಿದರು. ಬಡತನದ ಬೇಗೆಗೆ ಸಿಲುಕಿದ್ದಾಗಲೂ ಶಾಸಕರಿಗೆ ಸಂಭಾವನೆ ಹೆಚ್ಚಿಸಿದಾಗ ಅದನ್ನು ಪ್ರತಿಭಟಿಸಿದವರಲ್ಲಿ ಮೊದಲಿನವರೇ ಗೌಡರು. ಇಂತಹ ಅಪ್ಪಟ ಸಮಾಜವಾದದ ಕನಸು ಕಂಡಿದ್ದವರು ಗೋಪಾಲಗೌಡರು. ಸಮಾಜವಾದಿ ಪಕ್ಷ ಒಡೆದು ಪ್ರಜಾ ಸಮಾಜವಾದಿ ಪಕ್ಷ ಹುಟ್ಟಿಕೊಂಡಿದ್ದು ಮತ್ತು ಸಮಾಜದ ಸಾಮಾಜಿಕ ವ್ಯವಸ್ಥೆಯು ಗೌಡರ ಆದರ್ಶದ ರಾಜಕೀಯಕ್ಕೆ ಹಿನ್ನಡೆಯನ್ನುಂಟುಮಾಡಿದವು. ಆದರೂ ಸಹ ಅವರ ಈ ಏಕಾಂಗಿ ಹೋರಾಟ ರಾಜ್ಯ ರಾಜಕೀಯಕ್ಕೂ ರಾಷ್ಟ್ರದ ವಿದ್ಯಮಾನಗಳಿಗೂ ವಿರಳ ಲಕ್ಷಣಗಳನ್ನು ತಂದು ಕೊಟ್ಟಿದ್ದಿತು.

1970ರ ತರುವಾಯ ಗೋಪಾಲಗೌಡರ ಆರೋಗ್ಯ ಹದಗೆಡುತ್ತ ಬಂದಿತು. 1971ರಲ್ಲಿ ರಾಜ್ಯದಲ್ಲಿ ರಾಜಕೀಯ ಅಸ್ಥಿರತೆ ತಲೆದೋರಿ ಗೌಡರೇ ಮುಖ್ಯಮಂತ್ರಿಯಾಗಬೇಕೆಂಬ ಪ್ರಸ್ತಾಪ ಮುಂದೆ ಬಂದಾಗ ಅದನ್ನು ಅವರು ಸ್ಪಷ್ಟವಾಗಿ ನಿರಾಕರಿಸಿದ್ದರು. ಶಿವಮೊಗ್ಗದಲ್ಲಿ 1971ರ ನವೆಂಬರ್ 1ರಂದು ಶಿವಮೊಗ್ಗ ನಗರ ಸಭೆಯ ಆಶ್ರಯದಲ್ಲಿ ಏರ್ಪಡಿಸಿದ್ದ ರಾಜ್ಯೋತ್ಸವ ಸಮಾರಂಭದಲ್ಲಿ ಗೌಡರು ಜಾರ್ಜ್ ಫರ್ನಾಂಡಿಸ್, ಜೆ.ಎಚ್.ಪಟೇಲ್ ಮತ್ತು ಕೆ.ಜಿ.ಮಹೇಶ್ವರಪ್ಪ ಅವರೊಡನೆ ಸಭೆಯಲ್ಲಿ ಭಾಗವಹಿಸಿದ್ದರು. ಅದೇ ಅವರ ಕೊನೆಯ ಸಾರ್ವಜನಿಕ ಸಭೆ. ತೀವ್ರ ಅನಾರೋಗ್ಯದಿಂದ ಅವರು 1972ರ ಜೂನ್ 9ರಂದು ವಿಕ್ಟೋರಿಯ್ ಆಸ್ಪತ್ರೆಯಲ್ಲಿ ಕಣ್ಮುಚಿದರು.

ಗೋಪಾಲಗೌಡರು ಕರ್ನಾಟಕ ಕಂಡ ಅಪರೂಪದ ರಾಜಕಾರಣಿ. ಅವರಿಗೆ ನಡೆ , ನುಡಿ, ಕನಸು ಬದುಕು ಎಲ್ಲ ಒಂದೇ ಆಗಿದ್ದಿತು. ಗೇಣಿದಾರರ ಸಮಸ್ಯೆ, ಗಡಿ ಸಮಸ್ಯೆ, ಕನ್ನಡದ ಸ್ಥಾನಮಾನ ಸರ್ಕಾರದ ವ್ಯವಹಾರಗಳು ಇವು ಯಾವೇ ಇರಲಿ ಅವನ್ನು ತಲಸ್ಪರ್ಶಿಯಾಗಿ ಬಿಡಿಬಿಡಿಸಿ ವಿಶ್ಲೇಷಿಸುರ ಸಾಮರ್ಥ್ಯ ಮತ್ತು ಒಳನೋಟ ಅವರಲ್ಲಿದ್ದಿತು.

ಅವರು ಓದಿದದು ಕಡಿಮೆಯಾದರೂ ಅರಿತದ್ದು ಹೆಚ್ಚು. ಹಾಗೆಯೇ ತಾನು ನಂಬಿದ್ದ ಸಿದ್ಧಾಂತಗಳನ್ನು ಯಾರ ದಾಕ್ಷಿಣ್ಯವಿಲ್ಲದೆ ಪ್ರತಿಪಾದಿಸುವ ಕೆಚ್ಚು ಮತ್ತು ಪ್ರಾಮಾಣಿಕತೆ ಅವರದಾಗಿತ್ತು.

ಗೇಣಿದಾರರ ಪರಿಸರದಿಂದ ಬಂದಿದ್ದ ಗೋಪಾಲಗೌಡರು ಅವರ ಸಮಸ್ಯೆಗಳಿಗಾಗಿ ಮೊದಲಿನಿಂದಲೂ ಒಂದೇ ನಿಲುವಿನಿಂದ ಹೋರಾಡಿದರು. ಅವರು ಪ್ರಾರಂಭದಿಂದಲೂ ಗೇಣಿದಾರರನ್ನು ನೆಲದೊಡೆಯನನ್ನಾಗಿ ಮಾಡಬೇಕು ಅದೇ ಧರ್ಮ ಎಂದು ಹೇಳತ್ತಾ ಬಂದರು. 1970ರಲ್ಲಿ ಅದನ್ನು ವಿಧಾನಸಭೆಯಲ್ಲಿ ಮತ್ತಷ್ಟು ಕಳಕಳಿಯಿಂದ ಹೇಳಿದರು. ಸಂದರ್ಭವಶಾತ್ ಅನತಿಕಾಲದಲ್ಲೇ ಮುಖ್ಯಮಂತ್ರಿಯಾಗಿ ಬಂದ ಡಿ.ದೇವರಾಜ ಅರಸು ಅವರು ಗೌಡರ ಕಣ್ಮರೆಯ ಅನಂತರ ಅವರ ಈ ಕನಸನ್ನು ನೆನಸಾಗಿಸಿದರು. ಕರ್ನಾಟಕದ ಗೇಣಿದಾರರ ಹೋತಾಟವನ್ನು ಗಮನಿಸಿದಾಗ ಬಹುಶಃ ಗೋಪಾಲಗೌಡರಂತಹ ಸಮಾಜವಾದಿ ಮತ್ತು ಕಡಿದಾಳ್ ಮಂಜಪ್ಪನವರಂತಹ ಕಂದಾಯ ಸಚಿವರಿಲ್ಲದೆ ಹೋಗಿದ್ದರೆ ಗೇಣಿದಾರರಿಗೆ ಏನೇನು ಹಕ್ಕು ಭಾಧ್ಯತೆಗಳು ಸ್ವಾತಂತ್ರ್ಯಾನಂತರ ಲಭ್ಯವಾದವೋ ಅವು ಅಷ್ಟು ಶೀಘ್ರವಾಗಿ ಮತ್ತು ಸರಾಗವಾಗಿ ದೊರೆಯುತ್ತಿರಲಿಲ್ಲವೆಂಬುದು ಸುಸ್ಪಷ್ಟವಾಗಿದೆ. ಹೀಗೆ ನೊಂದವರ, ಬಡವರ ಮತ್ತು ದುರ್ಬಲರ ಬದುಕಿನ ಕಷ್ಟಕಾರ್ಪಣ್ಯಗಳನ್ನು ಹತ್ತಿರದಿಂದ ಬಲ್ಲವರಾಗಿ ಅವುಗಳ ಪರಿಹಾರಕ್ಕಾಗಿ ಇಡೀ ಜೀವನವನ್ನೇ ಸವೆಸಿದ ಶಾಂತವೇರಿ ಗೋಪಾಲಗೌಡರು ಹುತಾತ್ಮರೇ ಸರಿ.

ಐವತ್ತರ ಸುವರ್ಣ ವರ್ಷವನ್ನು ಕಾಣದ ಶಾಂತವೇರಿ ಗೋಪಾಲಗೌಡರು ಸಾರ್ವಜನಿಕ ಜೀವನದಲ್ಲಿ ಅಳಿಸಲಾಗದ ನೆನಪನ್ನು ಸಾಧನೆಯನ್ನು ಬಿಟ್ಟು ಹೋಗಿದ್ದಾರೆ. ಶಾಸಕ ಮಾತ್ರನಾಗಿ ಇವರಷ್ಟು ಕೀರ್ತಿಶಾಲಿಯಾದ ಇನ್ನೊಬ್ಬ ರಾಜಕಾರಣಿ ನಮ್ಮ ಇತಿಹಾಸದಲ್ಲಿ ಸಿಗುವುದು ದುರ್ಲಭ. ಸಾಹಿತಿ, ಕವಿ, ಪ್ರೊ. ಸಿ.ಪಿ.ಕೃಷ್ಣಕುಮಾರ್ ಅವರು ಈ ಮಹಾಚೇತನಕ್ಕೆ ಸಲ್ಲಿಸಿರುವ ಶ್ರದ್ಧಾಂಜಲಿ ನಿಜಕ್ಕೂ ಮೆಲುಕು ಹಾಕುವಂತಿದೆ -



ಮರು ಭೂಮಿಯಲ್ಲೊಂದು ಓಯಸಿಸ್ಸಿನ ಹಾಗೆ<br>
ಕಡಲಿನಲ್ಲೊಂದು ನಡುಗಡ್ಡೆ ಮೂಡಿದ ಹಾಗೆ<br>
ನೀವು ಬದುಕಿದಿರಿ, ಗೌಡರೆ, ಪ್ರತಿಷ್ಠಿತದ<br>
ನಡುವೆ, ಹುಡಿ ಜನಕೋಟಿಗಾಗಿ ಕೂಗಾಡಿದಿರಿ<br>
ರೇಗಿದಿರಿ; ಬಿದ್ದುಹೋದಿರಿ ವಜ್ರ ವೈಢೂರ್ಯ<br>
ಗಳನ್ನೆಲ್ಲ ಜೀರ್ಣಿಸುವ ನಮ್ಮ ನೆಲದ ಅಗಸ್ತ್ಯ<br>
ಗರ್ಭದಲಿ ಲೀನವಾದಿರಿ, ರಕ್ಷಿಸುತ್ತೇವೆ<br>
ಎಂದು ಹೊರಟವರೆಲ್ಲ ರಾಕ್ಷಸರೆ ಆಗುವುದು,<br>
ಇಲ್ಲವಾಡಿಕೆ, ಹೊಸಬರಿಗೆ ಸದಾ ಬೇಡಿಕೆ,<br>
ನೀವು ಉಳಿದಿರಿ ಕಡೆಯ ತನಕ ಅಪ್ಪಟವಾಗಿ<br>
ಹಸಿಯಾಗಿ, ಕಹಿ ಪಥ್ಯವಾಗಿ ನಿಮ್ಮಂಥವರ<br>
ನೆನಪು ಸಮುದಾಯಕ್ಕೆ ಆಸೆ, ಆಸರೆ, ಮುಂದೆ<br>
ಬದಲಾವಣೆಗೆ ಬೀಜ, ತುಕ್ಕು ಹಿಡಿಯದೆ ಇರಲಿ<br>
ಎಂದಿಗೂ ನೀವು ಮೆರೆದಂಥ ಮೌಲ್ಯದ ತೇಜ.

# ಭಾಗ - 2

## ಗೋಪಾಲ ಗೌಡರು
## ವಿಧಾನ ಸಭೆಯಲ್ಲಿ ಮಾಡಿದ ಕೆಲವು
## ಭಾಷಣಗಳು

## ಭಾಗ - 2
## ವಿಧಾನ ಸಭೆಯಲ್ಲಿ ಮಾಡಿದ ಕೆಲವು ಭಾಷಣಗಳು

1. ಲೆವಿ ಮೂಲಕ ಆಹಾರ ಧಾನ್ಯ ಸಂಗ್ರಹಣೆ ಕುರಿತು 1952
2. ಶಿಕ್ಷಣ ಸುಧಾರಣಾ ಮಸೂದೆ ಕುರಿತು 1953
3. ಗ್ರಾಮ ಪಂಚಾಯತಿಗಳು ಮತ್ತು ಜಿಲ್ಲಾ ಬೋರ್ಡ್‌ಗಳ (ತಿದ್ದುಪಡಿ) ಮಸೂದೆ 1954
4. ಮೈಸೂರು ಗೇಣಿ ಪದ್ಧತಿ (ತಿದ್ದುಪಡಿ) ಮಸೂದೆ, 1954
5. ಭೂಸುಧಾರಣೆ ಮಸೂದೆ, 1954
6. ಮೈಸೂರು (ಧಾರ್ಮಿಕ ಮತ್ತು ದತ್ತಿ) ಇನಾಂಗಳ ರದ್ದಾಯಿತಿ ಮಸೂದೆ, 1954
7. ಆಡಳಿತ ಭಾಷಾ ಮಸೂದೆ, 1963
8. ಭೂಸುಧಾರಣೆ ಕುರಿತು - 1965
9. ಲೋಕ ಸೇವಾ ಆಯೋಗ 1966
10. ರಾಜ್ಯಪಾಲರ ಭಾಷಣಕ್ಕೆ ವಂದನಾ ನಿರ್ಣಯ 1966
11. ಸರ್ಕಾರದ ವಿರುದ್ಧ ಅವಿಶ್ವಾಸ ನಿರ್ಣಯ ಕುರಿತು 1966
12. ಕೃಷ್ಣಾ ಮತ್ತು ಗೋದಾವರಿ ನೀರಿನ ಹಂಚಿಕೆ 1967
13. ಸರ್ಕಾರದ ವಿರುದ್ಧ ಅವಿಶ್ವಾಸ ನಿರ್ಣಯ ಕುರಿತು 1967
14. ರಾಜ್ಯದ ಗಡಿಗೆ ಸಂಬಂಧಿಸಿದ ಮಹಾಜನ ವರದಿ ಬಗ್ಗೆ 1967
15. ರೈತರ ಸ್ಥಿತಿಗತಿಗಳನ್ನು ಕುರಿತು 1970.

## ಲೆವಿ ಮೂಲಕ ಆಹಾರ ಧಾನ್ಯ ಸಂಗ್ರಹಣೆ ಕುರಿತು, 1952

ಸ್ವಾಮಿ, ನಾವು ಆಹಾರನೀತಿಯ ವಿಷಯದಲ್ಲಿ ಈಗಿರುವ ಆಹಾರ ವ್ಯವಸ್ಥೆಯನ್ನು ಮತ್ತು 'ಲೆವಿ' ವ್ಯವಸ್ಥೆಯನ್ನೂ ಚರ್ಚಿಸಿ ಯಾವುದು ಸೂಕ್ತವೆಂಬುದನ್ನು ಹೇಳಬೇಕೆಂಬ ಒಂದು ಸಮಸ್ಯೆ ಬಂದಿದೆ. ಈ ಸಮಸ್ಯೆಯನ್ನು ಚರ್ಚಿಸುತ್ತಿರುವುದು ಇದು ಎರಡನೆಯ ದಿವಸ, ಇದುವರೆಗೆ ನಡೆದ ಚರ್ಚೆಯಲ್ಲಿ ಅನೇಕ ಮಾನ್ಯ ಸದಸ್ಯರು ತಮ್ಮ ಸಲಹೆಗಳನ್ನು ಕೊಟ್ಟಿದ್ದಾರೆ. ವಿರೋಧಪಕ್ಷದವರು ತಮ್ಮ ಸಲಹೆಗಳನ್ನು ಕೊಡುವುದಕ್ಕೆ ಸರ್ಕಾರದವರು ಒಂದು ವರದಿಯನ್ನು ಸಭೆಯ ಮುಂದಿಡುತ್ತೇವೆಂದು ಹೇಳಿ ಅಧನ್ನು ಸಕಾಲದಲ್ಲಿ ಕೊಡದೇಯಿದ್ದುದರಿಂದ ತಡವಾಗಿ ಮತ್ತೆ ಇದರ ಚರ್ಚೆಯನ್ನು ಮುಂದುವರಿಸಬೇಕಾಯಿತು. ಏನೇ ಇರಲಿ ಆಹಾರ ಸಮಸ್ಯೆ ಇಂದು ಬಹಳ ಮುಖ್ಯರಾದ ಸಮಸ್ಯೆ. ಇದು ನಮ್ಮ ದೇಶದ ಮುಂದೆ ಬಂದಿದೆ. ಆಹರಕ್ಕೆ ಕೊರತೆಯಿರುವುದು; ನಮ್ಮ ದೇಶದಲ್ಲಿ ಮಾತ್ರವಲ್ಲ ಪ್ರಪಂಚದಲ್ಲೆಲ್ಲಾ ಕೊರತೆಯಿದೆ ಎನ್ನುವುದು ನಮಗೆ ಇತ್ತೀಚಿನ ನೀತಿಯಿಂದ ಕಂಡುಬಂದಿದೆ. ನಾನು, ಈ ಸಮಸ್ಯೆಯನ್ನು ಒಂದು ಪಕ್ಷದ ದೃಷ್ಟಿಯಿಂದ ನೋಡದೇ ಹೋದರೂ, ಒಂದು ವಿಷಯವನ್ನು ಹೇಳಬೇಕಾಗಿದೆ. ಕಳೆದ ಎಂಟು ಹತ್ತು ವರ್ಷಗಳ ಅನುಭವದಿಂದ ನೋಡಿದರೆ, ಆಡಳಿತ ನಡೆಸುತ್ತಿರುವ ಕಾಂಗ್ರೆಸ್ ಸರ್ಕಾರ ಇಂಥ ಒಂದು ಜೀವಂತ ಸಮಸ್ಯೆಯ ಬಗ್ಗೆ ಒಂದು ದೃಡನಿಶ್ಚಯ ಅಥವಾ ನಿರ್ಧಾರವನ್ನು ಕೈಕೊಳ್ಳದೆ, ಕ್ಷಣಕ್ಷಣಕ್ಕೂ ತನ್ನ ನೀತಿಯನ್ನು ವರ್ಷ ವರ್ಷವೂ ಬದಲಾಯಿಸಿಕೊಂಡು ಹೋಗುತ್ತಿರುವುದೇ ದೇಶದಲ್ಲಿ ವ್ಯವಸಾಯ ಮಾಡುವ ರೈತನ ಅಧೋಗತಿಗೂ ಆಹಾರ ಕ್ಷೋಭೆಗೂ ಕಾರಣವೆಂದು ನಾವು ಈ ದಿವಸ ಹೇಳಬೇಕಾಗಿದೆ.

ಶ್ರೀ ಕೆ.ಹನುಮಂತಯ್ಯ (ಮುಖ್ಯಮಂತ್ರಿಗಳು)- ಮಳೆ, ಒಂದೇರೀತಿ ಸರಿಯಾಗಿ ಬರುವುದಿಲ್ಲ.

ಶ್ರೀ ಎಸ್.ಗೋಪಾಲಗೌಡ- ನಿಜ, ಮಳೆ ಸಕಾಲದಲ್ಲಿ ಬರುವುದಿಲ್ಲ. ಏನೇ ಇರಲಿ, ಪ್ರಜೆಗಳಿಗೆಲ್ಲಾ ಆಹಾರ ಮತ್ತು ಬಟ್ಟೆಯನ್ನೊದಗಿಸುವುದು ಎಲ್ಲ ನಾಗರಿಕ ಸರ್ಕಾರಗಳ ಜವಾಬ್ದಾರಿಯೆಂದು ಎಲ್ಲ, ಸರ್ಕಾರಗಳೂ ಒಪ್ಪಿಕೊಂಡಿವೆ. ಇದರಲ್ಲಿ ಭಿನ್ನಾಭಿಪ್ರಾಯವಿರಲು ಸಾಧ್ಯವಿಲ್ಲ.

ಈ ವಿಷಯ ಸರ್ವರಿಗೂ ಸಂಬಂಧಪಟ್ಟಿದ್ದೆಂಬುದರಲ್ಲಿ ಯಾರಿಗೂ ಭಿನ್ನಭಿಪ್ರಾಯವಿರಲು ಸಾಧ್ಯವಿಲ್ಲ. ಈ ದಿವಸ ನಮ್ಮ ಮುಂದೆ ಸರ್ಕಾರದವರು ತರುತ್ತಿರುವ ಯಾವ ವಿಷಯದಲ್ಲೇ ಆಗಲಿ, ಅವರ ನೀತಿ ಎಂತಹದ್ದಾಗಿರುತ್ತದೆಯೆಂಬುದನ್ನು ಒಂದೊಂದನ್ನಾಗಿ ಹಾಗೆಯೇ ಪರಿಶೀಲನೆ ಮಾಡುತ್ತಾ ಹೋದರೆ, ಈ ದಿವಸ ಈ

---

**ವಿಧಾನ ಸಭೆ ನಡವಳಿಕೆ ದಿನಾಂಕ 23.10.1952**



ಕಂಟ್ರೋಲೆಂಬುದು ಇರಬೇಕೇ ಇರಬೇಡವೇ, ಹೆಂಡ ಇರಬೇಕೇ ಅಥವಾ ಇರಬಾರದೇ, ಸೇಲ್ಸ್‌ಟ್ಯಾಕ್ಸ್ ವಿಚಾರ ತೆಗೆದುಕೊಂಡರೆ ಸಿಂಗಲ್‌ಪಾಯಿಂಟ್ ಟ್ಯಾಕ್ಸ್ ಇರಬೇಕೇ, ಇರಬಾರದೇ ಎಂಬುದಾಗಿ ಹೀಗೆ ಇಂಥ ವಿಷಯಗಳನ್ನೆಲ್ಲಾ ಒಂದು ಪಟ್ಟಿಯನ್ನು ತಯಾರುಮಾಡಿಕೊಂಡು ನೋಡುವುದಾದರೆ, ತಾನು ತುಳಿಯತಕ್ಕ ಪ್ರತಿಯೊಂದು ಹೆಜ್ಜೆಗೂ ಈ ಕಾಂಗ್ರೆಸ್ ಸರ್ಕಾರದಲ್ಲಿ ಯಾವ ಒಂದು ವಿಷಯದಲ್ಲೂ ಒಂದು ನಿರ್ದಿಷ್ಟವಾದ ನೀತಿ ಇರುವುದಿಲ್ಲವೆಂದು ಹೇಳಬಹುದು. ಈ ಆಹಾರ ಕೊರತೆಯ ಸಮಸ್ಯೆಗೆ ಅನೇಕ ಅಸಾಧ್ಯವಾದ ವಿಷಯಗಳನ್ನೆಲ್ಲಾ ಗಂಟುಹಾಕಿ, ಈ ಸಮಸ್ಯೆಗೆ ನ್ಯಾಯವಾದ ಪರಿಹಾರಮಾರ್ಗವನ್ನು ಕಂಡು ಹಿಡಿಯಲು ಸಾಧ್ಯವಿಲ್ಲದೆ, ಆಹಾರಮಂತ್ರಿಗಳು ಪ್ರತಿಯೊಂದು ವಿಷಯದಲ್ಲೂ ತೀರ ಅನುಮಾನಾಸ್ಪದವಾದಂಥ ನೀತಿಯ ಮೇಲೆ ನಡೆಯುತ್ತಿರುವುದನ್ನು ನೋಡಿದರೆ beating the bush ಎಂದು ಹೇಳುವಂತಿದೆ. ಇದು ತೀರಾ ನಿಂದನಾಸ್ಪದವಾದಂತ ವಿಚಾರ, ಇಲ್ಲಿಗೆ 8-10 ವರ್ಷಗಳಿಂದಾಲೂ ನಾವು ಏನೇನೂ ಕಷ್ಟಗಳನ್ನು ಅನುಭವಿಸುತ್ತಿದ್ದೇವೆಂಬುದು ಎಲ್ಲರಿಗೂ ಸ್ಪಷ್ಟವಾಗಿ ಗೊತ್ತಾಗಿರತಕ್ಕ ವಿಚಾರಗಳೇ ಆಗಿವೆ. ಈ ನಾನಾ ತೊಂದರೆಗಳಿಗೆಲ್ಲಾ ಮುಖ್ಯ ಕಾರಣಗಳಾವುವೆಂಬುದನ್ನು ಅಂಕಿ ಅಂಶಗಳ ಸಹಿತ ಕಂಡುಹಿಡಿದು, ಇದನ್ನು ಕ್ರಮೇಣದಲ್ಲಿ ಕಡಿಮೆಮಾಡಬೇಕಾದದ್ದು ಆಡಳಿತ ನಡೆಸುತ್ತಿರುವವರ ಒಂದು ಮುಖ್ಯ ಜವಾಬ್ದಾರಿಯಾಗಿತ್ತು ಎಂದು ನಾವೆಲ್ಲರೂ ತಿಳಿದುಕೊಂಡಿದ್ದೇವೆ.

ಆದರೆ ಇಂಥ ಗಂಡಾಂತರದ ಕಾಲದಲ್ಲಿ ಈ ಆಹಾರ ಕೊರತೆಯನ್ನು ಎದುರಿಸತಕ್ಕ ಸಂದರ್ಭದಲ್ಲಿ ಎಲ್ಲ ಪಾರ್ಟಿಗಳ ಸಹಕಾರವನ್ನು ಕೋರತಕ್ಕದ್ದು ನ್ಯಾಯವಾದ ವಿಷಯವೇನೋ ಹೌದು. ಆದರೆ ಈ ಆಹಾರಕೊರತೆ ಹೇಗೆ ಸಂಭವಿಸಿತೆಂಬುದನ್ನು ಈ ದಿವಸ ವಿಚಾರಮಾಡಲು ನಾವು ಯಾವುದನ್ನು ಮುಖ್ಯವಾಗಿ ಗಮನಿಸಬೇಕಾಗಿತ್ತೋ ಅದನ್ನು ಕೈಬಿಟ್ಟು, ಈ ಕೊರತೆಯ ಸಮಸ್ಯೆಯ ಜೊತೆಗೆ ಆಹಾರದ ಹಂಚಿಕೆ ವಿಷಯವನ್ನೂ ಮಿಶ್ರಮಾಡಿಕೊಂಡಿರುವುದರಿಂದ, ಈ ಬಗ್ಗೆ ನಾವು ಯಾವ ಒಂದು ನಿರ್ದಿಷ್ಟವಾದ ತೀರ್ಮಾನಕ್ಕೂ ಬರಲಾರದೆ ಇದು ಇಲ್ಲಿಯವರೆಗೂ ಮುಂದುವರೆದುಕೊಂಡು ಬಂದಿತ್ತೆಂಬುಗಾಗಿ ಕಂಡುಬರುತ್ತಿದೆ. ಈ ಎರಡರ ಜೊತೆಗೆ ಹೆಚ್ಚು ಆಹಾರ ಬೆಳೆಯಬೇಕೆಂಬ ಮತ್ತೊಂದು ಅಂಶವನ್ನು ಸೇರಿಸಿರುವುದರಿಂದ, ಈ ಸಮಸ್ಯೆ ಇನ್ನೂ ಮತ್ತಷ್ಟು ತೊಡಕಾಗಿ ಹೋಗಿದೆ. ಆದರೆ ನಾವು ಈ ದಿವಸ ಮುಖ್ಯವಾಗಿ ವಿಚಾರ ಮಾಡಬೇಕಾಗಿರತಕ್ಕದ್ದು ಆಹಾರ ಕೊರತೆಯನ್ನು ನೀಗಲು ನಾವು ಏನು ಒಂದು ನಿರ್ದಿಷ್ಟವಾದ ನೀತಿಯನ್ನು ಅನುಸರಿಬೇಕಾಗಿರುತ್ತದೆಯೆಂಬ ಬಗ್ಗೆ ಒಂದು ತೀರ್ಮಾನಕ್ಕೆ ಬರತಕ್ಕದ್ದು. ಇದಕ್ಕಾಗಿ ನಾವು ಇಲ್ಲಿಯವರೆಗೂ ಕೋಟ್ಯಾಂತರ ರೂಪಾಯಿಗಳನ್ನು ಖರ್ಚುಮಾಡುತ್ತಾ ಬಂದಿದ್ದೇವೆ. ಆದರೇ ಏನೂ ಪ್ರಯೋಜನ ವಾಗಿಲ್ಲ. ಇಷ್ಟೊಂದು ಅಪಾರ ಹಣವನ್ನು ಖರ್ಚು ಮಾಡಿದ್ದಾಗ್ಯೂ ರೈತಾಪಿ ಜನರಿಗೆ ಏನು ಉತ್ತೇಜನ ದೊರೆಯಬೇಕಾಗಿತ್ತೋ ಅದು ಅವರಿಗೆ ದೊರೆಯದೆ ಅವರಿಗೆ ಇದರಿಂದ ಏನೊಂದು ಉಪಕಾರವಾದಂತಾಗಲಿಲ್ಲ. ಈ ಒಂದು

F-3

ಮುಖ್ಯಕಾರಣದಿಂದ ಆಹಾರಧಾನ್ಯಗಳ ಬೆಲೆ ದಿನೇ ದಿನೇ ಹೆಚ್ಚಾಗುವುದಕ್ಕೆ ಬದಲಾಗಿ ದಿನೇ ದಿನೇ ಕಡಿಮೆ ಯಾಗುತ್ತಿರುವುದು ಕಂಡುಬರುತ್ತದೆ. ಉದಾಹರಣೆಗಾಗಿ ಹೇಳುವುದಾದರೆ, ಸುಮಾರು 8 ಸಾವಿರ ಎಕರೆಗಳಲ್ಲಿ ಬೆಳೆಸಲಾಗುತ್ತಿದ್ದು ಹಿಪ್ಪುನೇರಳೆ, ವ್ಯವಸಾಯವು ಈ ದಿವಸ 22 ಸಾವಿರ ಎಕರೆವರೆಗೂ ಮುಂದುವರಿಸಲ್ಪಟ್ಟಿದೆ. ಕೊಳ್ಳೇಗಾಲದವರೆಗೂ ಬರಿ ಹಿಪ್ಪುನೇರಳೆ ವ್ಯವಸಾಯುವೇ ಮುಖ್ಯವಾದ ವ್ಯವಸಾಯವಾಗಿಹೋಗಿದೆ. ಅದೇ ರೀತಿ ಹಾಸನ ಜಿಲ್ಲೆಯಲ್ಲಿ ಆಲೂಗಡ್ಡೆಯ ಬೆಳೆಯೂ, ಚಿತ್ರದುರ್ಗ ಜಿಲ್ಲೆಯಲ್ಲಿ ನೆಲಗಡಲೇಕಾಯಿಯು ವ್ಯವಸಾಯವೂ ಅಧಿಕಪ್ರಮಾಣದಲ್ಲಿ ಮುಂದುವರಿಯುತ್ತಿರುವುದರಿಂದ ಆಹಾರ ಧಾನ್ಯಗಳ ಉತ್ಪತ್ತಿಯು ದಿನೇ ದಿನೇ ಕಡಿಮೆಯಾಗುತ್ತಿದೆ. ಹಣವೊಂದಿದ್ದರೆ ಯಾವಾಗ ಬೇಕಾದರೂ, ಎಲ್ಲಿಬೇಕಾದರೂ ಯಾವ ಸಾಮಾನಾದರೂ ಸಿಕ್ಕಿಯೇ ಸಿಕ್ಕುತ್ತದೆಯೆಂಬ ಭರವಸೆ ಜನರಲ್ಲಿ ಉಂಟಾದ ಕಾರಣ, ಅವರು ರಾಗಿ, ಜೋಳ ಇತ್ಯಾದಿ ಆಹಾರ ಧಾನ್ಯಗಳನ್ನು ಬೆಳೆಯುವುದಕ್ಕೆ ಬದಲಾಗಿ ಕಮರ್ಷಿಯಲ್ ಕ್ರಾಪ್ಸ್‌ಗಳನ್ನೇ ಬೆಳೆಯಲು ಪ್ರಾರಂಭಿಸಿದ್ದಾರೆ.

ಈ ಕಾರಣದಿಂದಲೇ ಒಂದೊಂದು ಜಿಲ್ಲೆಯಲ್ಲೂ ಒಂದೊಂದು ಕಮರ್ಷಿಯಲ್ ಬೆಳೆ ದಿನ ದಿನಕ್ಕೂ ಅಧಿಕವಾಗುತ್ತಾ ಬರುತ್ತಿದೆ. ಅದಕ್ಕಾಗಿ ನಾವು ಎಂದಿನವರೆಗೆ ಈ ಕಂಟ್ರೋಲುಗಳನ್ನು ಇಟ್ಟುಕೊಂಡಿರುತ್ತೇವೆಯೋ ಅಂದಿನತನಕವೂ ಈ ಬೆಳೆಗಳ ಮೇಲೆ ಒಂದು ಹತೋಟಿಯನ್ನು ಇಟ್ಟುಕೊಳ್ಳಲೇ ಬೇಕು. ಎಲ್ಲೆಲ್ಲಿ ಆಹಾರ ಧಾನ್ಯಗಳ ಬೆಳೆಯನ್ನು ಉದಾಸೀನಮಾಡಿ, ಬೇರೆ ವಿಧವಾದ ಬೆಳೆಗಳನ್ನು ತೆಗೆಯುತ್ತಿದ್ದಾರೆಂಬ ಬಗ್ಗೆ ಸರ್ಕಾರದವರು ನಿಗಾ ಇಡಬೇಕು. ಹಾಗೆ ಮಾಡುವುದರ ಜೊತೆಗೆ ನಮಗೆ ಯಾವ ವಸ್ತುಗಳ ಅವಶ್ಯಕತೆ ಹೆಚ್ಚಾಗಿರುತ್ತದೋ ಅಂಥ ಬೆಳೆಗೆ ಹೆಚ್ಚಿಗೆ ಸೌಕರ್ಯಗಳನ್ನು ಕೊಡದೆ ವಿಶ್ವೇಶ್ವರಯ್ಯ ನಾಲಾ ಕೆಳಗೆ ಕಬ್ಬಿನ ಬೆಳೆಗೆ ಹೆಚ್ಚಿನ ಪ್ರಾಶಸ್ತ್ಯವನ್ನು ಕೊಟ್ಟು, ಸಕ್ಕರೆ ಉತ್ಪತ್ತಿಮಾಡುವುದಕ್ಕೆ ಹೆಚ್ಚಿನ ಗಮನವನ್ನು ಕೊಡುತ್ತಿದ್ದಾರೆ.

ಶ್ರೀ ಕೆ.ವಿ.ಶಂಕರಗೌಡ (ಮಂಡ್ಯ) - ಆ ನಾಲೆಯ ಕೆಳಗೆ ಒಟ್ಟು ಜಮೀನಿರತಕ್ಕದ್ದು ಒಂದು ಲಕ್ಷ 20 ಸಾವಿರ ಎಕರೆಗಳು. ಆ ಪೈಕಿ ಕಬ್ಬನ್ನು ಬೆಳೆಸುತ್ತಿರುವುದು ಕೇವಲ 20 ಸಾವಿರ ಎಕರೆಗಳ ಪ್ರದೇಶದಲ್ಲಿ ಮಾತ್ರ.

Mr. SPEAKER.-Just to facilitate discussion, I would suggest to yout to give the figures relating to the extent of land under commercial crops about four years back and now. If you can give those figures that would be helpful to us.



ಶ್ರೀ ಎಸ್.ಗೋಪಾಲಗೌಡ - ನನ್ನ ಹತ್ತಿರ ಸಾಕಷ್ಟು ಅಂಕಿ ಅಂಶಗಳಿರುತ್ತವೆ. ಆದರೆ ಈಗ ತಕ್ಷಣಕ್ಕೆ ಅವುಗಳನ್ನು ಕೊಡಬೇಕೆಂದರೆ ನನ್ನಿಂದ ಸಾಧ್ಯವಿಲ್ಲ. ಪ್ರಕೃತಿ ಸಂದರ್ಭದಲ್ಲಿ ಆ ಅಂಕಿ ಅಂಶಗಳನ್ನೆಲ್ಲಾ ಕೊಡಬೇಕಾದದ್ದು ಅಪ್ರಕೃತವೆಂದು ನನಗೆ ಕಂಡುಬರುತ್ತದೆ. ಈ ಅಂಶಗಳೆಲ್ಲಾ ನನಗೆ ಚೆನ್ನಾಗಿ ಮನದಟ್ಟಾಗಿರುವಂಥವುಗಳಾಗಿವೆ. ನನಗೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟರೆ ತಾವು ಕೇಳುತ್ತಿರುವ ಅಂಕಿ ಅಂಶಗಳೆಲ್ಲವನ್ನು ನಾನು ಒದಗಿಸುತ್ತೇನೆ.

ಶ್ರೀ ಮುಲ್ಕಾ ಗೋವಿಂದರೆಡ್ಡಿ (ಚಿತ್ರದುರ್ಗ) - ಈಗ ಶೇಕಡ 12 1/2ಯಷ್ಟು ಕಬ್ಬಿನ ಬೆಳೆ ಜಾಸ್ತಿಯಾಗಿರುತ್ತದೆ.

Mr. SPEAKER.-It is not so. The Government will answer that.

ಒಬ್ಬ ಮಾನ್ಯ ಸದಸ್ಯರು - ಮಾನ್ಯ ಮಂತ್ರಿಗಳಿಗೆ ಗೊತ್ತಿದ್ದರೆ, ಅವರೇ ತಿಳಿಸಿಬಿಡಲಿ.

ಶ್ರೀ ಎಚ್.ಸಿದ್ದವೀರಪ್ಪ - ಆ ವಿಚಾರಗಳನ್ನೆಲ್ಲಾ ನಾನು ಯಾವಾಗ, ಯಾವ ಕಾಲದಲ್ಲಿ ಹೇಳಬೇಕೆಂಬುದು ನನಗೆ ಚೆನ್ನಾಗಿ ಗೊತ್ತಿದೆ.

Sri. J.MOHAMED IMAM.-If the Government take those statistical points and if they place the information before us, we will modify our arguments accordingly.

ಶ್ರೀ ಎಸ್.ಗೋಪಾಲಗೌಡ - ಈ ಆಹಾರಕ್ಕೆ ಸಂಬಂಧಪಟ್ಟ ಬೆಳೆಗಳನ್ನು ಹೆಚ್ಚು ಮಾಡಬೇಕಾದದ್ದು ನಮ್ಮ ಮುಖ್ಯ ಕರ್ತವ್ಯಗಳಲ್ಲಿ ಒಂದಾಗಿದೆ. ಆದಾಗ್ಯೂ ಅದನ್ನು ಸರ್ಕಾರ ಮಾಡುತ್ತಿಲ್ಲವೆಂದು ನಾನು ಸ್ಪಷ್ಟವಾಗಿ ಹೇಳಬೇಕಾಗಿದೆ. ತಾವು ಇಲ್ಲಿಯತನಕ ಜಿ.ಎಂ.ಎಫ್.ಯೋಜನೆಯ ಬಗ್ಗೆ ಮತ್ತು ಸಬ್ಸಿಡಿಗೆಂದು ಒದಗಿಸಲಾಗಿದ್ದ ಪಕ್ಷದಲ್ಲಿ ಇಂದು ಜಮೀನು ಹೀಗೆಲ್ಲಾ ಹಾಳುಬಿದ್ದಿರಲು ಅವಕಾಶವೇ ಇರುತ್ತಿರಲಿಲ್ಲ. ಕಂದಾಯವನ್ನು ಕೊಟ್ಟಿದ್ದಾಗ್ಯೂ ಸಹ ಜಮೀನುಗಳು ಸಾಗುವಳಿಯಾಗದೆ ಹಾಗೆಯೇ ಪಾಳುಬಿದ್ದಿರುತ್ತವೆ.

ಶ್ರೀ ಟಿ.ಎಸ್.ಮೂಡಲಗಿರಿಗೌಡ (ಕುಣಿಗಲ್) - ಸ್ವಾಮಿ, ನಾನೀಗ ಒಂದು ಕ್ರಿಯಾಲೋಪವನ್ನು ಸೂಚಿಸಬೇಕಾಗಿದೆ. ಈಗ ನಾವು ಸಭೆಯ ಮುದೆ ಏನು ವಿಚಾರವಿರುತ್ತದೆಯೋ ಅದರ ಮೇಲೆ ಮಾತನಾಡದೆ, ಅವರು ಯಾವುದೋ ವಿಷಯಗಳ ಮೇಲೆಲ್ಲಾ ಮಾತನಾಡುತ್ತಿದ್ದಾರೆ. ಅದು ಸರಿಯಾದುದಲ್ಲ.

Mr. SPEAKER. - You have got one minute more.

ಶ್ರೀ ಎಸ್.ಗೋಪಾಲಗೌಡ - I am recollecting, because I was interrupted. ಹೀಗೆ ನ್ಯಾಯವಾಗಿರತಕ್ಕ ವಿಚಾರಗಳನ್ನೆಲ್ಲಾ ರೆಲೆವೆಂಟಲ್ಲವೆಂದು ಹೇಳುತ್ತ, ಕೇವಲ ಇರ್ರೆಲವೆಂಟ್ ಆಗಿರತಕ್ಕ ಅಂಶಗಳಿಗೇ ಹೆಚ್ಚಿಗೆ ನಿಗಾ ಕೊಡುತ್ತಿರುವುದರಿಂದ ಈ ಸಮಸ್ಯೆಯನ್ನು ಇಲ್ಲಿಯತನಕವೂ ಬಗೆಹರಿಸಲು ಸಾಧ್ಯವಾಗಿರುವುದಿಲ್ಲವೆಂದು ನಾನು ಹೇಳುತ್ತೇನೆ. ಮನಸ್ಸು ಬಿಚ್ಚಿ ಈ ವಿಷಯಗಳನ್ನೆಲ್ಲಾ ಇದ್ದಕ್ಕಿದ್ದ ಹಾಗೆಯೇ ಹೇಳಿದ್ದೇನೆಯೇ ಹೊರತು ಮತ್ತೇನೂ ಇಲ್ಲ. ಅವರು ಈ ಕಾರಣಕ್ಕಾಗಿ 12 ಲಕ್ಷ ಪಲ್ಲ ಧಾನ್ಯ ಶೇಖರಣೆ ಮಾಡಬೇಕಾಗಿರುತ್ತೆಂದು ಹೇಳಿದ್ದರೂ ಅದು ಸಾಲದೇ ಬರುವುದರಿಂದ ಬಹಳಮಟ್ಟಿಗೆ 20 ಲಕ್ಷ ಪಲ್ಲಗಳನ್ನಾದರೂ ಶೇಖರಣೆ ಮಾಡಬೇಕಾಗಿದೆ. ಹೀಗೆ ಧಾನ್ಯಗಳನ್ನು ತರಿಸಿಕೊಂಡು ತಿನ್ನುವಂಥ ಜನರು ಕೇವಲ ಬೆಂಗಳೂರು, ದಾವಣಗೆರೆ ಮತ್ತು ಕೆ.ಜಿ.ಎಫ್. ಈ ಮೂರು ಸ್ಥಳಗಳಲ್ಲೇ ಅಲ್ಲದೆ, ಇನ್ನೂ ಬೇರೆ ಕಡೆಗಳಲ್ಲಿ ಹೆಚ್ಚಾಗಿಯೇ ಇದ್ದಾರೆ. ನೂರಾರು ಹಳ್ಳಿಗಳಲ್ಲಿ ಕೊಂಡು ತಿನ್ನತಕ್ಕಂಥ ಜನಗಳಿದ್ದರೂ ಅವರಿಗೆ ಈ ಕಾಳನ್ನು ಸರಬರಾಯಿಮಾಡದೆ ಅವರು ನೆರೆ ಮನೆಗಳಿಗೆ ಹೋಗಿ ಭಿಕ್ಷೆ ಬೇಡಿಕೊಂಡು ಬಂದು ತಿನ್ನುವಂಥ ಸ್ಥಿತಿಗೆ ಗುರಿಮಾಡಿದ್ದೀರಿ. ಅವರಿಗೆ ಈ ಕಂಟ್ರೋಲ್‌ನಲ್ಲಿ ದವಸ ಸಿಕ್ಕುತ್ತಿಲ್ಲ. ಹೀಗೆಲ್ಲಾ ಆಗಿ ಈ ದಿವಸ ಈ ಕಂಟ್ರೋಲ್ ಎಂಬುದು ಒಂದು ಭಯಾನಕ ಸ್ಥಿತಿಗೆ ಬಂದು, ಪೋಲೀಸಿನವರು ಮನೆಗಳಿಗೆ ನುಗ್ಗಿ ಜನರು ತಿನ್ನಲು ಬಿಡದಂತೆ ಅದನ್ನೆಲ್ಲಾ ಕಿತ್ತುಕೊಂಡುಹೋಗಿ ಬೇರೆ ಎಲ್ಲಿಯೋ ಇರತಕ್ಕವರಿಗೆ ಕೊಡುತ್ತಿದ್ದಾರಲ್ಲ, ಎಂಬ ಒಂದು ಭಯಾನಕ ಕೂಗು ಕಳೆದ 8-10 ವರ್ಷಗಳಿಂದಲೂ ಕೇಳಿಬರುತ್ತಿದೆಯೇ ವಿನಾ ಅದಕ್ಕೆ ಯಾವ ರೀತಿಯಲ್ಲೂ ಒಂದು ಸೂಕ್ತವಾದ ಪರಿಹಾರ ಮಾರ್ಗವನ್ನು ಕಂಡು ಹಿಡಿಯಲು ಆಗಿಲ್ಲ.

ಅನೇಕ ಸದಸ್ಯರುಗಳು ದರದ ವಿಷಯವಾಗಿ ಮಾತನಾಡುತ್ತ ಈಗ ನಾವು ಅನುಸರಿಸುತ್ತಿರುವ ನೀತಿಯಲ್ಲಿ ಅನೇಕ ಲೋಪ ದೋಷಗಳು, ನ್ಯೂನತೆಗಳಿರುತ್ತವೆ. ಒಂದು ಮಗುವಿಗೆ ನೂರಾರು ಇಂಜಕ್ಷನ್‌ಗಳನ್ನು ಕೊಟ್ಟು ಬಂದಿರತಕ್ಕ ಕಾಯಿಲೆಯನ್ನು ವಾಸಿಮಾಡಲಿಕ್ಕಾಗದೆ ಅದನ್ನು ಕೊನೆಗೆ ಧಫನ್ ಮಾಡತಕ್ಕ ರೀತಿಯಲ್ಲಿ, ಈ ಸಮಸ್ಯೆಯನ್ನೂ ಕೂಡ ತಾವು ಇಲ್ಲಿಯತನಕವೂ ಒಂದು ಸುಧಾರಣೆಗೆ ತರಲಾಗದೆ ಇದನ್ನು ಈ ಮಟ್ಟಕ್ಕೆ ತಂದಿರುವುದಾಗಿದೆ. ಹೀಗೆ ಏನೊಂದು ಪ್ರಯೋಜನಕರವಾದ ಸುಧಾರಣೆಯನ್ನು ತಾರದೇ ಇದ್ದಗ್ಗೂ ಮುಖ್ಯಮಂತ್ರಿಗಳಾಗಿರತಕ್ಕವರು ಬೊಂಬಾಯಿಗೆ ಹೋಗಿ ಅಲ್ಲಿ "ನಾನು ಬಹಳ ಪಾಪುಲರ್ ಆಗಿಬಿಟ್ಟಿದ್ದೇನೆ" ಎಂದು ಹೇಳಿಕೊಳ್ಳಲು ಅವಕಾಶವಾಯಿತು. ಅಲ್ಲಿಗೆ ಹೋಗಿದ್ದಾಗ "ನಾನು ಕಂಟ್ರೋಲನ್ನು ತೆಗೆದುಹಾಕಿದ್ದರಿಂದ ಬಹಳ ಪಾಪುಲರ್ ಆಗಿಬಿಟ್ಟಿದ್ದೇನೆ" ಎಂದು ಹೇಳಿಕೊಂಡಿರುವುದು ಅಷ್ಟೇನೂ ಸೂಕ್ತವಾಗಿದ್ದಂತೆ ಕಂಡುಬರುತ್ತಿಲ್ಲ.



ಈ ದಿವಸ ಉದ್ಭವಿಸಿರತಕ್ಕ ಪರಿಸ್ಥಿತಿಯಲ್ಲಿ ಈ ಕಂಟ್ರೋಲ್ ಎಂಬುದು ಒಂದು ದೊಡ್ಡ ಪೆಡಂಭೂತವಾಗಿರುತ್ತೆದೆಯೆಂದು ದೇಶಾದ್ಯಂತ ಜನರೆಲ್ಲರೂ ಏಕಕಂಠದಿಂದ ಪ್ರಚಾರ ಕಾರ್ಯಗಳನ್ನು ಮಾಡುತ್ತಿದ್ದರೂ. ನನಗೆ ಇಂದು ಈ ಕಂಟ್ರೋಲನ್ನು ತೆಗೆದುಹಾಕಬೇಕೆಂದು ಹೇಳತಕ್ಕ ಮನಸ್ಸು ಇಲ್ಲ. ನನಗೆ ಒಂದು ಪ್ಲಾನ್ಡ್ ಎಕಾನಮಿಯಲ್ಲಿ ವಿಶ್ವಾಸವಿದೆ. ಈ ದಿವಸ ಈ ಕಂಟ್ರೋಲನ್ನು ತೆಗೆದುಹಾಕಿ ಜನರಿಗೆ ತಿನ್ನಲಿಕ್ಕೆ ಅನ್ನವಿಲ್ಲದೆ ಅವರುಗಳನ್ನೆಲ್ಲಾ ಭಿಕ್ಷುಕರ ಕಾಲೋನಿಗೆ ಸೇರಿಸಬೇಕೆಂದು ಹೇಳುವುದಕ್ಕೆ ನಾನು ತಯಾರಾಗಿಲ್ಲ. ಜನರಿಗೆ ಅತ್ಯಗತ್ಯವಾಗಿ ಅವಶ್ಯಕವಿರತಕ್ಕ ಅನ್ನ-ಬಟ್ಟೆ ಮತ್ತು ಒಂದು ವಸತಿ ಸೌಕರ್ಯ ಇಷ್ಟನ್ನು ಪ್ರತಿಯೊಬ್ಬ ದೇಶದ ಪ್ರಜೆಗೂ ಕಲ್ಪಿಸಿಕೊಡತಕ್ಕದ್ದು ಪ್ರತಿಯೊಂದು ನಾಗರಿಕ ಸರ್ಕಾರದ ಕರ್ತವ್ಯವಾಗಿರುತ್ತದೆ. ದೇಶದ ಆರ್ಥಿಕ ಸ್ಥಿತಿಯು ತೀರ ಹದಗೆಟ್ಟುಹೋಗಿ, ಜನರು ತಮ್ಮ ಜೀವನಕ್ಕೆ ಮಳೆ-ಬೆಳೆಗಳೇ ಮುಖ್ಯ ಕಾರಣವೆಂದು ಒಂದು ಅಸಂಬದ್ಧ ನಂಬಿಕೆಗೆ ಗುರಿಯಾಗಿ ತಿನ್ನಲಿಕ್ಕಿಲ್ಲದೆ ದೇಶದಲ್ಲಿ ಎಲ್ಲಿ ನೋಡಲಿ ಅಸಮಾಧಾನವೇ ಎದ್ದುಕಾಣುತ್ತದೆ. ಪರಿಸ್ಥಿತಿಯು ನಿಜಸ್ವರೂಪ ಹೀಗಿರುವಾಗ ಇದಕ್ಕೆ ಒಂದು ಸೋಗು ಹಾಕಿಕೊಂಡು ಜನರಿಗೆ ತಿನ್ನಲು ಸಾಕಷ್ಟು ಆಹಾರ ಸಾಮಗ್ರಿಗಳನ್ನು ಒದಗಿಸಲು ಸಾಮರ್ಥ್ಯವಿಲ್ಲದೆ ಈ ದಿವಸ ಈ ಕಂಟ್ರೋಲುಗಳನ್ನು ಸಡಿಲ ಮಾಡುತ್ತೇವೆಂದು ಹೇಳುತ್ತಿರುವುದನ್ನು ನೋಡಿದರೆ ದೇಶದಲ್ಲಿ ಅತಿ ಜಾಗ್ರತೆಯಾಗಿ ಸಂಭವಿಸಲಿರುವ ದೊಡ್ಡಕ್ಷಾಮದ ಮಾರಿಗೆ ದೇಶದ ಜನತೆಯನ್ನು ಬಲಿಗೊಡಲು ಇದೊಂದು ಸನ್ನಾಹವೆಂದು ಕಂಡು ಬರುತ್ತಿದೆ.

## ಶಿಕ್ಷಣ ಸುಧಾರಣಾ ಮಸೂದೆ ಕುರಿತು 1953

ಅಧ್ಯಕ್ಷರೇ, ಸಭೆಯ ಮುಂದೆ ಮಹತ್ತರವ್ವಾದ ಮತ್ತು ಒಂದು ಘನವಾದ ವಿಷಯ ಚರ್ಚೆಗೆ ಬಂದಿದೆ. ವಿದ್ಯಾಭ್ಯಾಸದ ವಿಷಯದಲ್ಲಿ ಹೆಚ್ಚು ಸಲಹೆಗಳನ್ನು ಕೊಡುವುದಕ್ಕೆ ಮತ್ತು ಈಗಿರತಕ್ಕ ಎಲ್ಲಾ ನ್ಯೂನತೆಗಳನ್ನೂ ಸಭೆಯ ಮುಂದೆ ಇಡುವುದಕ್ಕೆ ನನಗೆ ಹೆಚ್ಚು ಕಾಲಾವಕಾಶವಿಲ್ಲದೆ ನಾನು ಈ ವಿಷಯದಲ್ಲಿ ತಜ್ಞನೇನೂ ಅಲ್ಲ; ನನಗೆ ತಿಳಿದ ಕೆಲವು ವಿಷಯಗಳನ್ನು ಈ ಸಭೆಯ ಮುಂದೆ ಪ್ರತಿಪಾದಿಸಬೇಕು ಎಂದು ಇದ್ದೇನೆ. ಈಗಾಗಲೇ ಮಾನ್ಯ ಸದಸ್ಯರನೇಕರು ಅನೇಕ ಸಲಹೆಗಳನ್ನು ಕೊಟ್ಟಿದ್ದಾರೆ; ವಿದ್ಯಾಭ್ಯಾಸ ನಮ್ಮ ರಾಷ್ಟ್ರದ ಜೀವನದಲ್ಲಿ ಒಂದು ಮಹತ್ತರವಾದ ಅತಿ ಮುಖ್ಯ ಪಾತ್ರವನ್ನು ವಹಿಸುತ್ತಾ ಬಂದಿದೆ. ಯಾವ ರಾಷ್ಟ್ರದಲ್ಲೇ ಆಗಲಿ ಆ ರಾಷ್ಟ್ರದ ಜನತೆಯ ನಡೆನುಡಿ, ಅಚಾರ-ವ್ಯವಹಾರ, ಭಾಷಾಜ್ಞಾನ ಮತ್ತು ಉದ್ಯೋಗ ಪ್ರತಿಯೊಂದೂ ಸಹ ಅಲ್ಲಿನ ವಿದ್ಯಾಭ್ಯಾಸದ ಮೇಲೆ ನಿಂತಿರುತ್ತದೆ. ನಮ್ಮ ದೇಶದಲ್ಲಿ ಒಂದು ಐತಿಹಾಸಿಕ ಕಾರಣದಿಂದಾಗಿ, ಪೂರ್ವದಿಂದ ನಡೆದುಕೊಂಡು ಬಂದಿರತಕ್ಕ ವಿದ್ಯಾಭ್ಯಾಸ ಕ್ರಮಕ್ರಮವಾಗಿ ಪರಕೀಯರ ವಿದ್ಯಾಭ್ಯಾಸಕ್ಕೆ ಸ್ಥಳ ಮಾಡಿಕೊಟ್ಟಿತು ಮತ್ತು ನಾವು ಇಂದು ಒಂದು ಬಾರಿ ಕವಲೊಡೆಯುವ ಸ್ಥಳದಲ್ಲಿ ನಿಂತಿದ್ದೇವೆ ಎಂದು ಹೇಳಬಹುದು. ಬ್ರಿಟಿಷರು ನಮ್ಮನ್ನು ಬಿಟ್ಟುಹೋಗಿದ್ದಾರೆ. ಹೋಗುವಾಗ ಹಿಂದುಗಡೆಯಲ್ಲಿ ಅವರ ಒಂದು ಭಾಷೆಯನ್ನೂ ಒಂದು ವಿದ್ಯಾಭ್ಯಾಸದ ಕ್ರಮವನ್ನೂ ನಮ್ಮ ದೇಶದಲ್ಲಿ ಬಿಟ್ಟು ಹೋಗಿದ್ದಾರೆ. ಈಗ 30 ವರ್ಷಗಳಿಂದೀಚೆಗೆ ನಮ್ಮ ದೇಶದ ಒಂದು ಅರ್ಥಿಕ ಮಟ್ಟ ಮತ್ತು ಜನಸಂಖ್ಯೆಯ ಮೇಲೆ ಅದನ್ನು ಮಾರ್ಪಾಡುಮಾಡಬೇಕು, ರಾಷ್ಟ್ರದ ಜನಜೀವನವನ್ನು ರೂಪಿಸತಕ್ಕ ಒಂದು ವಿದ್ಯಾಭ್ಯಾಸವನ್ನಾಗಿ ಅದನ್ನು ಪರಿವರ್ತನೆಮಾಡಬೇಕು ಎಂಬುದಾಗಿ ಈಗಾಗಲೇ ಅನೇಕ ತಜ್ಞರು ಮತ್ತು ರಾಷ್ಟ್ರವಾದಿಗಳು ನಮಗೆ ಸಲಹೆಗಳನ್ನು ಕೊಟ್ಟಿದ್ದಾರೆ. ಅದರೆ ಈಗಿರತಕ್ಕ ಒಂದು ಪದ್ಧತಿಯನ್ನು ರೂಢಮೂಲವಾಗಿ ಅಥವಾ ಕ್ರಾಂತಿಕಾರಕವಾಗಿ ಬದಲಾವಣೆಮಾಡಬೇಕಾದರೆ ಅದು ಬಹಳ ದಾರ್ಷ್ಟ್ಯದ ಕೆಲಸ ಮತ್ತು ಅದಕ್ಕೆ ಎಲ್ಲರೂ ಸಹಕಾರ ನೀಡಿದ ಹೊರತು ಸಾಧ್ಯವಾಗದು, ವಿದ್ಯಾರ್ಥಿಗಳ ಸಹಕಾರ ಬೇಕು, ತಂದೆತಾಯಿಗಳ ಸಹಕಾರಬೇಕು. ವಿದ್ಯಾದಾನಮಾಡತಕ್ಕ ಉಪಾಧ್ಯಾಯರ ಸಹಕಾರಬೇಕು, ಮೇಲಾಗಿ ವಿದ್ಯಾಭ್ಯಾಸವನ್ನು ನಡೆಸಿಕೊಂಡು ಹೋಗುವುದಕ್ಕೆ ಹಣವನ್ನು ಒದಗಿಸತಕ್ಕ ಸಂಸ್ಥೆ, ಸರ್ಕಾರ ಆ ಒಂದು ಹೊರೆಯನ್ನು ಹೊರಬೇಕು.

ಈ ಪರಿಸ್ಥಿತಿಯಲ್ಲಿ ಬದಲಾವಣೆ ಮಾಡಬೇಕು ಎಂಬುದು ಬಹಳ ಜನರ ಅಭಿಪ್ರಾಯವಾದರೂ ಕೂಡ ಈಗರತಕ್ಕ ಪದ್ಧತಿಯಲ್ಲಿ ಯಾವ ಬದಲಾವಣೆ ಮಾಡಬೇಕೆಂಬ ವಿಷಯದಲ್ಲಿ ಇನ್ನೂ ಒಂದು ತೀರ್ಮಾನಕ್ಕೆ ಬಂದಿಲ್ಲ. ಇದು ಬಹಳ ಗಹನವಾದ ವಿಷಯ. ಮತ್ತು ನಮ್ಮ ಜೀವನವನ್ನೇ ಪೂರ್ಣ ಮಾರ್ಪಾಟುಮಾಡತಕ್ಕ ವಿಷಯ. ಈಗ ನಾವು ಪರಿಶೀಲನೆಮಾಡಿ ನೋಡಿದರೆ ನಮ್ಮ ದೇಶದಲ್ಲಿ ಕಳೆದ 100-200 ವರ್ಷಗಳಿಂದ ನಾವು

---

ವಿಧಾನ ಸಭೆ ನಡವಳಿಕೆ ದಿನಾಂಕ: 6.8.1959



ಪಡೆದ ವಿದ್ಯಾಭ್ಯಾಸದ ಫಲವಾಗಿ ಇವೊತ್ತು ನಾವು ಎಷ್ಟೋ ಸಮಸ್ಯೆಗಳನ್ನು ಎದುರಿಸಬೇಕಾಗಿ ಬಂದಿದೆ. ಇವೊತ್ತು ಒಂದು ಕಡೆಯಿಂದ ವಿದ್ಯಾಭ್ಯಾಸಕ್ಕೆ ಹೆಚ್ಚು ಸಂಖ್ಯೆಯಲ್ಲಿ ವಿದ್ಯಾರ್ಥಿಗಳು ಬರುತ್ತಾ ಇದ್ದಾರೆ. ಆ ರೀತಿ ಹೆಚ್ಚು ಸಂಖ್ಯೆಯಲ್ಲಿ ಬರತಕ್ಕ ವಿದ್ಯಾರ್ಥಿಗಳಿಗೆ ಎಸ್.ಎಸ್.ಎಲ್.ಸಿಯಲ್ಲಿ ಇ.ಸಿ.ಪಿ.ಎಸ್. ಕೊಟ್ಟರೆ ಅವರನ್ನು ಕಾಲೇಜಿಗೆ ಸೇರಿಸಲು ಅಷ್ಟು ಕಾಲೇಜುಗಳು ನಮ್ಮಲ್ಲಿ ಇಲ್ಲ. ಈ ಒಂದು ವಿದ್ಯಾಭ್ಯಾಸ ಕೊನೆಯವರೆಗೂ, ಸಾಮರ್ಥ್ಯವಿರುವಷ್ಟೂ ಕೊಡೋಣ ಎಂದರೆ ಮತ್ತೆ ಒಂದು ಅಂಥಧೇ ದೊಡ್ಡ ಪ್ರಶ್ನೆ ಎದ್ದು ನಿಲ್ಲುತ್ತದೆ.

ಇದಕ್ಕೆ ಕಾರಣ, ನಮ್ಮಲ್ಲಿ ಬೆಳೆದುಬಂದಿರುವ ಒಂದು out look ಅಥವಾ ಮನೋಭಾವ; ತಂದೆತಾಯಿಗಳಿಲ್ಲದೆ ವಿದ್ಯಾರ್ಥಿಗಳಲ್ಲೂ ಕೂಡ ಇದು ಇದೆ. ಏನೆಂದರೆ, ಈ ಹೊತ್ತು ಹೆಚ್ಚು ವಿದ್ಯಾಭ್ಯಾಸ ಪಡೆದಿರತಕ್ಕಂಥವರೇ ಮುಂದೆ ಜೀವನದಲ್ಲಿ ಹೆಚ್ಚು ಅವಕಾಶವನ್ನು ಪಡೆಯತಕ್ಕವರು ಮತ್ತು ಅವರಿಗೇ ಸಮಾಜದಲ್ಲಿ ಘನತೆ ಗೌರವ ದೊರೆಯತಕ್ಕಂಥಾದ್ದು ಎಂಬ ಭಾವನೆ ಮೂಡಿದೆ. ಅದಕ್ಕಾಗಿಯೇ ತಾನು ಸಾಕಷ್ಟು ಉಚ್ಚಶಿಕ್ಷಣ ಪಡೆಯಬೇಕು. ಬಿ.ಎ; ಎಂ.ಎ. , ಡಿಗ್ರಿಯನ್ನು ಪಡೆಯಬೇಕೆಂಬ ಮನೋಭಾವ ಸಹಜವಾಗಿಯೇ ಎಲ್ಲರಲ್ಲೂ ಹುಟ್ಟಿದೆ. ಆದರೆ ಈ ಹೊತ್ತು ಸಮಾಜದ, ದೇಶದ ಸಂಪತ್ತನ್ನು ಮತ್ತು ವಿದ್ಯಾಸಂಸ್ಥೆಗಳ ಪರಿಮಿತಿಯನ್ನು ನೋಡಿಕೊಂಡರೆ ಅವರೆಲ್ಲರಿಗೂ ಸರ್ಕಾರದಲ್ಲಿ ಸ್ಥಳಗಳನ್ನು ಕಲ್ಪಿಸಿಕೊಡುವುದಕ್ಕಾಗುವುದಿಲ್ಲ. ಒಂದು ಉದಾಹರಣೆ ಸೂಚಿಸುವುದಾದರೆ, ಮೆಡಿಕಲ್ ಸ್ಕೂಲಿನಲ್ಲಿ 100 ವಿದ್ಯಾರ್ಥಿಗಳಿಗೆ ಸ್ಥಾನ ಕೊಡಬಹುದೆಂದು ಹೇಳಿದರೆ, ಅದಕ್ಕೆ, 1,700 ಜನ ಅಭ್ಯರ್ಥಿಗಳು ಬಂದರೆ, ಈ ಸಮಸ್ಯೆಯನ್ನು ಯಾವ ರೀತಿ ಪರಿಹರಿಸಬೇಕೆಂಬುದನ್ನು ನೀವೇ ಯೋಚನೆಮಾಡಬೇಕು. ಇದಕ್ಕೆ ಕಾರಣವೇನೆಂಬುದನ್ನು ಹೇಳಬೆಕಾಗಿಲ್ಲ. ಒಂದು ಕಡೆ ಈ ಕಷ್ಟ ಪರಿಸ್ಥಿತಿ ದಿನೇ ದಿನೇ ಉಲ್ಬಣಿಸುತ್ತಿದೆ. ಇನ್ನೊಂದು ಕಡೆ ಯೂನಿವರ್ಸಿಟಿಗಳಲ್ಲಿ ಮತ್ತು ಕಾಲೇಜುಗಳಲ್ಲಿ ಪಾಸಾಗಿರುವ ಸಂಖ್ಯೆಯನ್ನು ನೋಡಿದರೆ ಅಲ್ಲಿ ತೇರ್ಗಡೆಯಾಗುವವರ ಸಂಖ್ಯೆ ತೀರಾ ಕಡಿಮೆ. ಈ ವಿದ್ಯಾಭ್ಯಾಸಕ್ಕೆ ಇಷ್ಟು ಹೆಚ್ಚು ಖರ್ಚುಮಾಡಿದರೂ ಇಷ್ಟು ಕಡಿಮೆ ಸಂಖ್ಯೆಯಲ್ಲಿ-ಶೇಕಡ 15ರಷ್ಟು, 20ರಷ್ಟು ಪಾಸಾಗಿದ್ದಾರೆಂದರೆ ಸರ್ಕಾರದ ಹಣ ಎಷ್ಟು ವ್ಯರ್ಥವಾದಂತಾಯಿತು. ಹೆಚ್ಚು ಜನರು ಪಾಸಾಗದಂತೆ ಮಾಡಿ ಮುಂದೆ ಹೆಚ್ಚು ಜನರು ಕಾಲೇಜಿಗೆ ಬಾರದಿರಲಿ ಮತ್ತು ಈಗಿನ ಹುಡುಗರಿಗೆ ಸರಿಯಾದ Standard ಇಲ್ಲ, ಆದ್ದರಿಂದ ಪರೀಕ್ಷೆಯನ್ನು ಸ್ವಲ್ಪ ಕಠಿಣವಾಗಿ ಮಾಡಬೇಕೆಂಬ ನೀತಿಯಿದ್ದರೂ ಕೂಡ, ಈ ರೀತಿಯಾಗಿ ವಿದ್ಯಾರ್ಥಿಗಳನ್ನು ಇಟ್ಟುಕೊಂಡು, ಪರೀಕ್ಷೆಗಳಲ್ಲಿ ಕಡಿಮೆ ಸಂಖ್ಯೆಯಲ್ಲಿ ಪಾಸುಮಾಡಿಸುವುದು ದೇಶದ ಹಿತದೃಷ್ಟಿಯಿಂದ, ಮಕ್ಕಳ ವಯಸ್ಸಿನ ದೃಷ್ಟಿಯಿಂದ ಸರಿಯಲ್ಲ, ನಾನೂ ಈ ವಿದ್ಯಾಭ್ಯಾಸ ಸುಧಾರಣಾ ಸಮಿತಿಯಲ್ಲಿ ಒಬ್ಬ ಸದಸ್ಯನಾಗಿದ್ದೆ. ಸದಸ್ಯನಾಗಿದ್ದರೂ, ನಾನೇನೂ ಅಲ್ಲಿ ಒಬ್ಬ ತಜ್ಞನಂತೆ ಪಾತ್ರವಹಿಸಿರಲಿಲ್ಲ. ಯಾವರೀತಿ, ಒಬ್ಬ ತಂಗಿಗೋ ಅಥವಾ ತಮ್ಮನಿಗೋ ಖಾಯಿಲೆಯಾದರೆ ಅದಕ್ಕೆ ಸಂಬಂಧಪಟ್ಟಿರುವ ಡಾಕ್ಟರುಗಳು ಚಿಕಿತ್ಸೆ ಮಾಡುವುದನ್ನು ನಿಂತು

ಆಸಕ್ತಿಯಿಂದ ನೋಡುತ್ತಿರುವ ಹಾಗೆ ನಾನೂ ಆ ಕಮಿಟಿಯ ಮೀಟಿಂಗುಗಳಲ್ಲಿದ್ದು ಅಲ್ಲಿನ ಕಾರ್ಯ ಕಲಾಪಗಳಲ್ಲಿ ಭಾಗವಹಿಸಿದ್ದೆ. ಮತ್ತು ಈ ವರದಿಯ ಮೇಲೆ ನನ್ನ ಯಾವುದೇ ತೆರನಾದ dissenting ನೋಟವನ್ನಾಗಲಿ ಕೊಟ್ಟಿಲ್ಲ. ಆದ್ದರಿಂದ ಈ ಸಂದರ್ಭದಲ್ಲಿ ನಾನು ಆ ಸಮಿತಿಯಲ್ಲಿದ್ದ ಕಾರಣಕ್ಕಾಗಿ ಆ ಸಮಿತಿಯ ಶಿಫಾರಸುಗಳನ್ನು ಒಪ್ಪಲೇಬೇಕೆಂಬ ನಿರ್ಬಂಧ ಏನೂ ಇಲ್ಲವೆಂದು ಭಾವಿಸಿ ನನ್ನ ಈ ಕೆಲವು ಅಭಿಪ್ರಾಯಗಳನ್ನು ಎರಡೇ ನಿಮಿಷದಲ್ಲಿ ಸಭೆಗೆ ತಿಳಿಸಲು ನಿಂತಿದ್ದೇನೆ.

ಈ ವರದಿಯೇನೋ ಸಿದ್ಧವಾಗಿದೆ. ಇದು ನಿಜವಾಗಿಯು ಅಮೂಲ್ಯವಾದ ವರದಿ. ಇದಕ್ಕೆ ಖರ್ಚಾಗಿರುವ ಹಣದ ದೃಷ್ಟಿಯಿಂದ ನೋಡಿದರೆ, ಇದಕ್ಕಾಗಿ ಐವತ್ತು ಸಾವಿರ ರೂಪಾಯಿ ಖರ್ಚಾಗಿದೆ ಎಂಬುದನ್ನು ನಾವು ಮರೆಯಬಾರದು. ಇದರಲ್ಲಿ ನಾನು ಓದಿ ತಿಳಿದುಕೊಂಡಿರುವ ಹಾಗೆ, ಈ ಹೊತ್ತು ಸಾಮಾನ್ಯವಾಗಿ ನಮ್ಮ ವಿದ್ಯಾಭ್ಯಾಸದ ವ್ಯವಸ್ಥೆಯಲ್ಲಿರತಕ್ಕ ನ್ಯೂನತೆಯನ್ನು ತೋರ್ಪಡಿಸುವುದರಲ್ಲಾಗಲೀ ಅಥವಾ ಅಲ್ಲಿ ಯಾವುದೇ ಒಪ್ಪಂದಕ್ಕೆ ಬಂದು ಇದಕ್ಕೆ ಪರಿಹಾರವನ್ನು ಸೂಚಿಸಿರುವುದರಲ್ಲಾಗ ಯಾವುದೊಂದು ದೋಷವೂ ಇಲ್ಲ. ಇದು ನಮ್ಮ ದೇಶದಲ್ಲಿರತಕ್ಕ ವಿದ್ಯಾಭ್ಯಾಸದ ಪೂರ್ಣ ಚಿತ್ರವನ್ನು ನಮಗೆ ಕೊಡುತ್ತದೆ. ನಮ್ಮ ದೇಶದ ಆರ್ಥಿಕ ಸಾಮಾಜಿಕ ಕ್ಷೇತ್ರಗಳಲ್ಲಿ ಈಗಿನ ವಾತಾವರಣ ಕ್ರಾಂತಿಗೆ ಪಕ್ವವಾಗಿದೆ. ಎಂದು ತಿಳಿದುಕೊಂಡಿರುವರಲ್ಲಿ ನಾನೊಬ್ಬ. ಇದರ ಅಂಗವಾಗಿಯೇ ವಿದ್ಯಾಭ್ಯಾಸ ಕ್ಷೇತ್ರದಲ್ಲಿ ಕೂಡ ಮೂಲಭೂತ ಕ್ರಾಂತಿಕಾರಕ ಬದಲಾವಣೆಯಾಗಬೇಕಾದುದು ಎಂದಿಗಿಂತ ಇಂದು ಅಗತ್ಯವಾಗಿದೆ. ಮೊನ್ನೆ ಹಣಕಾಸಿನ ವಿಷಯ ಬಂದಾಗ ಮಾನ್ಯ ಶ್ರೀಮಾನ್ ಹನುಮಂತಯ್ಯನವರು ಒಂದು ವಿಷಯವನ್ನು ಪ್ರಸ್ತಾಪಮಾಡಿದರು. ಹೆಚ್ಚು ಹಣ ಖರ್ಚಾಗುತ್ತದೆ ಎನ್ನುವುದು ಈ ವಿದ್ಯಾಭ್ಯಾಸದ ವ್ಯವಸ್ಥೆಯನ್ನು ಪುನರ್ರಚಿಸುವ ಕಾರ್ಯದಲ್ಲಿ ನಮ್ಮನ್ನು ಹಿಂದಕ್ಕೆ ತಳ್ಳಬಾರದು, ಇದೊಂದು ಪೆಡಂಭೂತವಾಗಬಾರದು ಎಂದು ಹೇಳಿದರು.

ಡಾ.ರಾಧಾಕೃಷ್ಣರವರು ಇಲ್ಲಿ ಬಂದಾಗ ನಡೆದ ಸೆಮಿನಾರ್‌ನಲ್ಲಿ ಮಾತನಾಡುವಾಗ ಕೂಡ ಹಣಕಾಸಿನ ತೊಡಕು ಅಥವಾ ಬಿಕ್ಕಟ್ಟು ಈ ಸುಧಾರಣೆಯನ್ನು ಜಾರಿಗೆ ತರುವುದರಲ್ಲಿ ಅಷ್ಟಾಗಿ ಅಡ್ಡಿಬಾರದು, ಈ ವಿಷಯದಲ್ಲಿ ಧೈರ್ಯವಾಗಿ ಮುಂದೆ ಹೆಜ್ಜೆಯಿಡಬೇಕೆಂದು ಶ್ರೀಮಾನ್ ಹನುಮಂತಯ್ಯನವರು ಹೇಳಿರುವ ಮಾತು ಶ್ಲಾಘನೀಯವಾದುದೆಂದು ತಿಳಿದುಕೊಂಡಿದ್ದೇನೆ. ಈ ವರದಿಯಲಡಕವಾಗಿರುವ ಪ್ರತಿಯೊಂದು ಅಂಶದಮೇಲೂ, ಇದರಲ್ಲಿ ಏನೇನು ಅಂಶಗಳನ್ನಳವಡಿಸಿದ್ದಾರೋ ಅವುಗಳನ್ನೇ ಉಗ್ಗರಿಸಿ, ನನ್ನ ವ್ಯಾಖ್ಯಾನ ಅಥವಾ ವಿಮರ್ಶೆಯನ್ನು ನನಗೆ ತಿಳಿದಮಟ್ಟಿಗೆ ಮಾಡಬೇಕೆಂದು ಯೋಚಿಸಿದ್ದೆ ಆದರೆ ಕಾಲಾವಕಾಶವಿಲ್ಲದಿರುವುದರಿಂದ ಈ ಯಾವ ವಿವರಗಳಿಗೂ ಹೋಗದೆ ಮಾತನಾಡುವ ಸಂದರ್ಭ ಬಂದಿದೆ. ಈಗಿರತಕ್ಕ ವ್ಯವಸ್ಥೆಯಲ್ಲಿ ಪ್ರೈಮರಿ ನಾಲ್ಕು ವರ್ಷ, ಮಾಧ್ಯಮಿಕ ನಾಲ್ಕು ವರ್ಷ, ಹೈಸ್ಕೂಲು ಮೂರು ವರ್ಷ, ಇಂಟರ್‌ಮಿಡಿಯೆಟ್ ಎರಡು ವರ್ಷ,



ಅನಂತರ ವಿಶ್ವವಿದ್ಯಾನಿಲಯದ ಡಿಗ್ರಿ ಪರೀಕ್ಷೆಗೆ ಎರಡುವರ್ಷ, ಆನರ್ಸ್ ಡಿಗ್ರಿಗೆ ಮೂರು ವರ್ಷ ವ್ಯಾಸಂಗ ಮಾಡಬೇಕೆಂದು ಏರ್ಪಾಡಿದೆ.

ಈ ವರದಿಯಲ್ಲಿ ಸೂಚಿಸಿರತಕ್ಕ ಮುಖ್ಯ ಬದಲಾವಣೆಯೇನೆಂದರೆ; ಆರು ವರ್ಷ ವಯಸ್ಸಾದ ಮೇಲೆ ವಿದ್ಯಾರ್ಥಿ ಪ್ರಾಥಮಿಕಶಾಲೆಗೆ ಹೋಗುತ್ತಾನೆ. ಈ ಸಂಬಂಧವಾಗಿ ಶ್ರೀಮಾನ್ ಮರಿಯಪ್ಪನವರು ಒಂದು ಟೀಕೆ ಮಾಡಿದರು. "ಈಗ ಪ್ರಾಥಮಿಕ ನಾಲ್ಕು ವರ್ಷ ಮಾಧ್ಯಮಿಕ ನಾಲ್ಕು ವರ್ಷ ಎರಡೂ ಸೇರಿ ಎಂಟುವರ್ಷದ ವಿದ್ಯಾಭ್ಯಾಸ ಸಂಸ್ಥಾನದಲ್ಲಿ ಜಾರಿಯಲ್ಲಿದೆ. ಇದು ಉಚಿತವಾಗಿ ದೊರೆಯುತ್ತಿದೆ. ಇದರ ಜೊತೆಗೆ ಒತ್ತಾಯ ವಿದ್ಯಾಭ್ಯಾಸಕ್ಕೂ ಕೂಡ ಪ್ರಯತ್ನ ಮಾಡಿದ್ದೆವು. 1940ನೆಯ ಇಸವಿಯಲ್ಲಿ ಒಂದು ಹತ್ತು ವರ್ಷದ ಯೋಜನೆಯನ್ನು ಹಾಕಿಕೊಂಡು ಪ್ರತಿವರ್ಷವೂ ನಾನೂರು ಪ್ರಾಥಮಿಕ ವಿದ್ಯಾಶಾಲೆಗಳನ್ನು ತೆರೆಯುತ್ತಿದ್ದೆವು. ಹೀಗೆ 1951ರವರೆಗೂ ಸ್ಕೂಲಿಲ್ಲದ ಸ್ಥಳಗಳಿಗೂ ಕೊಡಬಹುದೆಂದು ಮಾಡಿದ್ದೆವು. ಇದನ್ನು ಬಿಟ್ಟು ಈಗ ಎಂಟು ವರ್ಷ ಉಚಿತವಾಗಿ ದೊರೆಯುತ್ತಿರುವ ವಿದಾಭ್ಯಾಸವನ್ನು ತಪ್ಪಿಸಿ ಏಕೆ ಹೀಗೆ ಆರು ವರ್ಷ ಮಾಡುತ್ತಾರೆ" ಎಂದು ಪ್ರಶ್ನೆ ಹಾಕಿದರು. ರಾಜ್ಯಾಂಗದಲ್ಲಿ ನಿರ್ದೇಶನ ಮಾಡಿರುವ ಹಾಗೆ 14 ವರ್ಷದವರೆಗೆ ಮಕ್ಕಳಿಗೆ ಉಚಿತ ಮತ್ತು ಒತ್ತಾಯವಾದ ಪ್ರಾಥಮಿಕ ವಿದ್ಯಾಭ್ಯಾಸ ದೊರಕಲೇಬೇಕೆಂದು, ಸರ್ಕಾರ ಕೊಡಬೇಕೆಂದೂ ಕಡ್ಡಾಯವಾಗಿದೆ. ಈ ಒಂದು ದೃಷ್ಟಿಯಿಂದ ನೋಡುವುದಲ್ಲದೆ, ಈ ವರದಿಯಲ್ಲೂ ಕೂಡ ಹೆಚ್ಚು ಹಣಕಾಸಿನ ಕಡೆ ದೃಷ್ಟಿಯನ್ನಿಟ್ಟುಕೊಂಡಿದ್ದೇವೆ, ಉಪಾಧ್ಯಾಯರ ಕಡೆ ದೃಷ್ಟಿಯಿಟ್ಟುಕೊಂಡಿದ್ದೇವೆ. ಈಗ ಸದ್ಯಕ್ಕೆ ಆರು ವರ್ಷ ಸಾಕು ಮುಂದೆ ಹಣಕಾಸು ಹೆಚ್ಚು ಬಂದರೆ ಇದನ್ನು ಹೆಚ್ಚಿಸಿ ಎಂಟು ವರ್ಷ ಇಟ್ಟುಕೊಳ್ಳಬಹುದು ಎಂಬ ಸೂಚನೆಯಿದೆ. ಆದುದರಿಂದ ಈ ವಿಷಯವನ್ನು ಪುನಃ ಪರ್ಯಾಲೋಚನೆಮಾಡಿ, ಈ ಎಂಟು ವರ್ಷದ ಪ್ರಾಥಮಿಕ ವಿದ್ಯಾಭ್ಯಾಸದ ರಚನೆಯನ್ನೇ ಉಳಿಸಿಕೊಳ್ಳಬಹುದಾದರೆ ಒಳಿತಾದೀತು. ಅಕ್ಷರಸ್ಥನಾಗಿ ಉಳಿಯಬೇಕಾದರೆ, ಪ್ರಾಥಮಿಕ ವಿದ್ಯಾಭ್ಯಾಸವೇ ಒಂದು ಯೂನಿಟ್ ಆಗಿ, ಇದನ್ನು ಮುಂದುವರಿಸುವುದಕ್ಕೆ ಆಗದೇಯಿದ್ದರೆ ಕೊನೆಯಪಕ್ಷ ಅಕ್ಷರಸ್ಥನಾಗಿ ಉಳಿಯಲಿ ಎನ್ನುವದೃಷ್ಟಿಯಿಂದ ಎಂಟುವರ್ಷ ಇಟ್ಟುಕೊಂಡರೆ ಒಳ್ಳೆಯದೆಂದು ಅನ್ನಿಸುತ್ತದೆ.

ಇನ್ನು ಸೆಕೆಂಡರಿ ಸ್ಟೇಜಿನಲ್ಲಿ ನಾಲ್ಕು ವರ್ಷ ವಿದ್ಯಾಭ್ಯಾಸವಿರುವುದು ನ್ಯಾಯ. ಇಲ್ಲಿ ಇದನ್ನು ಆರು ವರ್ಷ ಮಾಡಿ ಇಂಟರ್‌ಮೀಡಿಯೆಟ್ಟನ್ನೂ ಸೇರಿಸಿ ಮತ್ತೆ ಸೆಕೆಂಡರಿ ಜೂನಿಯರ್ ಮತ್ತು ಸೀನಿಯರ್ ಎಂದು ಎರಡು ಭಾಗಮಾಡಿ, ಇಂಟರ್‌ಮೀಡಿಯೇಟ್ ದರ್ಜೆಯ ವಿದ್ಯಾಭ್ಯಾಸವನ್ನು ವಿದ್ಯಾ ಇಲಾಖೆಯ ಡೈರೆಕ್ಟರ್ ಆಡಳಿತಕ್ಕೆ ಸೇರಿಸಬೇಕೆಂಬ ಸಲಹೆಯನ್ನು ಈಗಾಗಲೇ ಹೆಚ್ಚು ಸಂಖ್ಯೆಯಲ್ಲಿ ಸದಸ್ಯರು ವಿರೋಧಿಸಿದ್ದಾರೆ. ಹೈಸ್ಕೂಲು ವಿದ್ಯಾಭ್ಯಾಸವಾದ ನಂತರ ಒಂದು ರೀತಿಯ ಟೆಕ್ನಿಕಲ್ ಮತ್ತು ಟ್ರೈನಿಂಗ್ ಕೋರ್ಸು ರೂಪದಲ್ಲಿ ಎರಡು ಮೂರು ವರ್ಷ ಮಾಡಿ ಮುಂದೆ ವಿಶ್ವವಿದ್ಯಾನಿಲಯಕ್ಕೆ ಹೋಗುವವರೆಗೆ ಅಡಿಪಾಯವಾಗುವ ರೀತಿಯಲ್ಲಿ ಏರ್ಪಾಡುಮಾಡಿ ವಿಶ್ವವಿದ್ಯಾನಿಲಯದಲ್ಲೇ ಇದು ಸೇರಿರುವ ಹಾಗೆ ಮಾಡಿದರೆ

ಹೆಚ್ಚು ಅನುಕೂಲವಾಗುತ್ತದೆಂದು ನಾನು ಕೂಡ ಅಭಿಪ್ರಾಯಪಡುತ್ತೇನೆ. ಇದಕ್ಕೆ ಕಾರಣವೆಂದರೆ ಇದು ಹೈಸ್ಕೂಲು ವಿದ್ಯಾಭ್ಯಾಸವಾದ ನಂತರ ಉಚ್ಚ ಶಿಕ್ಷಣಕ್ಕ Preparatory ಕೋರ್ಸಾಗಿರುತ್ತದೆ. ಉಚ್ಚ ಶಿಕ್ಷಣ ಮತ್ತು ಸಾಮಾನ್ಯ ವಿದ್ಯಾಭ್ಯಾಸ ಈ ಎರಡನ್ನೂ ಸೇರಿಸಿ ಒಂದು ತೊಡಕಿಗೆ ವಿದ್ಯಾರ್ಥಿಗಳನ್ನು ಗುರಿಪಡಿಸಿದರೆ ಆಗ ಮತ್ತಷ್ಟು ತೊಡಕುಂಟಾಗಬಹುದು. ಅಲ್ಲದೆ ಇಂಟರ್‌ಮೀಡಿಯೇಟ್ ಕಾಲೇಜಿನ ಆಡಳಿತ ಕೂಡ ಅಷ್ಟು ವ್ಯವಸ್ಥಿತವಾಗಿ ನಡೆಯಲಾರದೋ ಏನೋ ಎಂಬ ಅನುಮಾನವೂ ಬರುತ್ತದೆ. ಅದುದರಿಂದ ಈ ತೊಡಕನ್ನು ಪರಿಹಾರ ಮಾಡುವುದಕ್ಕೆ ಇಂಟರ್‌ಮೀಡಿಯೇಟ್ ಕಾಲೇಜನ್ನು ವಿಶ್ವವಿದ್ಯಾನಿಲಯದಲ್ಲೇ ಇಡುವುದು ನ್ಯಾಯವಾಗಿದೆಯೆಂದು ತೋರುತ್ತದೆ.

ಇನ್ನು ಬೆಳಗಿನ ಸ್ಕೂಲು ಮಾಡುವುದರಿಂದ ಹಳ್ಳಿಗಳಲ್ಲಿರುವವರಿಗೆ ಹೆಚ್ಚು ಅನುಕೂಲವಾಗುತ್ತದೆಂಬುದರಲ್ಲಿ ಭಿನ್ನಭಿಪ್ರಾಯವಿಲ್ಲ. ಆದರೆ ದಿನಕ್ಕೆ ಮೂರುವರೆ ಗಂಟೆ ಕಾಲ ಮಾತ್ರ ಪಾಠ ಹೇಳಿದರೆ ಸಾಕೆ ಎಂದು ಅನುಮಾನ ಬರುತ್ತದೆ. ಮದರಾಸಿನಲ್ಲಿ ಮೂರುಗಂಟೆ ಪಾಠ ಮಾಡುವುದಕ್ಕೆ ವಿರೋಧ ಬಂತು. ಮಕ್ಕಳು ಉಪಯುಕ್ತ ರೀತಿಯಲ್ಲಿ ಮಧ್ಯಾಹ್ನ ಸಾಯಂಕಾಲವನ್ನು ಕಳೆಯುತ್ತಾರೆಯೆ ಎನ್ನುವ ಪ್ರಶ್ನೆ ಬರುತ್ತದೆ. ಅದುದರಿಂದ ಈ ವಿಷಯವನ್ನೂ ಕೂಡ ಪುನಃ ಕೂಲಂಕುಷವಾಗಿ ಪರಿಶೀಲನೆ ಮಾಡುವುದು ಅಗತ್ಯವೆಂದು ತಿಳಿದುಕೊಂಡಿದ್ದೇನೆ.

ಇನ್ನೊಂದು ವಿಷಯವೆಂದರೆ ಶಿಕ್ಷಣ ಮಾಧ್ಯಮ. ಇದು ಬಹಳ ಮುಖ್ಯವಾದ ವಿಷಯ. ಇದರಲ್ಲಿ ಭಿನ್ನಾಭಿಪ್ರಾಯ ಕೂಡ ಇದೆ. ಶ್ರೀಮಾನ್ ಕೋದಂಡರಾಯರು ಕೊಟ್ಟಿರುವ ನೋಟ್‌ನಲ್ಲಿ ವಿವರಿಸಿದ್ದಾರೆ. ಆದರಲ್ಲಿ ಭಾಷೆಯ ಸಮಸ್ಯೆಯ ಮೇಲೆ ಬಹಳ ವಿಚಾರ ಮಾಡಿದ್ದಾರೆ. ಈ ವರದಿಯಲ್ಲಿ ಐದನೆಯ ತರಗತಿಯಿಂದ ಇಂಗ್ರೀಷನ್ನು ಹೇಳಿಕೊಡಬೇಕೆಂಬ ನಿಯಮವನ್ನು ಸೂಚನೆ ಮಾಡಿದ್ದಾರೆ. ಇದು ನನಗೆ ಒಪ್ಪಿಗೆಯಿಲ್ಲ. ಇಂಗ್ಲೀಷ್‌ನ್ನು ಐದನೆಯ ವರ್ಷದಿಂದ ಪ್ರಾರಂಭಮಾಡಿ ಆರನೆಯ ತರಗತಿಯವರೆಗೆ ಹೇಳಿಕೊಂಡು ಹೋಗುತಕ್ಕ ಅವಶ್ಯಕತೆಯಿಲ್ಲವೆಂದು ನನ್ನ ಭಾವನೆ. Laguage problem ಬಹಳ ಕಷ್ಟ. ಈ ಇಂಟರ್‌ನ್ಯಾಷನಲ್ ಲಾಂಗ್ವೇಜ್ ಅಥವಾ ಅಂತರಾಷ್ಟ್ರೀಯ ಭಾಷೆ, ಮಾತೃಭಾಷೆ, ಮತ್ತು ರಾಷ್ಟ್ರೀಯ ಭಾಷೆ, ಹೀಗೆ ಮೂರು ನಾಲ್ಕು ಭಾಷೆಗಳನ್ನು ಇಡುವುದಾದರೆ ಸಣ್ಣ ವಯಸ್ಸಿನಲ್ಲಿ ಅಷ್ಟು ಫಲಕಾರಿಯಾಗಲಾರದೆಂದೆನಿಸುತ್ತದೆ. ಅಲ್ಲದೆ ಇಷ್ಟು ಕಷ್ಟಪಟ್ಟು ಹೇಳಿಕೊಟ್ಟರೂ ಇದು ವ್ಯರ್ಥವಾಗಬಹುದೆಂದು ಅನ್ನಿಸುತ್ತದೆ.

ಈ ದಿವಸ ನಾವು ಈ ಸಂಸ್ಕೃತವನ್ನೂ ಪ್ರಾಥಮಿಕ ಹಂತದಲ್ಲೇ ಪ್ರಾರಂಭಮಾಡಬೇಕೆಂದು ಹೇಳುವುದಾದರೂ ಕೂಡ ಆ ಸಂಸ್ಕೃತವನ್ನೇ ಒಂದು studying subject ಅನ್ನಾಗಿ ಇಡಬೇಕೆಂಬ ಉದ್ದೇಶವಿಲ್ಲ ಈ ಅಮರ ಕೋಶವನ್ನು ಸ್ಪಷ್ಟವಾಗಿ ಉಚ್ಚಾರಮಾಡುವುದಕ್ಕೂ ಮತ್ತು ಈ ಸಂಸತ ನಿಮ್ಮ ದೇಶದಲ್ಲಿರತಕ್ಕ ಅನೇಕ ಇತರ ಭಾಷೆಗಳಿಗೂ ಮೂಲಸ್ಥಾನವನ್ನು



ಹೊಂದಿರುವುದರಿಂದ ಹಾಗೆ ಹೇಳುತ್ತಿದ್ದೇವೆಯೇ ಹೊರತು ಬೇರೆ ದೃಷ್ಟಿಯಿಂದೇನು ಅಲ್ಲ. ಆದರೆ ಕೆಲವು ಮಹನೀಯರು ಪ್ರೊಫೆಸರ್‌ಗಳಾಗಿರತಕ್ಕವರು ವರದಿಯನ್ನು ಕಳಪೆಯದೆಂದು, ಪ್ರತಿಗಾಮಿತನದ್ದು ಮತ್ತು ಪ್ರಜಾಸತ್ತಾತ್ಮಕವಲ್ಲದ್ದು ಎಂಬುದಾಗಿ ಕರೆದಿದ್ದಾರೆಂದು ಒಬ್ಬ ಮಾನ್ಯ ಸದಸ್ಯರು ಹೇಳಿದರು. ಆದರೆ ಅವರ ದೃಷ್ಟಿಯಲ್ಲಿ ಸೆನೇಟ್ ಮತ್ತು ಅಕ್ಯಾಡಮಿಕ್ ಕೌನ್ಸಿಲ್‌ನಲ್ಲಿರತಕ್ಕ ತಜ್ಞರನ್ನು ಕೇಳದೆ ಮತ್ತು ಅವರ ಅಭಿಪ್ರಾಯಗಳನ್ನೂ ಪಡೆಯದೆ ಇದನ್ನು ಮಾಡಿರುವುದರಿಂದ ಬಹುಶಃ ಅವರು ಆ ರೀತಿಯಾಗಿ ಅಭಿಪ್ರಾಯಪಟ್ಟಿದ್ದಾರೆಯೋ ಏನೋ, ಆದುದರಿಂದ ಈಗಲೂ ಸಹ ಅಂಥವರ ಸಲಹೆಗಳನ್ನೂ ಮತ್ತು ಅಭಿಪ್ರಾಯಗಳನ್ನೂ ಮತ್ತು ಅವರು ಮಾಡತಕ್ಕ ವಿಮರ್ಶೆಗಳನ್ನೂ ನಾವು ಪುನಃ ಸ್ವಾಗತಿಸಬೇಕಾಗಿರುವುದರಿಂದ, ಇದರ ಬಗ್ಗೆ ಅವರೆಲ್ಲ ಏನೇನು ಅಭಿಪ್ರಾಯಗಳನ್ನುಪಡುತ್ತಾರೆ ಎಂಬುದನ್ನು ತಿಳಿದು ಕೊಂಡ ನಂತರ ಕಾರ್ಯೋನ್ಮುಖರಾಗುವುದು ಒಳ್ಳೆಯದೆಂದು ಹೇಳುತ್ತೇನೆ. ಆದರೆ ಹೀಗೆ ಒಬ್ಬರು ತಮ್ಮ ಅಭಿಪ್ರಾಯಗಳನ್ನು ಈ ಸುಧಾರಣೆಯ ಬಗ್ಗೆ ಪತ್ರಿಕೆಯಲ್ಲಿ ಪ್ರಕಟಿಸಿದರೆಂದು, ಸರ್ಕಾರದವರು, ಅವರಿಗೆ ಹಾಗೆ ಮಾಡಬಾರದಾಗಿತ್ತೆಂದೂ, ಆ ರೀತಿ ಮಾಡಿದ್ದರಿಂದ, ಅವರ ಕೆಲಸಕ್ಕೆ ರಾಜಿನಾಮೇ ಕೊಡಬೇಕೆಂದು ಅವರನ್ನು ಒತ್ತಾಯಪಡಿಸಿದರೆಂದು ನಾನು ಕೇಳಿದ್ದೇನೆ.

ಶ್ರೀ ಕೆ.ಹನುಮಂತಯ್ಯ (ಮುಖ್ಯಮಂತ್ರಿಗಳು) - ನಾವು ಎಲ್ಲಿಯೂ ಆ ರೀತಿಯಾಗಿ ಮಾಡಿಲ್ಲ.

## ಗ್ರಾಮ ಪಂಚಾಯಿತಿಗಳು ಮತ್ತು ಜಿಲ್ಲಾ ಬೋರ್ಡ್‌ಗಳ (ತಿದ್ದುಪಡಿ) ಮಸೂದೆ, 1954

ಸ್ವಾಮಿ, ಈಗ ಸಭೆಯ ಮುಂದೆ ಮಂಡಿಸಲ್ಪಟ್ಟಿರುವ Mysore Village Panchayets and District Boards (Amendment) Bill, 1954, ಇದನ್ನು ವಿರೋಧಿಸಿ ಈಗಾಗಲೇ ವಿರೋಧ ಪಕ್ಷದ ನಾಯಕರು ಮತ್ತು ಇತರರು ಅಭಿಪ್ರಾಯಗಳನ್ನು ವ್ಯಕ್ತಪಡಿಸಿದ್ದಾರೆ. ನಾನೂ ಕೂಡ ಈ ತಿದ್ದುಪಡಿ ಮಸೂದೆಯನ್ನು ತೀವ್ರವಾಗಿ ವಿರೋಧ ಮಾಡುತ್ತಾ, ಕೆಲವು ವಿಷಯಗಳನ್ನು ಸಭೆಯ ಗಮನಕ್ಕೆ ತರಬೇಕೆಂದಿದ್ದೇನೆ. ಈ ಅಮೆಂಡ್‌ಮೆಂಟಿನಲ್ಲಿ ಏನು ಅಧಿಕಾರವನ್ನು ಸರ್ಕಾರ ಕೇಳುತ್ತಾ ಇದೆ ಎನ್ನುವುದ ಬಹಳ ಮುಖ್ಯವಾದ ವಿಷಯ. ಅವರು ಕಾರಣಗಳನ್ನು ಹೇಳುವಾಗ ಈ ತಿದ್ದುಪಡಿ ಮಸೂದೆಯ ಕೊನೆಯಲ್ಲಿ ಈ ರೀತಿ ಹೇಳಿದ್ದಾರೆ:-

"The District Boards now functioning are continuing pending the constituition of the District Boards as envisaged in the Mysore Village Panchayats and District Boards Act, 1952. The entire question of having District Boards or taluk Boards in the alternative is being examined by a committee constituted for the purpose. As it is over six years ago that the present District Boards came into being, it is considered desirable to entrust their functions to a special officer pending a decision regarding the further of the District Boards. Hence this amending Bill".

ಎಂದು ಇದರಲ್ಲಿ ಕಾರಣಗಳನ್ನು ಶೃತಪಡಿಸಿದ್ದಾರೆ. ನಿಜ. ಈಗ ಇರತಕ್ಕಂಥ ಜಿಲ್ಲಾ ಬೋರ್ಡ್‌ಗಳು ಮೃತವಾಗಿವೆ. ಅವು ಪುನರ್ರಚನೆಯಾಗಬೇಕು ಎಂದು ಹೇಳಿದೆ. ರಾಜಪ್ರಮುಖರ ಭಾಷಣದಲ್ಲಿ ಹೇಳಿರುವ ಹಾಗೆ ಅವು ತಮ್ಮ ಲಕ್ಷಣಗಳನ್ನು ಕಳೆದುಕೊಂಡಿವೆ. ಎಂದರೆ, ಕಾನೂನಿನ ರೀತಿಯಲ್ಲಿ ಹೇಳಬೇಕೆಂದರೆ, ಅವು ಇಲ್ಲ ಎಂದು ಭಾವಿಸಬೇಕಾಗಿದೆ ಎಂದು ಹೇಳಿದೆ. ಹಾಗಾದರೆ ಇಷ್ಟು ಕಾಲ ಈ ಸ್ಥಳೀಯ ಸಂಸ್ಥೆಗಳನ್ನು, ಡಿಸ್ಟ್ರಿಕ್ಟ್ ಬೋರ್ಡ್‌ಗಳನ್ನು ಮುಂದುವರಿಸಿಕೊಂಡು ಬರುವುದಕ್ಕೆ ದೇಶದಲ್ಲಿ ಅಂಥ ಅಲ್ಲೋಲ ಕಲ್ಲೋಲ ಪರಿಸ್ಥಿತಿ ಏನಿತ್ತು? ಮೇಲಾಗಿ ಈ ಜಿಲ್ಲಾ ಬೋರ್ಡ್ ಮತ್ತು ಗ್ರಾಮ ಪಂಚಾಯಿತಿಗಳನ್ನು ಯಾವ ರೀತಿ ಪುನರ್ರಚಿಸಬೇಕು, ಇವುಗಳಿಗೆ ಯಾವ ರೀತಿ ಚುನಾವಣೆ ನಡೆಯಬೆಕು ಎಂಬ ಈ ಎಲ್ಲಾ ವಿಷಯಗಳನ್ನು ಪರಿಶೀಲನೆ ಮಾಡಿ ಸರ್ಕಾರದವರಿಗೆ ವರದಿ ಒಪ್ಪಿಸುವ ಸಲುವಾಗಿ ಶ್ರೀಮಾನ್ ವಿ.ವೆಂಕಟಪ್ಪನವರ ಕಮಿಟಿಯನ್ನು ರಚನೆಮಾಡಿ

ವಿಧಾನ ಸಭೆ ನಡವಳಿಕೆ: ದಿನಾಂಕ 13-1-1954



ಆ ಸಮಿತಿ ತನ್ನ ವರದಿಯನ್ನು ಕೊಟ್ಟು ಅದರ ಆಧಾರದಮೇಲೆ ಕಾನೂನು ಕೂಡ ಸಿದ್ಧವಾಗಿ ಜಾರಿಗೆ ತರದೇ ಇದ್ದು, ಅನಂತರದಲ್ಲಿ ಒಂದು ಕಾರಣ ಕೊಡುತ್ತಾ ಹೀಗೆಯೇ ಕಾಲಕಳೆಯುತ್ತಾ ಇದ್ದಾಗ ಚುನಾವಣೆ ಬಗ್ಗೆ ಭಿನ್ನಭಿಪ್ರಾಯ ಬಂತು. ಪ್ರತ್ಯಕ್ಷ ಚುನಾವಣೆ ನಡೆಯಬೇಕೇ, ಪರೋಕ್ಷ ಚುನಾವಣೆ ನಡೆಯಬೇಕೆ ಎಂಬ ವಿಚಾರದಲ್ಲಿ ಭಿನ್ನಭಿಪ್ರಾಯ ಬಂತು, ಹಾಗೆಯೇ ಮುಂದುವರಿಯುತ್ತಿರುವಾಗ ಈ ರೀತಿ ಜಿಲ್ಲಾ ಬೋರ್ಡ್‌ಗಳು ಇರಬೇಕೇ ಅಥವಾ ತಾಲ್ಲೂಕು ಬೋರ್ಡ್‌ಗಳು ಇರಬೇಕೇ ಎಂದು ಹೇಳಿ ಭಿನ್ನಭಿಪ್ರಾಯ ಹೆಚ್ಚು ಹೆಚ್ಚುತ್ತಾ ಬಂತು ಎಂದು ಕೂಡ ಹೇಳುತ್ತಾರೆ. ನಿಜ, ಅನೇಕ ವಿಷಯಗಳ ಬಗ್ಗೆ ದೇಶದಲ್ಲಿ, ಪಾರ್ಟಿಗಳಲ್ಲಿ, ಜನರಲ್ಲಿ, ಭಿನ್ನಾಭಿಪ್ರಾಯವಿರುವುದಕ್ಕೆ ಸಾಧ್ಯ. ಇರಬೇಕಾದದ್ದು ನ್ಯಾಯ. ಆದರೆ ಸ್ವರಾಜ್ಯ, ರಾಮರಾಜ್ಯ ಇತ್ಯಾದಿಯಾಗಿ ಜನತಾ ರಾಜ್ಯಗಳನ್ನು ನಾವು ಸ್ಥಾಪನೆ ಮಾಡುತ್ತೇವೆ, ಮಾಡಬೇಕಾದದ್ದು ಯುಗದ ಧರ್ಮ ಎಂದು ಒಪ್ಪಿಕೊಂಡರೂ ಕೂಡ, ಈ ಒಂದು ಸ್ವರೂಪದಲ್ಲಿ ಯಾವ ಒಂದು 'ಲೋಕಲ್ ಸೆಲ್ಫ್‌ಗೌರ್ನಮೆಂಟ್' ಎಂದು ಇಟ್ಟುಕೊಂಡು ಬಂದಿದ್ದೇವೋ ಅದನ್ನು ಈ ರೀತಿ ನಿಶ್ಚೇತನವಾಗುವ ರೀತಿಯಲ್ಲಿ ಮುಂದುವರಿಸಿಕೊಂಡು ಬಂದು ಈಗ ಅದನ್ನು ಕೊಲ್ಲುತ್ತೇವೆ ಅಥವಾ ಅದು ಹೆಣ ಆಗಿದೆ, ಅದನ್ನು ದಫನ್ ಮಾಡುತ್ತೇವೆ, ನಮಗೆ ಅಧಿಕಾರ ಕೊಡಿ ಎಂದು ಕೇಳಿದರೆ ........

ಶ್ರೀ ಕೆ.ಹನುಮಂತಯ್ಯ.- ಹೆಣ ಆದ ಮೇಲೆ ದಫನ್‌ಮಾಡಬೇಕೇ ಬೇಡವೇ?

ಶ್ರೀ ಎಸ್.ಗೋಪಾಲಗೌಡ - ಅದು ನಿಜ. ಹೆಣ ಆದರೆ ದಫನ್ ಮಾಡುತ್ತೇವೆ, ಅಧಿಕಾರ ಕೊಡಿ ಎಂದು ಮಾನ್ಯ ಸಭೆಯನ್ನು ಕೇಳಿದರೆ ಅದಕ್ಕಿಂತ ವಿಷಾದದ ಸಂಗತಿ ಇರಲಾರದು ಎಂದು ನಾನು ತಿಳಿಯುತ್ತೇನೆ. ಚುನಾಯಿತ ಸದಸ್ಯರಾಗಿರತಕ್ಕ ನಮಗೆ ಸರ್ಕಾರದವರು ಮಾಡತಕ್ಕ ಒಂದು ಅವಮಾನ ಎಂದು ಕೂಡ ನಾನು ಭಾವಿಸುತ್ತೇನೆ. ಅವರು ಜೀವಚ್ಛವವಾಗಿರುವ ಡಿಸ್ಟ್ರಿಕ್ಟ್ ಬೋರ್ಡ್‌ಗಳ ಅವಧಿ ಮುಗಿಯುತ್ತದೆ, ಅಧಿಕಾರ ಕೊಡಿ, ನಮಗೆ ಅಧಿಕಾರವಿಲ್ಲ, ಕೈಗಳನ್ನು ಬಲಪಡಿಸಿ ಎಂದು ಹೇಳುತ್ತಾರೆ. ಇದರಲ್ಲಿ ವ್ಯಕ್ತಿಗಳ ಪ್ರಶ್ನೆಯಿಲ್ಲ. ನಮ್ಮವರು ಅಥವಾ ಬೇರೆಯವರು ಎಂಬ ಪ್ರಶ್ನೆ ಇದರಲ್ಲಿಲ್ಲ. ಇಲ್ಲಿರುವುದು ಒಂದು ನೀತಿ. ಒಂದು ಮೂಲಭೂತವಾದ ಪ್ರಶ್ನೆಯ ಬಗ್ಗೆ ನಾವು ತೀರ್ಮಾನ ಮಾಡಬೇಕಾಗಿದೆ, ಚರ್ಚೆ ಮಾಡಬೇಕಾಗಿದೆ. ಹೀಗೆಯೇ ಮುಂದುವರಿಸಿಕೊಂಡು ಬಂದರೆ ಎಷ್ಟು ಕಾಲಾವಧಿಯಲ್ಲಿ ಸರಿಯಾದ ವ್ಯವಸ್ಥೆಯಾಗುತ್ತದೆ ಎಂಬುದನ್ನು ತಾವು ಯೋಚನೆಮಾಡಬೇಕು. ಅವರು ಎಷ್ಟು ಕಾಲದಲ್ಲಿ ಪುನರಾಲೋಚನೆ ಮಾಡುವವರಿದ್ದಾರೆಂಬುದು ನಮಗೆ ತಿಳಿಯದು. ಸ್ಪೆಷಲ್ ಆಫೀಸರಿಗೆ ಇಂಥ ಒಂದು ಸ್ಥಳೀಯ ಸಂಸ್ಥೆ ವಹಿಸುತ್ತಾರಲ್ಲಾ, ಇದನ್ನು ಎಷ್ಟು ಕಾಲದಲ್ಲಿ ಪುನರ್ರಚನೆ ಮಾಡುವುದು, ಇದಕ್ಕೆ ಕಾಲಾವಧಿಯೆಷ್ಟು ಎಂಬ ಭರವಸೆ ಈ ಮಾನ್ಯಸಭೆಗೆ ಕೊಟ್ಟಿದ್ದಾರೆಯೆ ಎಂದು ಹೇಳಿದರೆ, ಇಲ್ಲ. ಎಲ್ಲ ಶಬ್ದಗಳನ್ನು ಪುನಃ ಪುನಃ ಓದಿ ನೋಡಿದ್ದಾಯಿತು. Amendment of Section 175 of Mysore Act IV of 1952

"(1) Notwithstanding anything contained in this Act,
(i) it shall be lawful for the Government,"

ಎಂದು ಹೇಳಿ, ಎರಡನೇಯದಾಗಿ
(a) to specify by notificaiton in the Mysore Gazette

"(a) to appoint with effect from the date specified under sub clause (a) Special Oficer, by notification in the Mysore Gazettee in respect of each District Board, to exercise the powers, discharge the duties and perform the functions of such District Board and its President, until the constitution of such District Board in accordance with the provisions of this Act." ಎಂದು ಹೇಳಿದ್ದಾರೆ. ಎಲ್ಲಿಯವರೆಗೆ ರಚನೆಯಾಗುವುದಿಲ್ಲಮೋ ಅಲ್ಲಿಯವರೆಗೂ ಅವರು ಮುಂದುವರೆಸಿಕೊಂಡು ಹೋಗುತ್ತಾರೆ. ಇನ್ನೂ ಮುಂದೆ-
" the Government may, if it considers necessary, constitute a committee, consisting of such person as the Government may nominate, to advise the Special Officer appointed under sub-clause (b) of clause (i) in the discharge of his duties"

ಎಂದು ಹೇಳಿದ್ದಾರೆ. ಅವರ ಇಷ್ಟ ಬಂದರೆ ಒಂದು ಸಮಿತಿಯನ್ನು ಈ ಸ್ಪೆಷಲ್ ಅಧಿಕಾರಿಗಳಿಗೆ ಅಡ್ವೈಜ್ ಮಾಡುವುದಕ್ಕೆ, ಸಲಹೆ ಕೊಡುವುದಕ್ಕೆ ನೇಮಿಸಬಹುದು. ಈ ರೀತಿಯಾಗಿ ಅವರು ಬರೆದಿದ್ದಾರೆ. ಈಗ ಹೊಸದಾಗಿ ಶ್ರೀಮಾನ್ ಚಂದ್ರಶೇಖರಯ್ಯನವರ ಅಧ್ಯಕ್ಷತೆಯಲ್ಲಿ ಯಾವ ಒಂದು ಸಮಿತಿ ಈ ವಿಷಯವನ್ನು ಪುನಃ ಪರಿಶೀಲನೆ ಮಾಡುವುದಕ್ಕೆ ಏರ್ಪಾಡಾಗಿದೆಯೋ ಆ ಸಮಿತಿಗೆ ಕೂಡ ಇಷ್ಟೇ ಕಾಲದಲ್ಲಿ ನೀವು ವರದಿಯನ್ನು ಒಪ್ಪಿಸಲೇಬೇಕು ಎಂದು ಕಡ್ಡಾಯವಾದ ನಿಯಮವೇನೂ ಇದ್ದಂತೆ ನನಗೆ ಕಂಡುಬರುವುದಿಲ್ಲ. ಅವಧಿಯ ಮೇಲೆ ಈ ಭಿನ್ನಾಭಿಪ್ರಾಯ ಮುಂದುವರಿದ ಹಾಗೆಯೇ ಇದೆ. ಸಮಿತಿ ತನ್ನ ವರದಿಯನ್ನು ಒಪ್ಪಿಸಿ ಮತ್ತೆ ಪುನಃ ಅದು ಈ ಸಭೆಯ ಮುಂದೆ ಬಂದು ಅದಕ್ಕೆ ಒಮ್ಮತ್ರದ ಅಭಿಪ್ರಾಯ ದೊರೆತು ಅದು ಕಾನೂನಾಗಿ, ಅನಂತರದಲ್ಲಿ ಈ ಸ್ಥಳೀಯ ಸಂಸ್ಥೆಗಳ ಪುನರ್ರಚನೆಯಾಗಬೇಕು. ಅಂದರೆ ಬಹುಶಃ ಬಹಳ ವರ್ಷಗಳನ್ನೇ ಇದು ತೆಗೆದುಕೊಂಡೀತು ಎಂದು ನನಗೆ ಭಯವಾಗಿದೆ. ಈ ಭಯವನ್ನು ಅಥವಾ ಅನುಮಾನವನ್ನು ನಿವಾರಣೆ ಮಾಡುವುದ್ಕಕೆ ಈ ತಿದ್ದುಪಡಿಯಲ್ಲಿ ಅಥವಾ ಹೊರಗಡೆ ಯಾವ ಒಂದು ಭರವಸೆಯೂ ಇಲ್ಲ; ಆ ಭರವಸೆಯನ್ನು ಕೊಡುವ ಯಾವ ಒಂದು ಹೇಳಿಕೆಯು ಇಲ್ಲ. ಅಲ್ಲದೆ ಕಳೆದ ವರ್ಷ ರಾಜ ಪ್ರಮುಖರ ಭಾಷಣದಲ್ಲಿ. ನಾವು ಈ ವರ್ಷದ ಅವಧಿಯೊಳಗಾಗಿ ಈ ಬೋರ್ಡುಗಳಿಗೆ ಚುನಾವಣೆಯನ್ನು ಮಾಡುತ್ತೇವೆ "ಎಂದು



ಹೇಳಲಾಗಿತ್ತು. ಇಂತಹ ಒಂದು ಆಶ್ವಾಸನಯೇ ಈಡೇರದೆ ಹೋದಮೇಲೆ ಇನ್ನು ಮುಂದೆ ಇದು ಏನಾಗುತ್ತದೆ ಎಂಬುದನ್ನು ನಾವು ಯೋಚನೆ ಮಾಡಬೇಕು. ಸರ್ಕಾರದವರು ಇದನ್ನು ಸಕಾಲದಲ್ಲಿ ಪುನರ್ರಚನೆ ಮಾಡುವುದಕ್ಕೆ ನಾನಾ ಅಡ್ಡಿ ಅತಂಕಗಳು ಬಂದಿರಬಹುದು, ಎಂದು ಒಪ್ಪಿಕೊಂಡರೂ ಕೂಡ ಇದರ ಹಿನ್ನಲೆಯಲ್ಲಿ ಏನಾದರೂ ರಾಜಕಾರಣ ಇರಬಹುದೇ ಎಂದು ಹೇಳಿ ನಾವು ಭಯಪಡಬೇಕಾಗಿದೆ. ಇದರಲ್ಲಿ ಹಿಟ್ಲರ್ ಶಾಹಿಯ ಕೈವಾಡದಿಂದ ಈ ಸ್ಥಳೀಯ ಸಂಸ್ಥೆಗಳ ಚುನಾವಣೆ ನಿಧಾನವಾಗಿ ಒಂದಲ್ಲ ಒಂದು ಕಾರಣ ಮುಂದುವರಿದು ಇವುಗಳನ್ನು ಹೊಡೆದುಹಾಕಿ ತಾನೇ ತಾನಾಗಿ ಸರ್ಕಾರವನ್ನು ನಡೆಸಿಕೊಂಡು ಹೋಗಬೇಕೆಂಬ ಉದ್ದೇಶವನ್ನು ಹಿನ್ನಲೆಯಲ್ಲಿ ಇಟ್ಟುಕೊಂಡಿದ್ದಾರೆಯೆ ಎಂದು ಯೋಚನೆ ಮಾಡುವುದಕ್ಕೂ ಇಲ್ಲಿ ಅವಕಾಶವಾಗಿದೆ. ಅದ್ದರಿಂದ ಪ್ರಭುತ್ವದ ಹೆಸರಿನಲ್ಲಿ ಸ್ಥಳೀಯ ಸಂಸ್ಥೆಗಳು, ಸ್ವರಾಜ್ಯ, ಸೆಲ್ಫ್ ಗವರ್ನಮೆಂಟ್ ಎಂದೇನು ನಾವು ಒಪ್ಪಿಕೊಂಡಿದ್ದೇಮೋ ಆ ತತ್ವಗಳನ್ನು ಕಿಂಚಿತ್ತಾದರೂ ಕಾರ್ಯರೂಪದಲ್ಲಿ ತೋರ್ಪಡಿಸುವುದಕ್ಕೆ, ಕಾರ್ಯರೂಪದಲ್ಲಿ ನಡೆಸಿಕೊಂಡು ಹೋಗುವುದಕ್ಕೆ ಒಂದೇ ಒಂದು ಮಾರ್ಗವೇನೆಂದರೆ, ತಕ್ಷಣ ಈಗಿರತಕ್ಕಂಥ ರೀತಿಯಲ್ಲಿ ಕಾಲವಿಳಂಬ ಮಾಡದೆಯೇ ಜಿಲ್ಲಾ ಜೋರ್ಡ್‌ಗಳನ್ನು ಪುನರ್ರಚನೆ ಮಾಡತಕ್ಕದ್ದು. ಏಕೆಂದರೆ ಜಿಲ್ಲಾ ಬೋರ್ಡ್‌ಗಳಲ್ಲಿ, ಈಗಾಗಲೇ ಅವು ತಮ್ಮ ಕೊನೆಯ ಅವಧಿಯಲ್ಲಿರುವುದರಿಂದ, ಅವರಿಗಿದ್ದ, ಅಧಿಕಾರ ಮತ್ತು ಹಣ ಕುಂಠಿತವಾಗಿ ಅನೇಕ ಕೆಲಸಕಾರ್ಯಗಳು ನಿಂತುಹೋಗಿವೆ. ಅವರಿಗೆ ತಮ್ಮ ಅಧಿಕಾರ ಎಲ್ಲಿ ಯಾವಾಗ ಕೊನೆಯಾಗುತ್ತದೆಂಬುದೇ ಗೊತ್ತಿಲ್ಲದುದ್ದರಿಂದ ಈಗ ಎರಡು ವರ್ಷಗಳಿಂದ ಅನೇಕರು ಯಾವ ಕೆಲಸವನ್ನು ಹೆಚ್ಚು ಜವಾಬ್ದಾರಿಯಿಂದ ತೆಗೆದುಕೊಳ್ಳುವುದಕ್ಕೆ ಸಾಧ್ಯವಾಗಿಲ್ಲ. ಇನ್ನೇನು ಕೊನೆಯಾಗುತ್ತಾ ಬಂತು ಎಂದು ಹೇಳಿ ಈ ರೀತಿಯ ಅಭಿಪ್ರಾಯ ಅಥವಾ ಭಾವನೆ ಅವರಿಗೆ ಬರುವುದು ಸಹಜ. ಈ ರೀತಿಯಾಗಿ ಅಲ್ಲಿರತಕ್ಕಂಥ ಫಂಡ್ಸ್ ಮತ್ತು ಅಲ್ಲಿ ಆಗಬೇಕಾಗಿದ್ದಂತ ಕಾಂಗಾರಿಗಳು ಮತ್ತು ಇತರ ಕೆಲಸಕಾರ್ಯಗಳು ಎಷ್ಟು ನಡೆಯದೆ ನಿಂತು ಹೋಗಿದೆ, ಈ ಕಾನೂನಿನಿಂದ ಇದೇ ಸಂಸ್ಥಾನದಲ್ಲಿ ಎಷ್ಟು ಮಟ್ಟಿನ ಪ್ರಗತಿಯಾಗಬಹುದು ಮತ್ತು ಜನರಿಂದ ಚುನಾಯಿಸಲ್ಪಟ್ಟ ಪ್ರತಿನಿಧಿಗಳುಳ್ಳ ಒಂದು ಸಂಸ್ಥೆಯನ್ನು ಈ ರೀತಿಯಾಗಿ ಹೊಡೆದುಹಾಕುವುದು ನ್ಯಾಯವೇ, ಇದರ ಜಾಗದಲ್ಲಿ ಅಧಿಕಾರಿಗಳೊಬ್ಬರನ್ನು ಸೇಮಿಸಿದರೆ ಅವರು ತಮ್ಮ ಜವಾಬ್ದಾರಿಯನ್ನು ನಿರ್ವಹಿಸಬಲ್ಲರೆ ಎಂಬುದನ್ನು ಯೋಚನೆ ಮಾಡಬೇಕಾದದ್ದು ಅವಶ್ಯಕ. ಪರಿಸ್ಥಿತಿ ಹೀಗಿರುವುದರಿಂದ ಇಂಥ ಒಂದು ದೊಡ್ಡ ಸಂಸ್ಥೆಯನ್ನು, ಸದಾ ಕಾಲದಲ್ಲೂ ಕೆಲಸ ಮಾಡುವ ಒಬ್ಬ ಅಧ್ಯಕ್ಷರು ನೋಡಿಕೊಳ್ಳುತ್ತಿದ್ದ ಜವಾಬ್ದಾರಿಯುತವಾದ ಸಂಸ್ಥೆಯನ್ನು, ಒಬ್ಬರು ಅಧಿಕಾರಿಗಳಿಗೆ ವಹಿಸುವುದು ಒಳ್ಳೆಯದಲ್ಲ. ಅದ್ದರಿಂದ ಪುನಃ ಪರಿಶೀಲನೆ ಮಾಡಿ, ಅಲ್ಲಿಯತನಕ ಸ್ಥಳೀಯ ಸಂಸ್ಥೆಗಳನ್ನು ಪುನರ್ರಚನೆ ಮಾಡಲು ಕಾನೂನು ಕಾಯಿದೆಗಳು ತಯಾರಾಗುವುದಿಲ್ಲವೊ, ಅನುಕೂಲ ಒದಗುವುದಿಲ್ಲಮೋ, ಅಲ್ಲಿಯತನಕ ಬರೀ ಡಿಸ್ಟ್ರಿಕ್ಟ್ ಬೋರ್ಡ್‌ಗಳನ್ನೇ ಮುಂದುವರಿಸಿಕೊಂಡು ಹೋಗುವುದಕ್ಕೆ ಅವಕಾಶಮಾಡಬೇಕು. ಇದಕ್ಕಾಗಿ ಸರ್ಕಾರದವರು ಯಾವ ತಿದ್ದುಪಡಿ ಮಸೂದೆಯನ್ನು ಈ ಸಭೆಯ ಮುಂದಿಟ್ಟಿದ್ದಾರೆ ಅದನ್ನು ಅವರು ಒಂದು ದೊಡ್ಡ ಮನಸ್ಸು ಮಾಡಿ ವಾಪಸ್ಸು ತೆಗೆದುಕೊಳ್ಳಬೇಕು ಎಂದು ನಾನು ವಿನಂತಿ ಮಾಡಿಕೊಂಡು ನನ್ನ ಎರಡು ಮಾತುಗಳನ್ನು ಮುಗಿಸುತ್ತೇನೆ.

## ಮೈಸೂರು ಗೇಣಿ ಪದ್ಧತಿ (ತಿದ್ದುಪಡಿ) ಮಸೂದೆ, 1954

ಸ್ವಾಮಿ, ಈಗಾತಾನೆ ಸಭೆಯ ಮುಂದೆ ಮಂಡಿಸಿರುವ ಮೈಸೂರು ಪಿಗ್ಮಿದಾರರಿಗೆ ಸಂಬಂಧಪಟ್ಟ ಕಾನೂನು ತಿದ್ದುಪಡಿಯನ್ನು ಅನುಮೋದಿಸುತ್ತಾ ನಾನು ಒಂದೆರಡು ಮಾತುಗಳನ್ನು ಹೇಳಬೇಕೆಂದಿದ್ದೇನೆ ಈ ತಿದ್ದುಪಡಿ ಬಹಳ ಅಗತ್ಯವಾದುದು ಎಂಬುದನ್ನು ನಾನು ಮತ್ತೆ ಹೇಳಬೇಕಾಗಿಲ್ಲ. ಏಕೆಂದರೆ ಟೆನೆನ್ಸಿ ಕಾನೂನು ಮೈಸೂರು ಸಂಸ್ಥಾನದಲ್ಲಿ ಜಾರಿಗೆ ಬಂದಿದ್ದರೂ ಕೂಡ ಕಾರ್ಯತ ಕಾನೂನನ್ನು ಜಮೀನ್ದಾರರು ಅನುಸರಿಸದೆ ಇರುವ ಅನೇಕ ಸಂದರ್ಭಗಳು ನಮ್ಮ ಗಮನಕ್ಕೆ ಬಂದಿವೆ. ಮುಖ್ಯವಾಗಿ ಮಲೆನಾಡಿನಲ್ಲಿ ನಾನು ನೋಡಿರುವ ಹಾಗೆ ಈಗ ಜಾರಿಯಲ್ಲಿರುವ ಕಾನೂನು ಪ್ರಕಾರ ಪ್ರತಿಯೊಬ್ಬ ಜಮೀನ್ ದಾರನೂ ಪಿಗ್ಮಿದಾರನಿಗೆ ಐದು ವರ್ಷದ ಒಂದು ಕರಾರನ್ನು ಬರೆದುಕೊಡಬೇಕು ಮತ್ತು ಪಿಗ್ಮಿದಾರ ಕೂಡ ಹಾಗೆಯೇ ಒಂದು ಕರಾರನ್ನು ಬರೆದುಕೊಡಬೇಕೆಂಬ ನಿಯಮವಿದ್ದರೂ ಸಹ ಆ ನಿಯಮವನ್ನು ಅನೇಕ ಸಂದರ್ಭಗಳಲ್ಲಿ ಅನುಸರಿಸಿಲ್ಲ ಮತ್ತು ಮಲೆನಾಡಿನಲ್ಲಿ ಒಂದು ವಿಶೇಷ ಪದ್ಧತಿ ಏನು ನಡೆದುಕೊಂಡುಬಂದಿದೆಯೆಂದರೆ ನೂರಾರು ವರ್ಷಗಳಿಂದಲೂ ಯಾವ ಒಂದು ಕಾಗದಪತ್ರದ ಆಧಾರವೂ ಇಲ್ಲದೆಯೇ ಗೇಣಿಪದ್ಧತಿ ನಡೆದುಕೊಂಡು ಬಂದಿದೆ. ಈ ರೀತಿ ಜಮೀನ್‌ದಾರನ ಭೂಮಿಯನ್ನು ಗೇಣಿದಾರನು ಉಳುಮೆ ಮಾಡಿಕೊಂಡು ಬಂದಾಗ್ಯೂ ಆ ಬಗ್ಗೆ ಯಾವ ಒಂದು ಆಧಾರವೂ ಕಾಗದ ಪತ್ರದ ಮುಖಾಂತರ ಇಲ್ಲದೇ ಇರುವುದನ್ನು ಸಾರ್ವತ್ರಿಕವಾಗಿ ನೀವು ಈಗ ಮಲೆನಾಡು ಪ್ರದೇಶದಲ್ಲಿ ನೋಡಬಹುದು ಅವರಿಗೆ, ಅಂದರೆ ರೈತರಿಗೆ, ತಾವು ಯಾವ ಸರ್ವೆ ನಂಬರಿನ ಭೂಮಿಯನ್ನು ಉಳುಮೆ ಮಾಡುತ್ತಿದ್ದೇವೆಂಬುದು ಸಹ ಅನೇಕ ಸಂದರ್ಭಗಳಲ್ಲಿ ಗೊತ್ತಿರುವುದಿಲ್ಲ.

ಇನ್ನೊಂದು ಮುಖ್ಯ ಅಂಶವೇನೆಂದರೆ, ಈ ದಿನ ಜಮೀನ್‌ದಾರರು ರೈತರಿಂದ ಗೇಣಿ ಮೂಲಕ ವಸೂಲಾದ ಭತ್ತದ ಬಗ್ಗೆ ಅವರಿಗೆ ರಶೀತಿ ಕೊಡಬೇಕೆಂದು ಕಾನೂನಿನಲ್ಲಿ ನಿಯಮಕವಾಗಿದ್ದರೂ ಸಹ ಆ ರೀತಿ ರಶೀತಿ ಕೊಡುತ್ತಿಲ್ಲ. ತತ್ಫಲವಾಗಿ ಹಲವಾರು ಗೇಣಿದಾರರು ಕಷ್ಟಕ್ಕೊಳಗಾಗಿ, ಜಮೀನ್‌ದಾರರು ಗೇಣಿದಾರ ಮೇಲೆ ಗೇಣಿ ವಸೂಲಾತಿ ಬಗ್ಗೆ ಕ್ರಮ ಜರುಗಿಸಿರುವ ಅನೇಕಕ ಉದಾಹರಣೆಗಳಿವೆ. ಅದುದರಿಂದ ಈ ವಿಚಾರದಲ್ಲಿ ಮೊದಲೇ ಕಾನೂನು ರಚನೆ ಮಾಡಿದಾಗಲೂ ಸಹ ಈ ಒಂದು ದೊಡ್ಡ ತಪ್ಪು ಕಲ್ಪನೆ ಇತ್ತು ಎಂಬುದು ಎಲ್ಲಿರಿಗೂ ಎದ್ದು ಕಾಣುತ್ತಿದೆ. ಒಬ್ಬ ಗೇಣಿದಾರನಿಗೆ ಕಾನೂನಿನ ಸೌಲಭ್ಯ ಒದಗಬೇಕಾದರೆ ಅವನು ಈ ಕಾನೂನು ಚಾಲ್ತಿಗೆ ಬಂದ ಎರಡು ವರ್ಷಗಳ ಹಿಂದಿನ ಕಾಲದಿಂದಲಾದರೂ ಗೇಣಿದಾರನಾಗಿರಬೇಕೆಂದಿದೆ. ಎರಡು ವರ್ಷಗಳಿಗೆ ಕಡಿಮೆ ಆಗಿದ್ದರೆ ಗೇಣಿದಾರರಿಗೆ ಸೌಲಭ್ಯ ದೊರೆಯುವುದಿಲ್ಲ; ಅವರಿಗೆ ಈ ಕಾನೂನು ಒಳಪಡುವುದಿಲ್ಲವೆಂಬ ಅರ್ಥ ಬರುತ್ತದೆ.

---

ವಿಧಾನ ಸಭೆ ನಡವಳಿಕೆ: ದಿನಾಂಕ 13.1.1954



ಆದ್ದರಿಂದ ಯಾವ ರೈತ ಇವೊತ್ತೇ ಆಗಲಿ ನಾಳೆಯೇ ಆಗಲಿ, ನಿನೆಯೇ ಆಗಲಿ ಒಬ್ಬರ ಜಮೀನನ್ನು ಗೇಣಿಗೆ ಪಡೆದರೆ ಇವೊತ್ತು ಜಾರಿಯಲ್ಲಿರತಕ್ಕ ಗೇಣಿ ಕಾನೂನು ಅವನಿಗೆ ಕ್ಷಣದಲ್ಲೇ apply ಆಗುತ್ತದೆ. ಈ ಗೇಣಿ ಕಾನೂನಿನಲ್ಲಿ ಏನು ರಕ್ಷಣೆಗಳು ಕೊಡಲ್ಪಟ್ಟಿವೆಯೋ ಈ ಎಲ್ಲಾ ರಕ್ಷಣೆಗಳನ್ನೂ ಉಪಯೋಗಿಸಿಕೊಳ್ಳುವುದಕ್ಕೆ ಅವನು ಅರ್ಹನಾಗುತ್ತಾನೆ. ಇಂಥ ಒಂದು ಅಧಿಕಾರವನ್ನು ಈ ತಿದ್ದುಪಡಿ ಮುಖಾಂತರ ಇವೊತ್ತು ಸರ್ಕಾರದವರು ಒದಗಿಸಿಕೊಡ್ತಯಿದ್ದಾರೆ. ಇದು ರೈತರಿಗೆ ಒಂದು ಬಹಳ ಒಳ್ಳೆಯ ದೊಡ್ಡ ಉಪಕಾರವನ್ನು ಉಂಟುಮಾಡಿದಂತೆ ಆಗಿದೆ ಎಂದು ಹೇಳಬೇಕಾಗಿದೆ. ಕಾನೂನು ಎರಡು ವರ್ಷಗಳಿಂದ ಇತ್ತು ಎಂಬ ಮಾತಿನಲ್ಲಿ ಅರ್ಥವೇ ಇರಲಿಲ್ಲ. ಆದ್ದರಿಂದ ಇದು ಅತ್ಯಗತ್ಯವಾದ ತಿದ್ದುಪಡಿ, ಇದು ಇಲ್ಲದೇ ಹೋಗಿದ್ದರಿಂದ ಇದುವರೆಗೂ ಗೇಣಿ ಕಾನೂನು ಜಾರಿಯಲ್ಲಿದ್ದರೂ ಕೂಡ ಇದರ ಸೌಲಭ್ಯವನ್ನು ರೈತರು ಪಡೆಯುವುದಕ್ಕೆ ಆಗಿರಲಿಲ್ಲ ಎಂದು ಹೇಳಬೇಕಾಗಿದೆ.

ಇನ್ನು ಈ ತಿದ್ದುಪಡಿಯನ್ನು ಅನುಮೋದಿಸುತ್ತಾ ನಾನು ಇನ್ನೊಂದು ಅಂಶವನ್ನು ಹೇಳಬೇಕಾಗಿದೆ. ನಾನು ತಿದ್ದುಪಡಿ ಬಂದಿದೆ ಎಂದು ಕೇಳಿದಾಗ ಏನು ತಿಳಿದುಕೊಂಡಿದ್ದೆ, ಈ ಗೇಣಿ ಕಾನೂನಿನಲ್ಲಿರತಕ್ಕಂಥ ಇನ್ನೂ ಹೆಚ್ಚಿನ ನ್ಯೂನತೆಗಳನ್ನು ಈ ತಿದ್ದುಪಡಿಯಲ್ಲಿ ತರಬಹುದು ಎಂದು ಹೇಳಿ ಇದ್ದೇ ಆದರೆ ಈ ಒಂದು ತಿದ್ದುಪಡಿಯನ್ನು ನೋಡಿದಾಗ ನನಗೆ ತುಂಬ ವಿಷಾದವೆನ್ನಿಸಿತು. ಏಕೆಂದರೆ ನಮ್ಮಲ್ಲಿ ಇವೊತ್ತು ಜಾರಿಯಲ್ಲಿರತಕ್ಕ ಗೇಣಿ ಕಾನೂನಿನ ಪ್ರಕಾರ ಅನೇಕ ಕಡೆಗಳಲ್ಲಿ ರೈತರಿಗೆ ರಕ್ಷಣೆದೊರೆತಿಲ್ಲ; ಮತ್ತು ಇದನ್ನು ಪೂರ್ಣ ಕಾರ್ಯಗತ ಮಾಡುವುದಕ್ಕೆ ಆಗದೇಯಿರವುದೂ ಕೂಡ ಒಂದು ದೊಡ್ಡ ವಿಷಾದದ ಸಂಗತಿಯಾಗಿದೆ. ಹಿಂದೆ ಕೂಡ ಅನೇಕ ವೇಳೆ ನಮ್ಮ ಸಂಸ್ಥಾನದ ರೈತರನ್ನು ರಕ್ಷಣೆ ಮಾಡುವುದಕ್ಕೆ ಮುಂಬೈ ಸರ್ಕಾರ ಜಾರಿಯಲ್ಲಿ ತಂದಿರತಕ್ಕ ಒಂದು ಗೇಣಿ ಕಾನೂನನ್ನು ಹೇಳಿ ಒತ್ತಾಯ ಮಾಡಿದಾಗ್ಯೂ ಕೂಡ ಆರೀತಿ ಒಂದು ತಿದ್ದುಪಡಿಯನ್ನು ಈ ನಮ್ಮ ಕಾನೂನಿಗೆ ಇನ್ನು ತಂದಿಲ್ಲ. ಇದರಿಂದ ಏನಾಗಿದೆ ಎಂದರೆ ಇವೊತ್ತು ಎಷ್ಟೋಕಡೆಗಳಲ್ಲಿ ಮಲೆನಾಡಿನಲ್ಲಿ ಹೇಳಬೇಕೆಂದರೆ, ಗೇಣಿ 1/3 ಭಾಗ ಎಂದು ಹೇಳಿ ಗೊತ್ತುಮಾಡಿದ್ದಾರೆ. 1/3 ಭಾಗ ತೀರ ಕಡಿಮೆಯಾಗಿದೆ ಅಥವಾ fair rent ಎಂದು ಹೇಳುವುದಕ್ಕಾಗುವುದಿಲ್ಲ. ಆದೇ ಮುಂಬೈನಲ್ಲಿ ಅವರು ಬೆಳೆದದ್ದರಲ್ಲಿ 1/6 ಭಾಗ ಪಡೆಯುತ್ತಾರೆ. ಮತ್ತು ಒಬ್ಬ ರೈತ ಭೂಮಿಯನ್ನು ಗೇಣಿಗೆ ಪಡೆದು ಕನಿಷ್ಠಪಕ್ಷ 10 ವರ್ಷವಾದರೂ ಹಕ್ಕು ಕೊಡಬೇಕೆಂದು ಅದರಲ್ಲಿ ಇದೆ. ಭೂಮಿಯನ್ನು ಮಾರಾಟ ಮಾಡುವಾಗ ರೈತ ಕೊಂಡುಕೊಳ್ಳುವ ಹಾಗಿದ್ದರೆ ಅವನಿಗೆ ಹೆಚ್ಚಿನ ಸೌಲಭ್ಯ ಒದಗಿಸಿಕೊಡಬೇಕೆಂದು ಸಹ ಇದೆ. ಸಾಮಾನ್ಯವಾಗಿ ಬೇರೆ ಯಾವುದೋ ನೆಪವನ್ನು ಒಡ್ಡಿ ಜಮೀನ್‌ದಾರ ರೈತನನ್ನು ಭೂಮಿಯಿಂದ ಹೊರಗೆ ಹಾಕದೇ ಇರುವುದಕ್ಕೆ ಅದರಲ್ಲಿ ನಮ್ಮ ಕಾನೂನಿನಲ್ಲಿರುವುದಕ್ಕಿಂತ ಹೆಚ್ಚಿನ ಸೌಲಭ್ಯಗಳು ಇವೆ.

ಆದ್ದರಿಂದ ಈ ಮುಂಬೈ ಕಾನೂನು ಪ್ರಕಾರ ನಮ್ಮ ಒಂದು ಗೇಣಿ ಪದ್ಧತಿಯನ್ನು ಗಮನದಲ್ಲಿಟ್ಟುಕೊಂಡು ಒಂದು ತಿದ್ದುಪಡಿಯನ್ನು ತರಬೇಕಾದದ್ದು ಬಹಳ ಮುಖ್ಯವಾಗಿದೆ.

ಆದ್ದರಿಂದ ನಾನು ಮತ್ತೊಮ್ಮೆ ಈ ಸಭೆಗೆ ಒತ್ತಾಯ ಪೂರ್ವಕವಾಗಿ ಮನವಿ ಮಾಡಿಕೊಳ್ಳುವುದದೇನೆಂದರೆ, ನಾವು ಈ ಗೇಣಿ ಕಾನೂನನ್ನು ಹೆಚ್ಚು ಪ್ರಗತಿಪರವಾಗಿ ಮಾಡಬೇಕು. ಗೇಣಿ ಪದ್ಧತಿಯನ್ನು ಪ್ರಗತಿ ಪರವಾಗಿ ಮಾಡುವುದರಿಂದ ನಮ್ಮ ದೇಶದಲ್ಲಿ ಈಗ ಯಾವ ರೈತರು ಇದ್ದಾರೋ, ಗೇಣಿದಾರರು ಇದ್ದಾರೋ ಅವರನ್ನು ನಾವು ರಕ್ಷಣೆಮಾಡುವುದಕ್ಕೆ ಅವಕಾಶವಾಗುತ್ತದೆ. ಅವರನ್ನು ರಕ್ಷಣೆಮಾಡದೇ ಹೋದರೆ, ಅವರು ಈಗಿರತಕ್ಕ ದುರ್‌ದಶೆಯಲ್ಲಿ ಇದ್ದರೆ ನಾವು ಏನು ಒಂದು ಬೆಳೆಯನ್ನು ಹೆಚ್ಚಿಸಬೇಕು, ರೈತರನ್ನು ಉದ್ಧಾರಮಾಡಬೇಕು ಎಂದು ಹೇಳುತ್ತೇವೆ ಅದು ಬರೀಮಾತಾಗಿ ಉಳಿಯುತ್ತದೆಯೇ ಹೊರತು ಕೃತಿಯಲ್ಲಿ ಸಾಧ್ಯವಾಗುವುದಿಲ್ಲ. ಅಲ್ಲದೆ ರೈತರಿಗೆ ಇವೊತ್ತು ಸಾಲದ ರೂಪದಲ್ಲಿ ಮತ್ತು ಬೀಜಕೊಡತಕ್ಕ ರೂಪದಲ್ಲಿ, ಗೊಬ್ಬರವನ್ನು ಒದಗಿಸುವ ರೀತಿಯಲ್ಲಿ ಟೆನೆನ್ಸಿ ಕಾಯ್ದೆ ಬರುತ್ತಿದೆ - ಈ ಸಂದರ್ಭಗಳಲ್ಲಿ ನಾವು ಯಾವ ಒಂದು ಸೌಲಭ್ಯವನ್ನೂ ರೈತರಿಗೆ ಕಲ್ಪಿಸಿಕೊಟ್ಟಿಲ್ಲ. ಇವೊತ್ತು ಭೂಮಿಗೂ ಮತ್ತು ಉಳುಮೆ ಮಾಡತಕ್ಕ ರೈತನಿಗೂ ಮಧ್ಯೆ ಯಾರೂ ಮಧ್ಯಸ್ಥಗಾರರು ಇರಬಾರದು ಎಂಬ ತತ್ವವನ್ನು ಸ್ಥೂಲವಾಗಿ ಎಲ್ಲರೂ ಒಪ್ಪಿಕೊಂಡಿದ್ದಾರೆ. ಆದರೂ ಕೂಡ ಮಧ್ಯೆ ಇರತಕ್ಕ ಇಂಟರ್ ಮೀಡಿಯರೀಸನ್ನು ತೊಡೆದುಹಾಕುವುದರಲ್ಲಿ ಹೆಚ್ಚು ಕಾಲ ವಿಳಂಬವಾಗಿದೆ ಎಂದು ನಾನು ಹೇಳಬೇಕಾಗಿದೆ. ಈ ಕಾಲವಿಳಂಬದ ದೆಸೆಯಿಂದಾಗಿ ಭೂಮಿಯನ್ನು ಉಳುಮೆಮಾಡತಕ್ಕ ರೈತರ ಮತ್ತು ಭೂಮಾಲೀಕರ ಮಧ್ಯೆ ಅನೇಕ ವಿಧವಾದ ಜಗಳಗಳು ಉಂಟಾಗುತ್ತಿವೆ ಮತ್ತು ಇದರಿಂದಾಗಿ ಕೋರ್ಟುಗಳಿಗೆ - ಇವೊತ್ತು ನೋಡಬಹುದು - ರೈತ ತಪ್ಪುಮಾಡಿರಲಿ, ಮಾಡದೇಯಿರಲಿ ಅವನನ್ನು ಭೂಮಿಯಿಂದ ಹೊರತಳ್ಳಬೇಕು, ಭೂಮಿಯಿಂದ ಬಿಡಿಸಬೇಕು ಎಂಬ ಉದ್ದೇಶದಿಂದ ನಾನಾ ನೆಪಗಳನ್ನು ಹೂಡಿ ನೂರಾರೂ ಸಂಖ್ಯೆಯಲ್ಲಿ ಕೇಸುಗಳನ್ನು ಹಾಕುತ್ತಿರುವುದನ್ನು ನೋಡುತ್ತಿದ್ದೇವೆ.

Mr. Speaker.- May I point out Sri Gopala Gowda that you are speaking on the Tenancy Act itself rather than on the Ordinance?

Sri S. Gopala Gowda.- I anticipated that some of these provisions wouyld be fount in it.

Mr. Speaker.- You sould have tabled an amendment.

ಶ್ರೀ ಎಸ್. ಗೋಪಾಲಗೌಡ:- ಆದ್ದರಿಂದ ಈ ತಿದ್ದುಪಡಿಯನ್ನು ಅನುಮೋದನೆ ಮಾಡುತ್ತಾ ಹೆಚ್ಚಿನ ಇನ್ನೂ ಪ್ರಗತಿ ಪರವಾದ ಒಂದು ಕಾನೂನನ್ನು ಅವರು ಜಾಗ್ರತೆಯಾಗಿ ತರಬೇಕು ಎಂದು ಹೇಳಿ ಕೇಳಿಕೊಂಡ, ಇದನ್ನು ಅನುಮೋದಿಸುತ್ತೇನೆ.



**ಭೂಸುಧಾರಣೆ ಮಸೂದೆ - 1954**

ಸೀಲಿಂಗ್ ಲಿಮಿಟ್ ಎಂದರೆ, ಒಬ್ಬ ಮನುಷ್ಯನಿಗೆ ಇಷ್ಟು ಎಕರೆಗಳಿಗಿಂತ ಹೆಚ್ಚು ಭೂಮಿ ಇರತಕ್ಕದ್ದಲ್ಲ ಎನ್ನುವ ಅರ್ಥದಲ್ಲಿ ಆ ಶಬ್ದವನ್ನುಪಯೋಗಿಸುತ್ತೇವೆ. ಇಲ್ಲಿ ಒಬ್ಬ ಮನುಷ್ಯನಿಗೆ 25 ಅಥವಾ 100 ಎಕರೆಗಿಂತ ಹೆಚ್ಚು ಭೂಮಿ ಇರತಕ್ಕದಲ್ಲವಂದು ಇದರಲ್ಲಿಲ್ಲ.

ಈ ತಿದ್ದುಪಡಿಯಲ್ಲಿ ಯೋಚನೆ ಮಾಡಿರುವ ಪ್ರಕಾರ ಒಬ್ಬ ಜಮಿಾನ್‌ದಾರನಿಗೆ ಸ್ವತಂತ್ರವಾಗಿ ಸಾಗುವಳಿ ಮಾಡಬೇಕು ಎಂದು ಇಷ್ಟ ಬಂದರೆ ಅವನು 25 ಎಕರೆಗಳಷ್ಟು ಭೂಮಿಯನ್ನು ತನ್ನ ಸ್ವಂತ ಸಾಗುವಳಿಗೆ ಇಟ್ಟುಕೊಳ್ಳಬಹುದು. ಅವನ ಕುಟುಂಬದಲ್ಲಿ ಹೆಚ್ಚಿಗೆ ಜನರು ಇದ್ದರೆ ಅಂತರ ನಾಲ್ಕರಷ್ಟು ಅಂದರೆ 100 standard ಎಕರೆಗಳಿಗೆ ಮಿಾರದಷ್ಟು ಸ್ವಂತ ಸಾಗುವಳಿಗೆ ಇಟ್ಟುಕೊಳ್ಳಬಹುದು ಎಂದಿದೆ. ತನ್ನ ಕುಟುಂಬ ಎಷ್ಟು ದೊಡ್ಡದೇ ಇರಲಿ ಅವನ ಜಮಿಾನು 100 standard ಎಕರೆಗಳಿಗಿಂತಲೂ ಮಿಾರಿರಬಾರದು. ಆದರೆ ಅವನ ಹತ್ತಿರ ಇರತಕ್ಕಂಥ 1,000 ಎಕರೆ ಭೂಮಿಯನ್ನು ಸರ್ಕಾರ ತೆಗೆದುಕೊಂಡು ರೈತರಿಗೆ ಹಂಚುವುದಕ್ಕೆ ಹೋಗುವುದಿಲ್ಲ.

ಶ್ರೀ. ಎ. ಭೀಮಪ್ಪನಾಯಕ್.- ಉಳಿದ ಜಮಿಾನನ್ನು ಏನು ಮಾಡುತ್ತೀರಿ? 100 ಎಕರೆ ಲಿಮಿಟ್ ಆದರೆ ಬಾಕಿ 900 ಎಕರೆಗಳನ್ನು ಏನು ಮಾಡಬೇಕೆಂಬುದಾಗಿ ಈ ಮಸೂದೆಯಲ್ಲಿ ಹೇಳಿಲ್ಲ.

ಶ್ರೀ ಎಸ್. ಗೋಪಾಲಗೌಡ.- ಒಬ್ಬ ಜಮಿಾನ್‌ದಾರನಾಗಿದ್ದು 900 ಎಕರೆಗೆ ಖಾತೇದಾರನಾಗಿದ್ದು 900 ಎಕರೆಯನ್ನು ತಾನೇ ಸಾಗೂ ಮಾಡಿದರೆ ಅಥವಾ ಬಂಜರು ಬಿಟ್ಟಿದ್ದರೆ ಅವನನ್ನು ಮುಟ್ಟುವುದಿಲ್ಲ. ಆ ಜಮಿಾನ್‌ದಾರನ ಅಡಿಯಲ್ಲಿ ಆ ಗೇಣಿದಾರನು ಇದ್ದು ಅವನು ಒಂದು ಕಾರಣದಿಂದ ಸಾಗುಮಾಡದೆ ಇದ್ದರೆ, ಆ ಸಂದರ್ಭದಲ್ಲಿ ಅವನು ಸ್ವಂತ ಸಾಗುಮಾಡುತ್ತೇನೆಂದು ಇಷ್ಟಪಟ್ಟರೆ, 25 standard ಎಕರೆ ಅಥವಾ 100 standard ಎಕರೆಗಳಿಗೆ ಮಿಾರದಂತೆ ಅವನು ಬಿಡಿಸಿಕೊಳ್ಳಬಹುದು. ಅಂದರೆ 100 ಎಕರೆ ಗೇಣಿಗುತ್ತಿಗೆ ಇಲ್ಲದೆ ಕೋರು ಮಾಡತಕ್ಕಂಥ ಗೇಣಿದಾರರಿಂದ ಬಿಡಿಸಿಕೊಳ್ಳುವುದಕ್ಕೆ ಇದು ಅವಕಾಶ ಕೊಟ್ಟಿದೆ.

ಶ್ರೀ ಎ. ಭೀಮಪ್ಪನಾಯಕ:- ಆದಕ್ಕೆ ತಾನೇ ನಾವು discriminatory ಎಂದು ಹೇಳುವುದು.

ಶ್ರೀ ಎಸ್. ಗೋಪಾಲಗೌಡ:- ಆದ್ದರಿಂದ ಈಗ ತಾನೇ ನಮ್ಮ ಸ್ನೇಹಿತರು ಹೇಳಿದ ಹಾಗೆ.

---

ವಿಧಾನ ಸಭೆ ನಡವಳಿಕೆ: ದಿನಾಂಕ 28.2.1955

Sri. S.R. Nagappasetty (Shimoga).- On a point of information.ಒಬ್ಬ ರೈತನ ಹತ್ತಿರ 1,000 ಎಕರೆ ಇತ್ತು. ಆದರಲ್ಲಿ 100 ಎಕರೆಯನ್ನು ಜಮಿಾನ್ ದಾರನು ಬಿಡಿಸಿಕೊಳ್ಳುವುದಕ್ಕೆ ಅವಕಾಶ ಕೊಟ್ಟರೆ ಬಾಕಿ ಉಳಿದ 900 ಎಕರೆಯನ್ನು ರೈತನುಕೊಂಡು ಕೊಳ್ಳುವುದಕ್ಕೆ ಇದರಲ್ಲಿ ಅವಕಾಶವಿದೆಯೇ?

ಶ್ರೀ ಎಸ್. ಗೋಪಾಲಗೌಡ.- ಹಾಗೆ ಕೊಂಡುಕೊಳ್ಳುವುದಕ್ಕೆ ಅವಕಾಶಮಾಡಿಕೊಟ್ಟಿದ್ದಾರೆ. ಆದ್ದರಿಂದ ಶ್ರೀ ಎ. ಭೀಮಪ್ಪನಾಯಕರ ವಾದ, ಎಂದರೆ, ಈ ತಿದ್ದುಪಡಿಯನ್ನು ಈ ಗೇಣಿ ಕಾನೂನಲ್ಲಿ ತರತಕ್ಕದ್ದಲ್ಲ. ಅದಕ್ಕೆ ಬೇರೆ ಒಂದು ಮಸೂದೆಯನ್ನು ತರಬೇಕು ಎಂಬುದು ಅಷ್ಟು ಸಮಂಜಸವಾಗಿಲ್ಲ ಎಂದು ಮಾತ್ರ - ನಾನು ಹೇಳಬಯಸುತ್ತೇನೆ. ಇದರಲ್ಲಿ ಮುಖ್ಯವಾಗಿ ಗೇಣಿಯ ಅವಧಿ 5 ವರ್ಷದಿಂದ 10 ವರ್ಷದವರೆಗೆ ಹೆಚ್ಚಿಸಲ್ಪಟ್ಟಿದೆ. ರೈತರ ಹಿತದೃಷ್ಟಿಯಿಂದ ಈ ತಿದ್ದುಪಡಿ ಆವಶ್ಯಕವೆಂದು ನಾನೂ ಕೂಡ ಹೇಳುತ್ತೇನೆ. ಮುಖ್ಯವಾಗಿ ಈ ಸಂದರ್ಭದಲ್ಲಿ ಅವರು 10 ವರ್ಷಗಳಲ್ಲಿಯೇ ಅಲ್ಲ, ಎಲ್ಲಿಯವರೆಗೆ ಗೇಣಿಯನ್ನು ಸುಸೂತ್ರವಾಗಿ ಪಾವತಿ ಮಾಡಿಕೊಂಡು ಮತ್ತು ಈ ಭೂಮಿಯನ್ನು ಸರಿಯಾಗಿ ಸಾಗು ಮಾಡಿಕೊಂಡು ಹೋಗುತ್ತಾರೋ ಅಲ್ಲಿಯವರೆಗೂ ಕೂಡ ಅವರು ಗೇಣಿದಾರರಾಗಿ ಉಳಿಯುವುದಾದರೆ ಅವರಿಗೆ ಅವಕಾಶ ಇರಬೇಕೆಂದು ಕೂಡ ಈ ಮಸೂದೆಯಲ್ಲಿ ಒಂದು ಅವಕಾಶ ಕಲ್ಪಿಸಿಕೊಟ್ಟರೆ ಒಳ್ಳೆಯದು. 10 ವರ್ಷಗಳಲ್ಲಿ ಅಲ್ಲ. ಎಲ್ಲಿಯ ತನಕ ಆ ರೀತಿ ಸಲೀಸಾಗಿ ಕೊಟ್ಟುಕೊಂಡು ಆ ಜಮಿಾನನ್ನು ಸರಿಯಾದ ರೀತಿಯಲ್ಲಿ ಇಟ್ಟುಕೊಂಡು ಸಾಗುಮಾಡಿಕೊಂಡು ಹೋಗುತ್ತಾನೋ ಅಲ್ಲಿಯವರೆಗೆ ಅವನಿಗೆ ಭೂಮಿಯನ್ನು ಗೇಣಿ ಮಾಡಿಕೊಂಡು ಹೋಗುವುದಕ್ಕೆ ಅವಕಾಶ ಕಲ್ಪಿಸಿಕೊಡಬೇಕು. ನಾನು ತಿಳಿದುಕೊಂಡಿರುವ ಹಾಗೆ ಜಮಿಾನ್‌ದಾರರಿಗಾಗಲಿ, ಇತರರಿಗಾಗಲಿ, ಇಂತಹ ತೊಂದರೆಗಳು ಬರಲಾರದ ಹಾಗೆ, ಅತನು ಭೂಮಿಯನ್ನು ತಾನು ಕೊಂಡುಕೊಳ್ಳುವುದಕ್ಕೆ ಇಷ್ಟಪಟ್ಟರೆ ಆಗ ಆ ರೀತಿ ಕೊಂಡುಕೊಳ್ಳುವ ಹಕ್ಕನ್ನು ಈ ಮಸೂದೆಯ ತಿದ್ದುಪಡಿಯಲ್ಲಿ ಸೂಚಿಸಲಾಗಿದೆ. ಹಿಂದೆ ಇದ್ದ ಹಕ್ಕು ಸಾಮಾನ್ಯವಾಗಿ ಜಮಿಾನ್‌ದಾರರು ಭೂಮಿಯನ್ನು ಮಾರುವಾಗ ಗೇಣಿದಾರರಿಗೆ ನೋಟೀಸನ್ನು ಕೊಡಬೇಕಾಗಿತ್ತು. ಆ ನೋಟಿಸ್‌ನಲ್ಲಿ ತಾನು ಇಷ್ಟು ಖರೀದಿಗೆ ಇಂತಹ ಭೂಮಿಯನ್ನು ಮಾರುತ್ತೇನೆಂದು ತಿಳಿಸಬೇಕಾಗಿತ್ತು. "11ನೇ ಕ್ಲಾಸ್‌ನ ತರುವಾಯ ಈ ಕೆಳಗೆ ಕಂಡ ಕ್ಲಾಸನ್ನು ಸೇರಿಸಿಕೊಳ್ಳತಕ್ಕದ್ದು ಅದು ಯಾವುದೆಂದರೆ.

"ಯಾವುದಾದರೂ ಒಂದು ಜಮಿಾನಿನ ವಿಷಯದಲ್ಲಿ ಒಬ್ಬ ಷಿಗ್ಮಿದಾರನು, (ಎ) ಆ ಜಮಿಾನನ್ನು 1951ನೇ ಇಸವಿಯಲ್ಲಿ ಏಪ್ರಿಲ್ 1 ನೇ ತಾರೀಖಿನ ನಿಕಟ ಪೂರ್ವದಲ್ಲಿ ಹಿಂದಿನ 9 ವರ್ಷಗಳಿಗೆ ಕಡಿಮೆ ಇಲ್ಲದಷ್ಟು ಅವಧಿಯವರೆಗೆ ಅವಿಚ್ಛೇನ್ನವಾಗಿ ತನ್ನ ಹಿಡುವಳಿಯಲ್ಲಿಟ್ಟುಕೊಂಡಿದ್ದರೆ ಮತ್ತು.



(ಬಿ) ಅಂಥ ಜಮೀನನ್ನು ಮೇಲ್ಕಂಡ ಅವಧಿಯಲ್ಲಿ ತಾನೇ ಖುದ್ದಾಗಿ ಸಾಗುವಳಿ ಮಾಡಲ್ಪಟ್ಟಿದ್ದರೆ ಅವನು ಒಬ್ಬ ರಕ್ಷಿಸಲ್ಪಟ್ಟ ಪಿಕ್ಮಿಯೆಂದು ಭಾವಿಸಲ್ಪಡತಕ್ಕುದು.

ಇದು ಮುಂಬಯಿನ ಗೇಣಿ ಮಸೂದೆಯಲ್ಲಿಯೂ ಇದೆ. ಇದರಿಂದ protected tenants ಕೊಂಡುಕೊಳ್ಳುವುದಕ್ಕೆ ಅನುಕೂಲವಾಗುತ್ತದೆ. ಇದರಲ್ಲಿ protected tenants ಎಂಬುದನ್ನು ಮೇಲಿನ ರೀತಿಯಲ್ಲಿ define ಮಾಡಿದ್ದಾರೆ. He will become protected tenant under this provision ಇದಕ್ಕೆ ಮೂರು ವಿವರಣೆಗಳನ್ನು ಕೊಟ್ಟಿದ್ದಾರೆ. ಅದಾದ ಮೇಲೆ ಕೊಂಡುಕೊಳ್ಳುವುದಕ್ಕೆ ಏನು ನಿಬಂಧನೆಗಳಿವೆ ಎಂಬುದನ್ನು ಹೇಳಿದ್ದಾರೆ. ರಕ್ಷಿಸಲ್ಪಟ್ಟ ಪಿಕ್ಮಿದಾರರ ಮತ್ತು ರಕ್ಷಿಸಲ್ಪಟ್ಟಿಲ್ಲದಿರುವ ಕೆಲವು ಪಿಕ್ಮಿದಾರರ ವಿಶೇಷ (1) ಯಾವುದಾದರೂ ಕಾನೂನಿನಲ್ಲಿ ಸಂಪ್ರದಾಯದಲ್ಲಿ ಅಥವಾ ಕರಾರು ಒಪ್ಪಂದದಲ್ಲಿ ವಿರುದ್ಧವಾದುದೇನೇ ಇದ್ದಾಗ್ಯೂ, (6) ನೆಯ ಒಳ ಪ್ರಕರಣದ ನಿಯಮಗಳಿಗೂಳಪಟ್ಟು ರಕ್ಷಿಸಲ್ಪಟ್ಟ ಪಿಕ್ಮಿದಾರನು ಅಥವಾ ರಕ್ಷಿಸಲ್ಪಟ್ಟಿಲ್ಲದಿರುವ ಪಿಕ್ಮಿದಾರನು ಆಯಾ ಸಂದರ್ಭಾನುಸಾರವಾಗಿ ಆತನ ರಕ್ಷಿಸಲ್ಪಟ್ಟ ಪಿಕ್ಮಿದಾರನಾಗಿ ಅಥವಾ ರಕ್ಷಿಸಲ್ಪಟ್ಟಿಲ್ಲದ ಪಿಕ್ಮಿದಾರನಾಗಿ ಪಡೆದಿದ್ದ ಜಮೀನನ್ನು ಜಮೀನುದಾರನಿಂದ ಕೊಂಡುಕೊಳ್ಳು ಹಕ್ಕುಳ್ಳವನಾಗಿರತಕ್ಕುದು.

(2) ಈ ಉದ್ದೇಶಕ್ಕಾಗಿ ಆಯಾ ಸಂದರ್ಭಾನುಸಾರವಾಗಿ ರಕ್ಷಿಸಲ್ಪಟ್ಟ ಪಿಕ್ಮಿದಾರನಾಗಲಿ, ಅಥವಾ ರಕ್ಷಿಸಲ್ಪಟ್ಟಿಲ್ಲದಿರುವ ಪಿಕ್ಮಿದಾರನಾಗಲಿ ಜಮೀನಿಗಾಗಿ ತಾನು ಪಾವತಿ ಮಾಡಲು ಸಿದ್ದನಾಗಿರುವ ಕಿಮ್ಮತ್ತಿನ ಮೊಬಲಗನ್ನು ಜಮೀನುದಾರನಿಗೆ ಬರವಣಿಗೆಯ ಮೂಲಕ ತಿಳಿಯಪಡಿಸತಕ್ಕುದು.

ಈಗಿರತಕ್ಕಂಥ ಕಾನೂನಿನಲ್ಲಿ ಈ provision ಇಲ್ಲ. ಅವನಿಗೆ ಇಷ್ಟಪಟ್ಟರೆ ಈ ರೀತಿ ತಿಳಿವಳಿಕೆಯ ಆ ರೀತಿ ತಿಳಿಸಿದರೆ ಜಮೀನನ್ನು ಮಾರಬೇಕು ಎನ್ನುವ ಕಾನೂನಿನಲ್ಲಿ ಆ ತಿಳಿಶಳಿಕೆಯ ತಾರೀಖಿನಲಾಗಾಯಿತು ಮೂರು ತಿಂಗಳುಗಳ ಕಾಲಾವಧಿಯೊಳಗಾಗಿ ಜಮೀನುದಾರನು ನಿರಾಕರಿಸಿದ್ದೇ ಆದರೆ ಅಥವಾ ಒಪ್ಪಿಕೊಳ್ಳಲು ತಪ್ಪಿದ್ದೇ ಆದರೆ ಆಯಾ ಸಂದರ್ಭಾನುಸಾರ ರಕ್ಷಿಸಲ್ಪಟ್ಟಿರುವ ಪಿಕ್ಮಿದಾರನಾಗಲಿ, ಜಮೀನಿನ ವಿಷಯದಲ್ಲಿ ಬಜಾರು ಬೆಲೆಯನ್ನು ಗೊತ್ತು ಮಾಡಲು ಅಸಿಸ್ಟಂಟ್ ಕಮಿಷನರ್‌ರವರಿಗೆ ಅರ್ಜಿಯನ್ನು ಒಪ್ಪಿಸಬಹುದು. ಇದರಲ್ಲಿ ರೈತರು ಮುಖ್ಯವಾಗಿ protected tenants ಗೇಣಿಗೆ ಪಡೆಯತಕ್ಕಂಥ ಭೂಮಿಯನ್ನು ಕ್ರಮವಾಗಿ ತಮ್ಮ ಭೂಮಿಯನ್ನಾಗಿ ಮಾಡಿಕೊಳ್ಳುವುದಕ್ಕೆ ಅವಕಾಶವಿದೆ. "Tenants-at-will" ಎಂಬ ವಿಚಾರ ಮಸೂದೆಯಲ್ಲಿ ಎಲ್ಲಿ ಇದೆ ?

ಶ್ರೀ ಕಡಿದಾಲ್ ಮಂಜಪ್ಪ :- ಕ್ಲಾಸ್ 31 (ಬಿ) ನಲ್ಲಿ ಹೇಳಿದೆ.

ಶ್ರೀ ಎಸ್. ಗೋಪಾಲಗೌಡ :- ಹಾಗೆಯೇ "Tenants-at-will" ಆಗಿರತಕ್ಕಂಥವರೂ ಕೂಡ ಈ ತಿದ್ದುಪಡಿ ಪ್ರಕಾರ 1951 ನೇ ಇಸವಿಯ ಹಿಂದೆ 10 ವರ್ಷಗಳು ಕ್ರಮವಾಗಿ ಉಳುಮೆ ಮಾಡುತ್ತಾ ಇರತಕ್ಕಂಥವರು ಕೂಡ ಕೊಂಡುಕೊಳ್ಳುವುದಕ್ಕೆ 31 (ಬಿ) ನಲ್ಲಿ ಅವಕಾಶವನ್ನು ಒದಗಿಸಿಕೊಡಲಾಗಿದೆ. ಇದರಲ್ಲಿ ಗುತ್ತಿಗೆ ವಿಷಯದಲ್ಲಿ ಈ ಗುತ್ತಿಗೆ ಪ್ರಮಾಣವನ್ನು ನಿಗಧಿಮಾಡುವ ತಿದ್ದುಪಡಿಯನ್ನು ಏಕೆ ಸೇರಿಸಿಲ್ಲ ?

ಶ್ರೀ ಕಡಿದಾಳ್ ಮಂಜಪ್ಪ :- ಗುತ್ತಿಗೆ ಪ್ರಮಾಣವನ್ನು ನಿಗದಿಮಾಡುವುದಕ್ಕೆ ಸರ್ಕಾರಕ್ಕೆ ಅಧಿಕಾರವಿದೆ.

ಶ್ರೀ ಎಸ್. ಗೋಪಾಲಗೌಡ :- ಅದನ್ನು ಜಾಗ್ರತೆ ಸರ್ಕಾರ ಯಾವಾಗ ಮಾಡುತ್ತದೆ?

ಶ್ರೀ ಕಡಿದಾಳ್ ಮಂಜಪ್ಪ :- ಆದಷ್ಟು ಜಾಗ್ರತೆ ಮಾಡುತ್ತೇವೆ.

ಶ್ರೀ ಎಚ್.ಎಂ. ಚನ್ನಬಸಪ್ಪ :- ದೇಶಕ್ಕೆ ಬೇಕಾದುದನ್ನು ಮಾಡುತ್ತೀರೋ ಅಥವಾ ಅವರು ಹೇಳಿದಂತೆ ಮಾಡುತ್ತೀರೋ ?

ಶ್ರೀ ಕಡಿದಾಳ್ ಮಂಜಪ್ಪ :- ದೇಶಕ್ಕೆ ಬೇಕಾದ್ದನ್ನು ಮಾಡುತ್ತೇವೆ.

ಶ್ರೀ ಎಸ್. ಗೋಪಾಲಗೌಡ :- ರೈತರ ಹಿತದೃಷ್ಟಿ ತಾನು ಗೇಣಿ ಪಡೆದು, ಉಳುಮೆ ಮಾಡತಕ್ಕಂಥ ಜಮೀನಿನಿಂದ ತನ್ನನ್ನು ಜಮೀನುದಾರರು ವಿನಾಕಾರಣ ಹೊರಗೆ ಹಾಕುವುದಿಲ್ಲ ಎನ್ನುವ ಒಂದು ಭರವಸೆ ಬೇಕು. protected tenants ಅಂದರೆ ಒಬ್ಬನು ಜಮೀನು ಉಳುಮೆ ಮಾಡುತ್ತಾ ಇದ್ದರೆ ಆತನ ಹಕ್ಕು ಕಾಪಾಡಲ್ಪಟ್ಟಿದೆ, ರಕ್ಷಿಸಲ್ಪಟ್ಟಿದೆ ಎನ್ನುವ ಒಂದು ಆಶ್ವಾಸನೆ ಅವನಿಗೆ ಬೇಕು. ಎರಡನೆಯದಾಗಿ ಅವನು ಉಳುಮೆ ಮಾಡಿ ಬೆಳೆದಿದ್ದರಲ್ಲಿ ತನ್ನ ಜೀವನಕ್ಕೆ ಸಾಕಾಗುವಷ್ಟು ಮಾತ್ರ ಉಳಿಯುತ್ತದೆ ಎನ್ನುವ ಒಂದು ಭರವಸೆ ಕೂಡ ಪಿಕ್ಮಿದಾರನಿಗೆ ಇರಬೇಕು. ಹಾಗೆ ಮಾಡಿದರೆ ಗೇಣಿಯನ್ನು ಇಷ್ಟು ಪ್ರಮಾಣದಲ್ಲಿ ತಾನು ಜಮೀನುದಾರನಿಗೆ ಕೊಡಬೇಕೆನ್ನುವ ಭರವಸೆಯೂ ಕೂಡ ಉಂಟಾಗುತ್ತದೆ. ಈ ಮಸೂದೆಯು ಹಿಂದೆ ಈ ಸಭೆಯಲ್ಲಿ ತರಲ್ಪಟ್ಟಾಗ ಶ್ರೀಮಾನ್ ಚನ್ನಬಸಪ್ಪನವರೂ ಸಹ ಇಲ್ಲಿಯೇ ಇದ್ದರು ಎಂದು ಹೇಳುತ್ತೇನೆ. ಅವರ ವಾದದ ಪ್ರಕಾರ "ಬೆಳೆ ಅಥವಾ ಬೆಳೆಗಳು" ಎಂದು ಇದರಲ್ಲಿ ಸೇರಿಸಲ್ಪಟ್ಟಿತ್ತು. ಅವರು ಅದರ ಬಗ್ಗೆ ಬಹಳ ಒತ್ತಾಯ ಮಾಡಿದ್ದಾರೆ. ಹೊಲದಲ್ಲಿ ಬೆಳೆದ ಬೆಳೆಗಳಲ್ಲಿ ಅರ್ದ ಬರುವುದು ನ್ಯಾಯ. ಮೆಣಸಿನಕಾಯಿ ಅಥವಾ ಇನ್ನೂ ಯಾವುದೇ ಬೆಳೆಯನ್ನು ಬೆಳೆಯಲ್ಲಿ ಅದರಲ್ಲಿ ಅರ್ಧ ಬೆಳೆಯು ಜಮೀನ್‌ದಾರನಿಗೆ ಬರಬೇಕು ಎಂಬುದನ್ನು ಈ ಸಭೆಯ ಮುಂದಿಟ್ಟು, ಈ ಮಸೂದೆ ಆಗುವ ಕಾಲದಲ್ಲಿ "ಬೆಳೆ ಅಥವಾ ಬೆಳೆಗಳು" ಎಂಬ ಶಬ್ದಗಳನ್ನು ಆ ಕಾನೂನಿನಲ್ಲಿ ಸೇರಿಸಿದರು. ಅದು ತಪ್ಪೆಂದು ನಾನು ಹೇಳುವುದಿಲ್ಲ. ಏಕೆಂದರೆ ನಮ್ಮ ದೇಶದಲ್ಲಿ ಎರಡು ತರಹ ಪ್ರಾಂತ್ಯಗಳಿವೆ;



ಒಂದು ಮಲೆನಾಡು, ಇನ್ನೊಂದು ಬಯಲುಸೀಮೆ. ಸ್ಥೂಲವಾಗಿ ಈ ರೀತಿ ಎರಡು ಭಾಗ ಮಾಡಿದ್ದೇವೆ. ಇದಲ್ಲದೆ, ಯಾವಾಗ್ಯೂ ಕ್ಷಾಮಕ್ಕೆ ಈಡಾಗುವ ಪ್ರದೇಶ, ಇರಿಗೇಷನ್ ಮುಖಾಂತರ ಹೆಚ್ಚು ವ್ಯವಸಾಯ ನಡೆಸುವ ಪ್ರದೇಶ ಎಂದೂ ಬೇರೆ ಬೇರೆ ರೀತಿಯಲ್ಲಿ ವಿಂಗಡಿಸಬಹುದು. ಆದರೆ ಸಾಮಾನ್ಯವಾಗಿ ಬರೀ ಬತ್ತವನ್ನೇ ಹೆಚ್ಚಾಗಿ, ಜೊತೆಗೆ ಅಲ್ಪಸ್ವಲ್ಪ ಅಡಿಕೆ, ಕಬ್ಬು ಬೆಳೆಯತಕ್ಕ ಪ್ರಾಂತ್ಯವೆಂದರೆ ಅದು ಮಲೆನಾಡು. ಬೇರೆ ಕಡೆಗಳಲ್ಲಿ ಗೋಧಿ, ಜೋಳ, ಕಬ್ಬು ಮತ್ತು ಇನ್ನೂ ಅನೇಕ ಕಾಳು ಕಡ್ಡಿಗಳನ್ನೆಲ್ಲಾ ಬೆಳೆಯುತ್ತಾರೆ. ಹೀಗಿರುವಾಗ ಈ ಆ್ಯಕ್ಟಿನಲ್ಲಿ ಹೇರಿರುವುದನ್ನು ನೋಡಿದರೆ, ಈ ಪ್ರದೇಶದಲ್ಲಿ ಪಿಕ್ಮಿಯಾದವರು ಬೆಳೆದರೆ ಬತ್ತ ಬೆಳೆಯಬೇಕು, ಏಕೆಂದರೆ ಆವಾಗಲೇ ಜಮೀನ್ದಾರನಿಗೆ ಗೇಣಿ ಕೊಡಬಹುದು, ಬಾಕಿ ಬೆಳೆ ಬೆಳೆದಾಗ ಏನೂ ಜಮೀನ್ದಾರನಿಗೆ ಸಲ್ಲಬಾರದು ಎಂದು ಹೇಳಿದೆ. ಇದನ್ನು ನಾನು ಒಪ್ಪುವುದಿಲ್ಲ. ಶ್ರೀಮಾನ್ ಚನ್ನಬಸಪ್ಪನವರು crop or crops ಎಂದು ಇರಬೇಕೆಂದು ವಾದಿಸಿ ಎಲ್ಲದರಲ್ಲೂ ಸಮ ಅರ್ಥಕೊಡುವಂತಿರಬೇಕೆಂದು ವಾದ ಮಾಡಿದ್ದಾರೆ. ಒಂದು ದೃಷ್ಟಿಯಿಂದ ಅದೂ ಸಮಂಜಸವೇ. ಮಲೆನಾಡಿಗೆ ಈ ಕಾನೂನು ಅನ್ವಯಿಸಿತು ಎಂದು ಹೇಳಿದಾಗ ನಾವು ಬಹಳ ಕಳವಳಗೊಂಡಿದ್ದೇವೆ. ಏಕೆಂದರೆ, ನಮ್ಮಲ್ಲಿ ಈಗಲೂ ಕೂಡ ಕೆಲವು ಜಮೀನ್ದಾರರಿದ್ದಾರೆ ; ಅವರು ಬತ್ತದ ಫಸಲಿನ ಜೊತೆಯಲ್ಲಿ ಹುಲ್ಲನ್ನೂ ಕೊಡಬೇಕೆಂದು ವಾದ ಮಾಡುತ್ತಾರೆ.

ಒಬ್ಬ ಸದಸ್ಯರು :- ವಾದ ಅಂದರೆ ಹಾಗೆಯೇ.

ಶ್ರೀ ಎಸ್. ಗೋಪಾಲಗೌಡ :- ಗೇಣಿಯಲ್ಲೂ ಅದೇ ರೀತಿ ಮಾಡುವವರಿದ್ದಾರೆ. ಆದರೆ ನಮ್ಮಲ್ಲಿ ಸಾಮಾನ್ಯವಾಗಿ ಗೇಣಿ ಮಾಡುವವರು ಹುಲ್ಲಗಳಲ್ಲಿ ಅರ್ಧಭಾಗ ಬರಬೇಕಿದ್ದುದ್ದನ್ನು ಯಾವ ರೀತಿ ತಿದ್ದುಪಡಿ ಮಾಡಿದೆಯೆಂದರೆ ಮೂಲ ಆ್ಯಕ್ಟಿನ ಆರನೆಯ ಪ್ರಕರಣದಲ್ಲಿ ಬೆಳೆ ಅಥವಾ ಬೆಳೆಗಳು ಎಂದಿರುವ ಪದಕ್ಕೆ ಬದಲಾಗಿ ಮುಖ್ಯವಾದ ಫಸಲು ಎಂದು ಸೇರಿಸತಕ್ಕುದು ಎಂದು ಹೇಳಿದೆ. ರೈತರ ಹಿತದೃಷ್ಟಿಯಿಂದ ಇದು ಅನುಕೂಲವಾಗಿದೆ. ಆದರೆ, ಇದೇ ಸಂದರ್ಭದಲ್ಲಿ ಎಷ್ಟು ಕೊಡಬೇಕು ಎಂಬುದನ್ನು ಸರ್ಕಾರದವರು ತಾವೇ ಗೊತ್ತು ಮಾಡುವುದಾಗಿ ಹೇಳುತ್ತಾರೆ. ರೈತರಿಗೆ ಮೊದಲು ಮುಖ್ಯವಾಗಿ ಕೊಡಬೇಕಾದ್ದು.

ಎರಡನೆಯದಾಗಿ ತನಗೆ ಮತ್ತು ಹೆಂಡತಿ ಮಕ್ಕಳಿಗೆ ಜೀವನಕ್ಕೆ ಸಾಕಾದಷ್ಟು ದವಸ ಉಳಿಯುತ್ತಿದೆ ಎಂಬ ಭರವಸೆ ಕೊಡಬೇಕು. ಈ ಭರವಸೆಯನ್ನು ಈಗ ತಾವು ರೈತನಿಗೆ ಕೊಡುತ್ತಿಲ್ಲ. ಜಮೀನ್ದಾರನಿಗೆ ಎಷ್ಟು ಭಾಗ ಸಿಕ್ಕಬೇಕು, ಅದು 40 ನೆಯ ಅಂಶವೇ, 50 ನೆಯ ಅಂಶವೇ, 30 ನೆಯ ಅಂಶವೇ, ಎಷ್ಟು, ಎಂಬುದು ಈಗಲೇ ನಿರ್ಧಾರವಾಗಬೇಕು. ಅದನ್ನು ಸರ್ಕಾರದವರು ತಾವೇ ಮಾಡುತ್ತೇವೆ ಎಂದು ಹೇಳುವ ವಾದವನ್ನು ನಾನು ಒಪ್ಪುವುದಿಲ್ಲ. ಸರ್ಕಾರದವರು ಶೇಕಡಾ ಎಂಟು ಭಾಗದಷ್ಟು ರೈತರ ಹಿತರಕ್ಷಣೆ ಮಾಡುವುದಕ್ಕೆ ಹೊರಟಿದ್ದಾರೆ ಎಂಬುದನ್ನು ಇಲ್ಲೇ ಸ್ಪಷ್ಟಪಡಿಸಬೇಕು. ಶ್ರೀಮಾನ್ ಮಂಜಪ್ಪನವರು

ಮಲೆನಾಡಿನ ಕಡೆ ಪ್ರವಾಸ ಮಾಡಬೇಕೆಂದು ಬಂದಾಗಲೆಲ್ಲಾ ನಾನು 1/3 ಭಾಗ ಗೇಣಿ ಎಂದು ಗೊತ್ತು ಮಾಡಿದ್ದೇನೆ ಎಂದು ಹೇಳಿಕೊಂಡು ಓಡಾಡುವುದು. ಅಲ್ಲಿ ಮಾತ್ರ ವಾಸ್ತವವಾಗಿ ಬೆಳೆದದ್ದರಲ್ಲಿ ಶೇಕಡಾ 60, ಶೇಕಡಾ 70 ರವರೆಗೂ ತೆಗೆದುಕೊಳ್ಳುವವರೂ ಇದ್ದಾರೆ.

Sri. Kadidal Manjappa :- On a point of clarfication, Sir. Under Section 6, the Government have a right to fix the lower maximum in the case of cetain areas. Accordingly in some parts of Maland, one-third is being prescribed as upper limit. That is the notification issued nearly 1 1/2 years ago.

Mr. Speaker :- You may simply explain the provisions of the law.

Sri. S. Gopala gowda :- Yes, that is what I am doing, sir.

Mr. Speaker - Governmetn have enforced the Weights and Measures Act throughtout the State.

Sri. Kadidal Manjappa :- Yes, that has been enforced, Sir.

ಶ್ರೀ ಎಸ್. ಗೋಪಾಲಗೌಡ :- ಆ ನೋಟಿಫಿಕೇಷನ್ ಆಧಾರದ ಮೇಲೆಯೇ ಕಂದಾಯದ ಮಂತ್ರಿಗಳು ಆ ರೀತಿ ಹೇಳುತ್ತಿದ್ದಾರೆ. ಆದರೆ ನಾನು ಹೇಳುತ್ತಿರುವುದು, ತಾವು ಈ ರೀತಿ ಹೆಚ್ಚು-ಕಡಿಮೆ ಮಾಡತಕ್ಕ ಅಧಿಕಾರವನ್ನು ಇಟ್ಟುಕೊಳ್ಳುವುದಕ್ಕೆ ಬದಲಾಗಿ ಕಾನೂನಿನಲ್ಲೇ ಸ್ಪಷ್ಟಪಡಿಸಿ. ಇದು ಬಹಳ ಮುಖ್ಯ, ಏಕೆಂದರೆ, ರೂಲ್ಸಿನಲ್ಲಿ ಈ ರೀತಿ ಹೆಚ್ಚು-ಕಡಿಮೆ ಮಾಡುವ ಅದಿಕಾರ ಇಟ್ಟುಕೊಳ್ಳುವುದರಿಂದ.

ಶ್ರೀ ಕಡಿದಾಲ್ ಮಂಜಪ್ಪ :- ಹೆಚ್ಚು ಮಾಡುವುದಕ್ಕೆ ಅಧಿಕಾರವಿಲ್ಲ, ಮಾಡುವುದೂ ಇಲ್ಲ.

ಶ್ರೀ ಎಸ್. ಗೋಪಾಲಗೌಡ :- ನಾನೇ ಹೇಳುವಂತೆ ಈ ಟೆನೆನ್ಸಿ ಕಾನೂನು ಕೋರ್ಟಿನ ಮುಂದೆ ಹೋಗಬಹುದು. ಕಾನೂನಿದ್ದರೆ ಎಲ್ಲರಿಗೂ ಗೊತ್ತಿರುತ್ತದೆ, ಸುಲಭವಾಗಿ ಕೋರ್ಟಿನ ಗಮನಕ್ಕೆ ತರಬಹುದು. ಅದಿಲ್ಲದೆ ಆ ಪ್ರದೇಶಕ್ಕೆ ಅನ್ವಯಿಸುವಂತೆ ಒಂದು ಸರ್ಕ್ಯುಲರ್ ಇದೆಯೆಂದರೆ ಅದು ಎಲ್ಲರಿಗೂ ಗೊತ್ತಿರಲಾರದು. ಈ ದೃಷ್ಟಿಯಿಂದ ಇದು



ಬಹಳ ಮುಖ್ಯ. ಕಾನೂನಿನಲ್ಲೇ ನಮೂದು ಮಾಡಿ ರೈತರ ವಿಷಯದಲ್ಲಿ ಎಷ್ಟು ಅಂಶ ಮುಂದೆ ಹೋಗುವುದಕ್ಕೆ ಸಾಧ್ಯವೋ ಅಷ್ಟು ಅಂಶ ಮುಂದೆ ಹೋಗಿ ಮಾನ್ಯ ಕಂದಾಯ ಮಂತ್ರಿಗಳು 1/3 ಭಾಗ ಎಂದು ಗೊತ್ತು ಮಾಡಿದ್ದೇವೆ. 1/4 ಭಾಗ ಎಂದು ಮಾಡುತ್ತೇವೆಂದು ಹೇಳುತ್ತಿದ್ದಾರೆ. ಮಾಡುವುದಿದ್ದರೆ ಮಲೆನಾಡಿಗೆ 1/6 ಭಾಗ ಎಂದು ಮಾಡಿ. ಬಯಲು ಸೀಮೆಗೆ 1/5 ಭಾಗ ಎಂದು ಮಾಡಿ. ಮುಂಬೈ ಪ್ರಾಂತ್ಯದಲ್ಲಿ 1/6 ಭಾಗವಿದೆ. ಇಲ್ಲಿಯೂ ಶಿವಪ್ಪನಾಯಕನ ಕಾಲದಲ್ಲಿ 1/8 ಭಾಗ ಎಂದು ಮಾತ್ರ ಇದೆ. ಬರೀ ಕಂದಾಯಕ್ಕಾಗಿ ಕೊಡುವ ಕಾಲವೂ ಇತ್ತು. ಹಿಂದಿನ ಚರಿತ್ರೆಯ ವಿಷಯವನ್ನು ಈಗ ಹೇಳುತ್ತಾ ಹೊದರೆ ಅಷ್ಟೊಂದು ಪ್ರಯೋಜನವಾಗಲಾರದು. ಮುಖ್ಯವಾಗಿ ಆಯಾ ಪ್ರದೇಶದ ಪರಿಸ್ಥಿತಿಯನ್ನು ನೋಡಿಯಾದರೂ ಗೊತ್ತುಮಾಡಿ. ನಾನಾದರೋ ಸಾಗರದಿಂದ ಬಂದವನಾಗಿ ಅಲ್ಲಿನ ಪರಿಸ್ಥಿತಿಯನ್ನು ಹೇಳಬಲ್ಲೆ. ಸಾಗರದ ಪಕ್ಕದಲ್ಲಿರುವ ಸಿದ್ದಾಪುರದಲ್ಲಿ 1/6 ಭಾಗವಿದೆ. ಪ್ರತಿದಿನ ಸಂತೆಗೆ ಹೋದಾಗ ಬಂದಾಗ ಅಲ್ಲಿನ ರೈತರೂ ಇಲ್ಲಿನ ರೈತರೂ ಮಾತನಾಡಿಕೊಳ್ಳುತ್ತಿರುತ್ತಾರೆ. ಇದು ನಮ್ಮ ದೇಶದ ಆ ಪ್ರಾಂತ್ಯದಲ್ಲಿ ಹೆಚ್ಚಿನ ಪ್ರಭಾವವನ್ನು ಉಂಟುಮಾಡಿದೆ. ಆದ್ದರಿಂದ ಅಲ್ಲಿನಂತೆ 1/6 ಭಾಗ ಮಾಡುವುದರಿಂದ ಜಮೀನ್ದಾರರಿಗೆ ಅಷ್ಟೇನೂ ತೊಂದರೆಯಾಗುವುದಿಲ್ಲ. ರೈತರಿಗೆ ತುಂಬ ಅನುಕೂಲ ಮಾಡಿದಂತಾಗುತ್ತದೆ. ಈ ಪ್ರಕರಣವೂ ಜಮೀನ್ದಾರನಿಗೆ ಸಲ್ಲುವುದೆಷ್ಟೆಂಬುದನ್ನು ನೋಡುವುದಾದರೆ, ಒಬ್ಬ ರೈತ 6 ಪಲ್ಲ ಬೆಳೆದರೆ ಒಂದು ಪಲ್ಲವನ್ನು ಜಮೀನ್ದಾರನಿಗೆ ಕೊಡುತ್ತಾನೆ. ಇವತ್ತಿನ ಧಾರಣೆಯ ಪ್ರಕಾರ 20 ರೂಪಾಯಿಗಳಾಯಿತು. ಅಲ್ಲಿಗೂ ಸರ್ಕಾರಿ ಕಂದಾಯಕ್ಕೆ ಎರಡರಷ್ಟು, ಮೂರರಷ್ಟು ಹೆಚ್ಚೇ ಆದಂತಾಯಿತು. ಒಟ್ಟಿನಲ್ಲಿ ಉದ್ದೇಶವೇನೆಂದರೆ, ಕ್ರಮೇಣ absentee landlordship ಹೋಗಬೇಕು. ಈಗ ಸಾಮಾನ್ಯವಾಗಿ ದೊಡ್ಡ ಮನುಷ್ಯರು ಭೂಮಿಯನ್ನು ಏಕೆ ಕೊಳ್ಳುತ್ತಾರೆಂದರೆ, ಗೇಣಿ ಬರುತ್ತದೆ ಎಂಬ ನಿರೀಕ್ಷೆಯಿಂದ ಅವರು ಕೊಂಡುಕೊಳ್ಳಬೇಕಾದರೂ ಮೊದಲು ಆ ಜಮೀನಿನಲ್ಲಿ ಗೇಣಿ ಎಷ್ಟು ಬರುತ್ತದೆ ಎಂದು ಕೇಳುತ್ತಾರೆ, ಆದರ ಮೇಲೆ ಬಡ್ಡಿ ಲೆಕ್ಕ ಹಾಕುತ್ತಾರೆ. ಅದಕ್ಕನುಸಾರವಾಗಿ ಐದು ಸಾವಿರವೋ ಹತ್ತು ಸಾವಿರವೋ ಕೊಡುವುದಕ್ಕೆ ಒಪ್ಪಿಕೊಳ್ಳುತ್ತಾರೆ. ಹೀಗಾಗಿ ತಾಲ್ಲೂಕೆಲ್ಲವನ್ನೂ ಕೆಲವೇ ಜನ ದೊಡ್ಡ ಮನುಷ್ಯರು ಬರೆಸಿಟ್ಟುಕೊಂಡಿದ್ದಾರೆ. ಈ ಜನ ಇತ್ತೀಚೆಗೆ, ಬತ್ತ 20 ರೂಪಾಯಿ, ಅಡಿಕೆ 40 ರೂಪಾಯಿಗಳಾದ ಮೇಲೆ ಬಹಳ ದುಡ್ಡು ಸಂಪಾದನೆ ಮಾಡಿಕೊಂಡಿದ್ದಾರೆ. ಇತ್ತಲಾಗಿ ರೈತರಿಗೆ ಎಷ್ಟು ಕಷ್ಟದೆಶೆಯುಂಟಾಯಿತೆಂಬುದನ್ನು ಹೇಳಬೇಕಾಗಿಲ್ಲ. ಆತನಿಗೆ ಇಂದು ಎಷ್ಟು ದುಡಿದರೂ ಪ್ರತಿವರ್ಷವೂ ಕೊನೆಯ ಎರಡು ತಿಂಗಳ ಊಟಕ್ಕೆ ಕೊರತೆ ಬೀಳುತ್ತದೆ. ಗೌರಿ ಹಬ್ಬದ ಹೊತ್ತಿಗೆ ಅನೇಕರಲ್ಲಿ ಬತ್ತ ಮುಗಿದು ಹೋಗಿರುತ್ತದೆ. ಅಲ್ಲಿಂದ ಮುಂದೆ ಆತ ಕೊಂಡುಕೊಳ್ಳಬೇಕು. ಆಗ್ಗೆ ಮತ್ತೆ ಅದೇ ಜಮೀನ್ದಾರರ ಹತ್ತಿರ ಹೋಗಿ ಹುಲಿ (ಸಾಲ) ತರಬೇಕು. ಹುಲಿ ಎಂಬುದರ ಅರ್ಥವೇನೆಂದರೆ, ಜಮೀನ್ದಾರನು ಆ ಕಾಲದಲ್ಲಿ ಕೊಟ್ಟ ಒಂದು ಖಂಡಗ ದವಸಕ್ಕೆ ಮುಂದೆ ಸುಗ್ಗಿಯಲ್ಲಿ 1 1/2 ಖಂಡಗ ವಾಪಸ್ಸು ಕೊಡುವುದು. ಈ ಪದ್ದತಿಗೆ ಅವನೇಕೆ ಒಪ್ಪಿಕೊಳ್ಳುತ್ತಾನೆಂದರೆ, ನಾನಾಗಲೇ ಹೇಳಿದಹಾಗೆ, ಅವನಲ್ಲಿ ದುಡ್ಡಿಲ್ಲ. ಅದೇ ಜಮೀನ್ದಾರನ ಹತ್ತಿರ ಹೋಗಿ ತರುವುದು ಮತ್ತೆ ವಾಪಸ್ಸು

ಕೊಡುವುದು, ಮತ್ತೆ ತರುವುದು- ಇದೇ ಗೇಣಿದಾರನ ಬದುಕು. ಆ ಸಮಯಕ್ಕೆ ಸರಿಯಾಗಿ ಜಮೀನ್ದಾರರ ಮನೆಯಲ್ಲಿನ ಕೊಳಗಗಳೂ ದೊಡ್ಡದಾಗಿ ಬಿಡುತ್ತವೆ. ಮಂತ್ರಿಗಳೇನೂ ಇಲ್ಲಿ ಹೇಳುತ್ತಾರೆ, ಇಲ್ಲ ಎಂದರೆ 100 ಸೇರು, ಮಣಕ್ಕೆ 40 ಸೇರು ಎಂದು ಗೊತ್ತು ಮಾಡಿದೆ ಎಂದು. ಆದರೆ ಹಳ್ಳಿಗಳಲ್ಲಿರುವುದು ಕ್ರಮವಾಗಿ ಮೊದಲಿನ ಹಿತ್ತಾಳೆ ಅಥವಾ ತಾಮ್ರದ ಕೊಳಗಗಳೇ. ಕೊಳಗವೆಂಬುದು 2 1/2 ಸೇರು ಇರಬೇಕಾದ್ದು, ಪೂರಾ 2 1/4 ಸೇರು - ಮೂರು ಸೇರಿನವರೆಗೂ ಆಗಿಬಿಡುತ್ತದೆ. ಅಂಥ ಕೊಳಗದಲ್ಲಿ ಪಲ್ಲಾ ಅಳೆಸಿಬಿಡುತ್ತಾರೆ. ಅಲ್ಲಿಗೆ 7 ಖಂಡಗ ಅಳೆದರೆ, 8 ಖಂಡಗ ಆಗುತ್ತದೆ.

Sri. Kadidal Manjappa :- I would like to draw the attention of the Hon'ble Member to Section 8 of the act that is now in force.

Sri. S. Gopala Gowda :- "8. Notwithstanding any agreement, usage, decree or order of a court or any law, the rent payable in kind or as a crop share by a tenant for the lease of any land, shall be specified, in the case of any commodity usually calculated -

(i) by measure, in terms of the sixty standard mandred seers, or

(ii) by weight, in terms of the sixty standard manud of nine hundred and tolas ;

and no landlord shall recover or redeive rent calculated in any manner other than that specified in this section"

ಶ್ರೀ ಎಸ್. ಗೋಪಾಲಗೌಡ :- ಯಾರು ಜೈಲು ಸೇರಿಗಿಂತ ದೊಡ್ಡ ಸೇರಿನಲ್ಲಿ ಳೆಸಬಾರದು, ಮಣಕ್ಕೆ 40 ಸೇರಿಗಿಂತ ಹೆಚ್ಚಿಗೆ ತೆಗೆದುಕೊಳ್ಳಕೂಡದು ಎಂದು ಹೇಳಿದ್ದಾರೆ. ಆದರೆ ಮಂತ್ರಿಗಳು ಹೇಳಿದ ಆ ಆಕ್ಟನ 8 ನೆಯ ಸೆಕ್ಷನ್ ಜಾರಿಯಲ್ಲಿಲ್ಲ, ಕಾರ್ಯತ: ಅನುಸರಿಸಲ್ಪಟ್ಟಿಲ್ಲ. ಈ ವಿಷಯವನ್ನು ನಾನಾನೂ ಕಂದಾಯದ ಮಂತ್ರಿಗಳಿಗೆ ಹೊಸದಾಗಿ ಹೇಳಬೇಕಾಗಿಲ್ಲ. ಅದೇ ಹಳೆಯ ಕೊಳಗ, ಅದೇ ಹಳೆಯ ಖಂಡುಗ ಈಗಲೂ ಇದೆ. ನಮ್ಮ ಮಲೆನಾಡಿನ ಕಡೆ ಇನ್ನೊಂದು ವಿಚಿತ್ರವೆಂದರೆ, ಒಂದು ಎಕರೆಗೆ ಎಷ್ಟು ಗುಂಟೆ



ಇರಬೇಕೋ ಅಷ್ಟೇ ಗುಂಟೆಗಳು ಕೂಡ ಅನೇಕ ಜಮೀನುಗಳ ವಿಷಯದಲ್ಲಿ ನಿಗದಿಯಾಗಿಲ್ಲ. ಈ ಪ್ರಕಾರವೆಲ್ಲಾ ಮಾಡಿ. ಒಂದು ಎಕರೆಗೆ ಮೂರು ಖಂಡಗ ಮಾಡಿ ಈ ಗೇಣಿ ಏಷ್ಟಿರಬೇಕೆಂಬ ಅಂಶವನ್ನು ಈ ಕಾನೂನಿನಲ್ಲಿ ತಿದ್ದುಪಡಿ ಮಾಡಬೇಕೆಂಬುದನ್ನು ಒತ್ತಾಯಪೂರ್ವಕವಾಗಿ ನಾನು ಹೇಳಬಯಸುತ್ತೇನೆ.

ಇನ್ನೊಂದು ಕಾರಣವೇನೆಂದರೆ :- ಈಗಿರುವ ಕಾನೂನಿನಲ್ಲಿ ಗೇಣಿ ಅರ್ಧಕ್ಕೆ ಮೀರದಂತೆ ಎಂದಿದೆ. ಆದರೆ ಈ ಆರನೆಯ ಒಂದು ಅಂಶಕ್ಕೆ ಮೀರದಂತೆ ಎಂದು ಬರೆಯುವುದು ಸೂಕ್ತವೆಂದು ನಾನು ಭಾವಿಸುತ್ತೇನೆ.

ಈ 8 ನೆಯ ಕ್ಲಾಜಿನಲ್ಲಿ ಪಲ್ಲ-ಮಣ ಇತ್ಯಾದಿಗಳಿಂದ ಗೇಣಿಯನ್ನು ನಿಗದಿ ಮಾಡಿದ್ದರೂ ಕೂಡ ಈಗ ಹಾಲಿ ಅಭ್ಯಾಸದಲ್ಲಿರುವ ಪ್ರಕಾರ ಈ ನಿಯಮಾವಳಿಯನ್ನೂ ಜಮೀನ್ದಾರರು ಸರಿಯಾಗಿ ಅನುಸರಿಸುವುದಿಲ್ಲ. ಇನ್ನೂ ಒಂದು ಏನೆಂದರೆ ಕರಾರನ್ನು ಬರೆಸಿಕೊಳ್ಳುವಾಗ ಆ ಕರಾರಿನಲ್ಲಿ 10 ಸೇರಿನ ಮಣ, 11 ಸೇರಿನ ಮಣ ಎಂದು ಬರೆಸಿಬಿಟ್ಟಿದ್ದಾರೆ. ಹೀಗೆ ಬರೆಸಿಕೊಂಡುಬಿಟ್ಟಿರುವುದು ಕಾಂಟ್ರಾಕ್ಟ್ ಆಕ್ಟ್ ಪ್ರಕಾರ ಇರುವುದರಿಂದ ಇದನ್ನು ಯಾವ ರೀತಿಯಲ್ಲಿ ಕಡಿಮೆ ಮಾಡುವುದಕ್ಕೂ ಸಾಧ್ಯವಿಲ್ಲ. ಈಗ ಅಂತೂ ಅವರೆಲ್ಲಾ, ನಮ್ಮ ಮಲೆನಾಡಿನಲ್ಲಿ ಕಾನೂನಿನಲ್ಲಿರುವುದನ್ನು ಜಾರಿಗೆ ಇರದೆ, ಇದೇ ರೀತಿ ಅಳೆಸುತ್ತಿದ್ದಾರೆ. ಆ ಕರಾರು ಬರೆಯುವಾಗ 11 ಸೇರಿನ 10 ಮಣ ಎಂದು ಬರೆದಿರುವುದರಿಂದ ಪ್ರತಿಯೊಂದು ಮಣಕ್ಕೂ ಒಂದೊಂದು ಸೇರಿನಂತೆ 10 ಮಣಗಳ ಗೇಣಿಯು ಜಮೀನ್ದಾರನಿಗೆ ಸಂದಾಯವಾದ ಮೇಲೂ ಆತನು ಇನ್ನೂ 10 ಸೇರು ಬಾಕಿ ಇರುತ್ತದೆಂದು ಲೆಕ್ಕದಲ್ಲಿ ಬರೆದಿಡುತ್ತಾನೆ. ನನಗೆ ಗೊತ್ತಾಗಿರುವ ಪ್ರಕಾರ ಈ ರೀತಿಯಾಗಿ ಅನೇಕರು ತಮ್ಮ ತಮ್ಮ ಲೆಕ್ಕದ ಪುಸ್ತಕಗಳಲ್ಲಿ ಇಷ್ಟಿಷ್ಟು ಬಾಕಿ ಇರುತ್ತದೆಂದು ಲೆಕ್ಕದಲಲಿ ಬರೆದಿಡುತ್ತಾರೆ, ಬರೆದುಕೊಂಡು ಹೊಗುತ್ತಿರುತ್ತಾರೆ ಬಾಕಿ ಯಾವ ಕಾನೂನಿನಲ್ಲಿ ಏನೇ ಹೇಳಿರಲಿ, ಕಂಟ್ರಾಕ್ಟ್ ಆಕ್ಟ್ ಪ್ರಕಾರ ಆ ಕರಾರುಗಳನ್ನು ಅವರು ಬರೆಸಿಟ್ಟುಕೊಳ್ಳುತ್ತಿರುವುದರಿಂದ ಅವರು ಅದೇ ರೀತಿ ತೆಗೆದುಕೊಳ್ಳುತ್ತಿದ್ದಾರೆ ಆದ ಕಾರಣ ಇದನ್ನೆಲ್ಲಾ ತಪ್ಪಿಸುವುದಕ್ಕೆ ಸರ್ಕಾರದವರು ಒಂದು ಸರಿಯಾದ ಕ್ರಮವನ್ನು ಕೂಡಲೇ ಕೈಗೊಳ್ಳಬೇಕಾಗಿದೆ.

ಇನ್ನು ಈ ಕಾನೂನಿನಲ್ಲಿ ಗೇಣಿ ಕೊಟ್ಟಿದ್ದಕ್ಕೆ ರಶೀದಿ ಪಡೆಯಬೇಕು ಎಂದು ಹೇಳಿದೆ. ಈ ಅಂಶ ಹಳೇ ಕಾನೂನಿನಲ್ಲೂ ಇತ್ತು. ಇದರ ಬಗ್ಗೆ ಕೂಡ ಆ ಜಮೀನ್ದಾರರು ಗೇಣಿದಾರರಿಗೆ ಬಹಳ ತೊಂದರೆ ಕೊಡುತ್ತಿದ್ದಾರೆ. ಆ ಮಲೆನಾಡಿನಲ್ಲಿ ಜಮೀನ್ದಾರರನ್ನು ಗೇಣಿದಾರ ಒಂದು ರಶೀದಿ ಕೇಳುವುದೇ ಒಂದು ದೊಡ್ಡ ಅಪರಾಧವಾಗಿದೆ. ರೈತ ಆತನ ಮನೆ ಬಾಗಿಲಿಗೆ ಹೋದ ಕೂಡಲೇ ಓಹೋ ಏನು ಆಗಲೇ ರಶೀದಿ ಕೇಳುವುದಕ್ಕೆ ಬಂದುಬಿಟ್ಟೆಯೋ? ನೀವು ಈತಕ್ಕೆ ಹೋಗು, ಎಂದು ಹೇಳಿ ಕಳುಹಿಸಿಬಿಡುತ್ತಾರೆ. ಆದರೆ ಇತ್ತ ಆ ರೈತ ಅನಕ್ಷರಸ್ಥನೂ ಮತ್ತು ಭಯ ಭಕ್ತಿಗಳಿಂದ ಕೂಡಿರತಕ್ಕವನೂ ಆಗಿರುವುದರಿಂದ

ಜಮೀನ್ದಾರರುಗಳು ಹಾಗೆಯೇ ಮುಂದುವರಿಸಿಕೊಂಡು ಹೋಗುತ್ತಿದ್ದಾರೆ. ಇವರು ಹೀಗೆ ಹಿಂದಕ್ಕೆ ಬೀಳುತ್ತಾ ಬಂದಿದ್ದಾರೆ. ಈ ರೀತಿಯಾಗಿ ಅನೇಕ ರೈತರಲ್ಲಿ ಈ ದಿವಸ ಆ ರಶೀದಿಗಳೇ ಇಲ್ಲದಿರುವುದರಿಂದ ಜಮೀನ್ದಾರನು ರೈತನಿಂದ ಜಮೀನನ್ನು ಬಿಡಿಸಿಕೊಳ್ಳಬೇಕೆಂದು ಇಷ್ಟಪಟ್ಟರೆ ಅಥವಾ, ಮನಸ್ಸಿಗೆ ಬಂದರೆ ಆ ಕೂಡಲೇ ಆತ ಈ ರೈತನ ಮೇಲೆ ಮೂರು ವರ್ಷದ ಬಾಕಿ ನಿಂತಿದೆ ಎಂದು ದಾವ ಹಾಕುತ್ತಾನೆ. ಈ ರೀತಿಯಾಗಿ ಈ ದಿವಸ ನಮ್ಮಲ್ಲೆಲ್ಲಾ ನಡೆಯುತ್ತಿದೆ. ಕೋರ್ಟಿಗೆ ಜನರು ತಿರುಗುತ್ತಿದ್ದಾರೆ. ಆದುದರಿಂದ ಪ್ರತಿ ವರ್ಷವೂ ಗೇಣಿ ವಸೂಲಿ ಕ್ರಮ ಮುಗಿದ ಮೇಲೆ ಜಮೀನ್ದಾರನಾಗಿರತಕ್ಕವನು ಯಾವ ಯಾವ ರೈತನಿಂದ ಎಷ್ಟೆಷ್ಟು ಬಾಕಿ ನಿಂತಿದೆ ಎಂದು ಅವರು ಬರೆದಿಟ್ಟುಕೊಂಡಿರುತ್ತಾರೋ ಅದರ ಬಗ್ಗೆ ಒಂದು ಡಿಕ್ಲರೇಷನ್‌ನ್ನನ್ನು ಕೊಡಬೇಕೆಂಬುದಾಗಿ ತಾವು ಈ ಒಂದು ವಿಧಿಯನ್ನು ಈ ಕಾನೂನಿನಲ್ಲಿ ಸೇರಿಸಬೇಕೆಂದು ಹೇಳುತ್ತೇನೆ.

ಇನ್ನು ಈ ಗೇಣಿ ಕೊಡತಕ್ಕ ವಿಚಾರದಲ್ಲಿ ಈಗ ಹಾಲಿ ಇರತಕ್ಕಂಥ ರೀತಿಯಲ್ಲೇ ಇನ್ನೂ ಕೊಡುತ್ತಿದ್ದಾರೆ. ಮಲೆನಾಡಿನಲ್ಲಿ ಈ ಗೇಣಿಯು ಆ ಜಮೀನಿನ ಫಸಲಿನಲ್ಲಿ ಅರ್ಧಕ್ಕಿಂತ ಕಡಮೆಯಿರಬೇಕೆಂದೂ, ಬಯಲು ಸೀಮೆಯಲ್ಲಿ, ಅರ್ಧ ಭಾಗವಿರಬೇಕೆಂದೂ ನಿಯಮವಿದೆ. ಆದರೆ ಈ ನಿಯಮಾವಳಿಯಿಂದ ಗೇಣಿದಾರರಿಗೇನೂ ಅಷ್ಟಾಗಿ ಪ್ರಯೋಜನವಾಗಿಲ್ಲ. ತಾವು ಈ ಗೇಣಿಯ ಮೊತ್ತವನ್ನು ಇನ್ನೂ ಕಡಿಮೆ ಮಾಡಬೇಕು. ಬೇರೆ ಪ್ರಾಂತಗಳಲ್ಲೆಲ್ಲಾ ಹಾಗೆ ಮಾಡಿದ್ದಾರೆ. ತಾವು ಸಹ ಆ ರೀತಿಯಾಗಿ ಇಲ್ಲಿ ಕಡಿಮೆ ಮಾಡಬೇಕಾಗಿದೆ. ತಮಗೆ ಸಾಧ್ಯವಿದ್ದರೆ ಮಲೆನಾಡಿಗೂ ಮತ್ತು ಬಯಲು ಸೀಮೆಗಳೆರಡಕ್ಕೂ ಒಂದೇ ರೀತಿಯಾಗಿ ಈ ಗೇಣಿಯನ್ನು ನಿರ್ಧಾರ ಮಾಡಿ, ಇಲ್ಲವಾದರೆ ಮಲೆನಾಡಿಗೆ ಆರನೆಯ ಒಂದು ಭಾಗವಿರಬೇಕೆಂದೂ ಬಯಲು ಸೀಮೆಗೆ ಐದನೆಯ ಒಂದು ಭಾಗವಿರಬೇಕೆಂದೂ ತಾವು ಬದಲಾವಣೆ ಮಾಡಬೇಕು. ಆದರೆ ಅರ್ಧಕ್ಕೆ ಮೀರದಂತೆ ಗೇಣಿ ಕೊಡಬೇಕೆಂದು ಹೇಳಿರತಕ್ಕುದ್ದು ಹಳೇ ಬಡ್ಡಿ ದರದ ಮೇಲೆ ಲೆಕ್ಕಗಳೆಲ್ಲಾ ನಿಂತಿರುವ ಹಾಗೆ ಆಗುತ್ತದೆ. ಇಂದು ನಮ್ಮ ದೇಶದಲ್ಲಿ ರೈತರ ಜೀವನ ಸುಗಮವಾಗಿ ನಡೆಯುವಂತೆ, ಅವರಿಗೆ ಅನುಕೂಲ ದೊರೆಯುವಂತೆ ಗೇಣಿ ನಿರ್ಧಾರವಾಗಿಲ್ಲ. ಹಾಗೆ ತಮಗೆ ಈ ರೈತರ ಹಿತರಕ್ಷಣೆ ಮಾಡಲೇಬೇಕೆಂಬ ಆಕಾಂಕ್ಷೆ ಇದ್ದ ಭಾಗದಲ್ಲಿ ತಾವು ಈ ಗೇಣಿಯನ್ನು ಕಮ್ಮಿ ಮಾಡುವುದು ಸೂಕ್ತ. ಆದರೆ ನನಗೆ ಗೊತ್ತಿರುವ ಹಾಗೆ ಹೈದರಾಬಾದಿನಲ್ಲಿ ಈ ಗೇಣಿಯ ಪ್ರಮಾಣ ಆ ಭೂಮಿ ಕಂದಾಯದ ಐದು ಭಾಗಕ್ಕೆ ಮೀರದಂತೆ ಇರಬೇಕೆಂದು ನಿರ್ಧರಿಸಲಾಗಿರುತ್ತದೆಯೆಂದು ಹೇಳಿದ್ದೇನೆ. ಅಲ್ಲಿ ಒಂದು ಜಮೀನಿನ ಕಂದಾಯ ಮೂರು ರೂಪಾಯಿಗಳಿದ್ದರೆ - ಅದರ ಐದರಷ್ಟು ಎಂದರೆ 15 ರೂಪಾಯಿಗಳಾಯಿತು - ಈ 15 ರೂಪಾಯಿಗಳಿಗೆ ಆ ಗೇಣಿ ಮೀರದಂತೆ ಇರಬೇಕೆಂದು ಅಲ್ಲಿ ಕಂದಾಯದ ಆಧಾರದ ಮೇಲೆ ನಿಗದಿಮಾಡಿದ್ದಾರೆ. ನಮ್ಮ ದೇಶದಲ್ಲಿಯೂ ಕೂಡ ಅದೇ ರೀತಿಯಾಗಿ ಕಂದಾಯದ ಆಧಾರ ಮೇಲೆ ನಿರ್ಧಾರ ಮಾಡಿ ಆ ಬಗ್ಗೆ ಗೇಣಿಯನ್ನು ಕಾಳಿನ ಅವಕಾಶವನ್ನು ಕಲ್ಪಿಸಿಕೊಟ್ಟ



ಹಾಗೆ ಆಗುತ್ತದೆ. ನಾನು ಈ ಗೇಣಿಯನ್ನು ಗೊತ್ತುಪಡಿಸುವ ಸಂದರ್ಭದಲ್ಲೇ ಸರ್ಕಾರದಿಂದ ನೋಟಿಫಿಕೇಷನ್ ಅಷ್ಟೇನೂ ರೈತರಿಗೆ ಸಹಕಾರಿಯಾಗುವುದಿಲ್ಲ ಎಂದು ತಿಳಿಸಿದ್ದೇನೆ. ಆದ್ದರಿಂದ ತಾವು ಈ ಮಸೂದೆಯಲ್ಲಿ ಆರನೆಯ ಒಂದು ಭಾಗದಷ್ಟು ಗೇಣಿ ಕೊಡಬೇಕೆಂಬ ಬಗ್ಗೆ ಒಂದು ತಿದ್ದುಪಡಿಯನ್ನು ಮಾಡಬೇಕೆಂದೂ ಆಗ ಇದರಿಂದ ಆ ರೈತರಿಗೆ ಸ್ವಲ್ಪ ಸಹಾಯ ಮಾಡಿದಂತೆ ಆಗುತ್ತದೆಂದೂ ನಾನು ಅಭಿಪ್ರಾಯ ಪಡುತ್ತೇನೆ.

ಆದರೆ ಈಗೇನು ಶ್ರೀಮಾನ್ ಭೀಮಪ್ಪನಾಯಕರೂ ಮತ್ತು ಶ್ರೀ ಚನ್ನಬಸಪ್ಪನವರೂ ಸಮಗ್ರ ರೈತಾಪಿ ಜನಗಳಿಗೆ ಅನುಕೂಲವಾಗುವ ಹಾಗೆ ಒಂದು ಜನರಲ್ ಬಿಲ್ಲನ್ನು ತಂದು ಈ ಗೇಣಿದಾರರಿಗಾಗಲಿ ಅಥವಾ ಆ ಜಮೀನ್ದಾರರಿಗಾಗಲಿ ಭೂಮಿಯ ಪರಮಾವಧಿ ಹಿಡುವಳಿ ಎಷ್ಟಿರಬೇಕೆಂಬುದನ್ನು ನಿರ್ಧಾರ ಮಾಡಬೇಕೆಂದು ಹೇಳಿದ್ದಾರೋ - ಅದೇ ಒಂದು ಬಿಲ್ಲನ್ನು ಪ್ರತ್ಯೇಕವಾಗಿ ಸರ್ಕಾರದವರು ಬಹಳ ಬೇಗ ತಂದು ಅದನ್ನು ಕಾನೂನು ಕಡತಕ್ಕೇರಿಸಬೇಕೆಂದು ನಾನು ಸಹ ಮಾನ್ಯ ಕಂದಾಯದ ಮಂತ್ರಿಗಳಲ್ಲಿ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಈಗ ಅವರು ವ್ಯಕ್ತಪಡಿಸಿರುವ ಪ್ರಕಾರ ಭೂ ಸುಧಾರಣೆ ಆಗಲೇ ಬೇಕಾಗಿದೆ. ಅದು ಆದ ಹೊರತು ನಾವು ಮತ್ತೆ ಯಾವ ಸುಧಾರಣೆಗಳನ್ನೂ ಮಾಡುವುದಕ್ಕಾಗುವುದಿಲ್ಲ. ಅದಕ್ಕಾಗಿಯೇ ಅವರು ಇದನ್ನು ಬಹಳವಾಗಿ ಒತ್ತಾಯಪಡಿಸುತ್ತಿದ್ದಾರೆ. ಮೈಸೂರು ಹೆಸರಿಗೆ ಮಾದರಿ ಸಂಸ್ಥಾನ. ಇಲ್ಲಿ ಕಾಂಗ್ರೆಸ್ ಸರ್ಕಾರ ಆಡಳಿತಕ್ಕೆ ಬಂದು ಎಂಟು ವರ್ಷಗಳ ಮೇಲಾಯಿತು. ಆದರೆ ಈಗ ಈ ಭೂ ಸುಧಾರಣೆಗಳ ಬಗ್ಗೆ ನಮ್ಮ ದೇಶದಲ್ಲಿ ಎಷ್ಟು ಪ್ರಗತಿ ಹೊಂದಿದೆಯೆಂದು ನೋಡಿದರೆ ಅದು ಏನೇನೂ ಆಗಿಲ್ಲವೆಂದು ಕಂಡುಬರುತ್ತದೆ.

ಒಬ್ಬ ಸದಸ್ಯರು :- ಇನಾಂ ರದ್ದಿಯಾತಿ ಮಸೂದೆ ಮಾಡಿಲ್ಲವೇ ?

ಶ್ರೀ ಎಸ್. ಗೋಪಾಲಗೌಡ :- ಹೌದು. ಆದರೆ ಅದಿನ್ನೂ ಕಾನೂನಾಗಿಲ್ಲವಲ್ಲಾ. ಅದಿನ್ನೂ ರಾಷ್ಟ್ರಾಧ್ಯಕ್ಷರ ಅಪ್ಪಣೆ ಪಡೆಯಲು ಕೇಂದ್ರಕ್ಕೆ ಹೋಗಿದೆ ; ವಾಪಸ್ಸು ಬಂದಿಲ್ಲ. ಆದರೆ ಅದು ಹಿಂದಿರುಗಲು ಇಷ್ಟು ನಿಧಾನವಾಗಲು ಕಾರಣವೇನಿರಬಹುದೆಂಬುದನ್ನು ತಿಳಿದಿದ್ದರಲ್ಲಿ - ನಾವು ಅನುಮೋದಿಸಿ ಕಳುಹಿಸಿರತಕ್ಕಂಥ ಬಿಲ್ಲು ರೈತರಿಗೇನೂ ಅಷ್ಟು ಪ್ರಗತಿದಾಯಕವಾಗಿಲ್ಲ, ಅದರಲ್ಲಿ ಟೆನ್‌ಂಟ್ಸ್ ಆಫ್ ವಿಲ್ಲನ್ನು ಕೈಬಿಟ್ಟಿದ್ದೀರಿ, ಇಂಥಾ ಒಂದು ಮಸೂದೆಯನ್ನು ಶಾಸನ ಕಡತಕ್ಕೇರಿಸಿದರೆ ಏನೂ ಪ್ರಯೋಜನವಾಗುವುದಿಲ್ಲ ಎಂದು ಅವರು ಅದನ್ನು ತಡೆ ಹಾಕಿದ್ದಾರೆಂದು ಗೊತ್ತಾಯಿತು. ಆದರೆ ನಾವೇನೂ ಯಾವಾಗ್ಲೂ ರೈತರಿಗೆ ಸ್ನೇಹಿತರೇ. ತಮ್ಮ ಕಡೆಯ ಪಕ್ಷದಿಂದ ವಾದ ಮಾಡಿದಂಥ ಒಬ್ಬರ ಹೆಸರನ್ನು ನಾನೀಗ ಹೇಳಬೇಕಾಗಿದೆ. ಆ ದಿನವೇ ಶ್ರೀಮಾನ್ ಎಚ್.ಸಿ. ಲಿಂಗಾರೆಡ್ಡಿಯವರು ಈ ಟೆನ್‌ಂಟ್ಸ್ ಆಫ್ ವಿಲ್ಲಿನ ಬಗ್ಗೆ ಬಹಳವಾಗಿ ವಾದ ಮಾಡಿದ್ದಾರೆ. ಆದರೆ

ನಮ್ಮ ಲೀಡರ್ ಶ್ರೀ ಇಮಾಂರವರು ಈ ವಿಚಾರವಾಗಿ ಈಗಾಗಲೇ ಅವರ ಅಭಿಪ್ರಾಯವನ್ನು ಸಾವಿರಾರು ಸಾರ್ತಿ ಹೇಳಿದ್ದಾರೆ. ನಾನು ಕಮ್ಯುನಿಸ್ಟ್ ಪಕ್ಷಕ್ಕೆ ಸೇರದಿದ್ದರೂ ಕೂಡ ನನ್ನ ಜಮೀನು ಕಾಣಿಗಳು ಏನಿವೆಯೇ ಅವುಗಳೆಲ್ಲವನ್ನೂ ತೆಗೆದುಕೊಂಡು ಬಿಡಿ ಎಂದು ಹೇಳುತ್ತಾ ಅವರು ಈ ಸೋಷಿಯಲಿಜಮ್ ಇನ್ನೂ ಒಂದು ಹೆಜ್ಜೆ ಮುಂದೆ ಹೋಗಿ, ನನಗೊಂದು ಉದ್ಯೋಗ ನನ್ನ ಮಕ್ಕಳ ಜೀವನೋಪಾಯಕ್ಕೊಂದು ಸುಖವಾದ ದಾರಿ ಮಾಡಿಕೊಟ್ಟುಬಿಡಿ ಎಂದು ಅವರು ಯಾವಾಗ್ಲೂ ಹೇಳುತ್ತಿದ್ದಾರೆ. ಅವರಿಗೊಂದು ಕಾರಿದೆ. ಆ ಕಾರು ಅವರಿಗೇ ಇರಬೇಕು. ಹೀಗೆ ಅವರ ಅನುಕೂಲಗಳಿಗೆ ತಕ್ಕಂತೆ ಇದ್ದರೆ ಸಾಕು. ಮೊನ್ನೆ ಶ್ರೀಮಾನ್ ಶ್ರೀನಿವಾಸಯ್ಯಂಗಾರ್ ಅವರು ಮಾತನಾಡುತ್ತಿದ್ದಂಥ ಕಾಲದಲ್ಲಿ ಕೂಡ ತಮ್ಮ ಕಡೆಯ ಕೆಲವು ಸದಸ್ಯರು ಅವರು ಬ್ಯಾಂಕಿನಲ್ಲಿ ಲಕ್ಷಾಂತರ ರೂಪಾಯಿಗಳನ್ನು ಹಾಕಿಕೊಂಡಿದ್ದಾರೆ ಎಂದು ವಾದ ಮಾಡಿದರು. ಆಗ ಶ್ರೀಮಾನ್ ಚನ್ನಬಸಪ್ಪನವರಿಗೆ ಅವರು ಉತ್ತರ ಕೊಟ್ಟಿದ್ದಾರೆ. ತಾವು ಒಬ್ಬೊಬ್ಬರಾಗಿ 30 ಎಕರೆಗಳಿರಬೇಕೆಂಬ ತೀರ್ಮಾನಕ್ಕೆ ಬಂದರೆ ಅವರೂ ಕೂಡ 30 ಎಕರೆ ಇಟ್ಟುಕೊಳ್ಳುವ ತೀರ್ಮಾನಕ್ಕೆ ಬಂದಿರುವುದಾಗಿ ತಿಳಿಸಿದ್ದಾರೆ.



ಶ್ರೀಮಾನ್ ಎಚ್.ಎಂ. ಚನ್ನಬಸಪ್ಪನವರೂ ಮತ್ತು ಶ್ರೀಮಾನ್ ಎ. ಭೀಮಪ್ಪನಾಯಕರೂ ಬಹಳ ಕಾತುರರಾಗಿರುವುದರಿಂದ ತಾವು ಈ ಬಗ್ಗೆ ಅತಿ ಜರೂರಾಗಿ ಒಂದು ಸುವ್ಯವಸ್ಥೆಯಿಂದ ಕೂಡಿದ ಬಿಲ್ಲನ್ನು ಈ ಅಧಿವೇಶನದಲ್ಲೇ ತಂದರೂ ಕೂಡ ನಾವು ಅದನ್ನು ಪಾಸ್ ಮಾಡಲಿಕ್ಕೆ ಸಿದ್ದವಾಗಿದ್ದೇವೆ. ನಮಗೆ ಆದರಿಂದ ಎಷ್ಟೇ ಕಷ್ಟ ಬಂದರೂ ನಾವು ಅವುಗಳನ್ನು ಲೆಕ್ಕಿಸುವುದಿಲ್ಲ. ಅನೇಕ ಸಂದರ್ಭಗಳಲ್ಲಿ

ಶ್ರೀ ಕಡಿದಾಳ್ ಮಂಜಪ್ಪನವರು :- ನಾನು ನನ್ನನ್ನು ನಿಮ್ಮೊಂದಿಗೆ ಎಂದಿಗೂ ಹೋಲಿಕೆ ಹಾಕಿಕೊಂಡಿಲ್ಲ.

ಶ್ರೀ ಎಸ್. ಗೋಪಾಲಗೌಡ :- ನಾನು ನಾನ್ ವೈಲೆಂಟ್ ಕಮ್ಯುನಿಸ್ಟ್ ಎಂದು ಹೇಳಿಕೊಂಡಿದ್ದೀರಿ. ಈಗ ಕಾಶ್ಮೀರದಲ್ಲಿ ಈ ಮಸೂದೆಯನ್ನು ತಂದಿದ್ದಾರೆ.

ಶ್ರೀ ಕಡಿದಾಳ್ ಮಂಜಪ್ಪನವರು :- ನಾನು ಈ ಹಿಂದೆಯೇ ಹೇಳಿದ್ದೇನೆ - ನನಗೆ ತಾವೆಲ್ಲರೂ ಆ ಅಧಿಕಾರವನ್ನು ಸಂಪೂರ್ಣವಾಗಿ ಕೊಟ್ಟುಬಿಡಿ ಆಗ ಏನು ಬೇಕಾದರೂ ನಾನು ಒಂದು ತಿಂಗಳಿನಲ್ಲೇ ಮಾಡಿಬಿಡುತ್ತೇನೆ ಎಂದು.

ಶ್ರೀ ಎಸ್. ಗೋಪಾಲಗೌಡ :- ಈ ಭೂಮಿಯನ್ನು ಎಲ್ಲರಿಗೂ ಸಮಾನವಾಗಿ ಹಂಚತಕ್ಕಂಥ ಒಂದು ಸೀಲಿಂಗ್ ಲಿಮಿಟನ್ನು ಮಾಡಲೇಬೇಕಾಗಿದೆ. ಆದರೆ ಆ ಒಂದು ಕಾರಣಕ್ಕಾಗಿಯೇ ಈಗ ಈ ಬಿಲ್ಲನ್ನು ಹಿಂದಕ್ಕೆ ತಳ್ಳಬೇಕಾಗಿಲ್ಲ. ಆದರೆ ಈ ಕಾನೂನಿನಲ್ಲಿ





ಸಹ ಆ ಒಂದು ಸೀಲಿಂಗ್ ಲಿಮಿಟ್ ಹಾಕದಿದ್ದರೆ ಇದೊಂದು ಪ್ರಗತಿದಾಯಕವಾದ ಕಾನೂನಾಗುವುದಿಲ್ಲ. ಆದರೆ ಅವರು ಹೇಳತಕ್ಕದ್ದೂ ಕೂಡ ಅತಿ ಜರೂರಾದದ್ದು ಮತ್ತು ಅತಿ ಮುಖ್ಯವಾದದ್ದು ಎಂದು ಹೇಳಿಕೊಳ್ಳುತ್ತೇನೆ.

ಇನ್ನು ಇದರಲ್ಲಿ permissible holding ಎನ್ನುವುದನ್ನು ಹೊಸದಾಗಿ ನಮೂದು ಮಾಡಲಾಗಿದೆ. ಇದು ಮೂಲ ಕಾನೂನಿನಲ್ಲಿಲ್ಲ. ಇದಕ್ಕೆ ಶ್ರೀಮಾನ್ ಭೀಮಪ್ಪ ನಾಯಕರು ಭಿನ್ನಾಭಿಪ್ರಾಯಪಟ್ಟು ಇದನ್ನೇಕೆ ಸೇರಿಸಬೇಕೆಂದರು. ಈ permissible holding ವಿಚಾರದಲ್ಲಿ ಹಿಂದಿನ ಅಧಿವೇಶನದಲ್ಲಿ ಮಾತನಾಡುತ್ತಾ ಹೇಳಿದ್ದಾರೆ. ರಾಗಿ, ಜೋಳ, ಬತ್ತ ಬೆಳೆಯುವ ಕಡೆ ಎಂಟು ಪಲ್ಲ ಬತ್ತ, ರಾಗಿ, ಜೋಳವನ್ನು ಬೆಳೆಯುವ ಸ್ಥಳವನ್ನು ಒಂದೆಕರೆ ಎಂದು ಪರಿಗಣಿಸುತ್ತೇವೆ. ತೋಟವಾದಕೂ ಹಾಗೆಯೇ, ಹೀಗೆ ಲೆಕ್ಕಹಾಕಿ, ಇಪ್ಪತ್ತೈದು ಎಕರೆಗಳು standard ಎಕರೆಗಳು ಎಂದು permissible holding ಮಾಡಿದ್ದಾರೆ. ಎಂಟೆಕರೆ ಬೆಳೆಯತಕ್ಕ ಪ್ರದೇಶ ಒಂದು ಸ್ಟಾಂಡರ್ಡ್ ಎಕರೆ ಇಂಥ ಇಪ್ಪತ್ತೈದು ಸ್ಟಾಂಡರ್ಡ್ ಎಕರೆಗಳನ್ನುಳ್ಳ ಒಂದು ಪ್ರದೇಶ ಸಾಧಾರಣವಾಗಿ ಒಂದು permissible holding ಎಂದು ಹೇಳುತ್ತೇವೆ. ಒಂದು ವಿಷಯವನ್ನು ಮಾನ್ಯ ಕಂದಾಯ ಮಂತ್ರಿಯವರು ಹೇಗೆ ಪರಿಗಣಿಸಿದ್ದಾರೋ ಅವರಿಗೆ ಇದು ಅನ್ವಯಿಸುತ್ತದೆ, ಐನೂರು ಎಕರೆಯನ್ನು ಸಾಗುವಳಿ ಮಾಡಿದರೂ ಅವರಿಗೆ ಅನ್ವಯಿಸುವುದಿಲ್ಲವೆಂಬ ಭಾವನೆ ಬರುತ್ತದೆ ಒಂದು ವೇಳೆ ಇಂಥವರಿದ್ದರೂ ಅವರಿಗೆ ಇಂಥ ಕಾನೂನು ಅನ್ವಯಿಸುವುದಿಲ್ಲ. ಆದುದರಿಂದ ಇದು discriminatory ಆಗಬಹುದು. ತಿರುವಂಕೂರು ಕೋಚ್ಚಿಯಲ್ಲಿ ಸ್ವಂತವಾಗಲಿ ಗೇಣಿ ಜಮೀನಾಗಲಿ ಹತ್ತೊಂಭತ್ತೂವರೆ ಎಕರೆ ಮೇಲಿರಬಾರದೆಂದು ಮಾಡಿದರು. ಇದು ಇಲ್ಲಿ, ಗೇಣಿದಾರರಿಗೂ ಕೂಡ ಅನ್ವಯಿಸುತ್ತದೆ. ಏಕೆಂದರೆ ಅಲ್ಲಿರುವ ಜಮೀನಾಗಲಿ ವಿಸ್ತೀರ್ಣ ಕಡಿಮೆ, ಜನ ಜಾಸ್ತಿ. ಇದರಿಂದ ಭೂಮಿಯ ಮೇಲೆ ಒತ್ತಡ ಜಾಸ್ತಿಯಾಗಿದೆ. ಆದರೆ ನಮ್ಮಲ್ಲಿ, ಮಾನ್ಯ ಕಂದಾಯ ಮಂತ್ರಿಗಳು ಹೇಳಿದ ಹಾಗೆ, ಒಂದು ಕೋಟಿ ಎಕರೆ ಜಮೀನಿದೆ. ಒಂದು ಸಂಸಾರಕ್ಕೆ ಒಂದೆಕರೆ ಬರುತ್ತದೆ ಎಲ್ಲರಿಗೂ ಹಂಚಿದರೂ ಕೂಡ ಎಲ್ಲರೂ ಜಮೀನನ್ನಿಟ್ಟು ಕೊಳ್ಳುವುದಕ್ಕಾಗುವುದಿಲ್ಲ. ಆದುದರಿಂದ permissible holding ಎಲ್ಲರಿಗೂ ಅನ್ವಯವಾಗುವಂತೆ ಮತ್ತೆ ತಿದ್ದುಪಡಿ ಮಾಡಬೇಕು. ಈಗ ಇಷ್ಟಕ್ಕೇ ಬಿಟ್ಟಿದ್ದಾರೆ. ಈಗ ಗೇಣಿಗೆ ಕೊಟ್ಟಿರುವವರಿಗೆ ಮಾತ್ರ ಅನ್ವಯಿಸುತ್ತದೆ. ಕೊಡದೇಯಿರುವವರಿಗೆ ಇದು ಅನ್ವಯವಾಗುವುದಿಲ್ಲ. Permissible holding ನಿಯಮ ಎಲ್ಲರಿಗೂ ಅನ್ವಯಿಸಬೇಕು. ಇದನ್ನು ಆ ರೀತಿ ತಿದ್ದುಪಡಿಮಾಡಬೇಕೆಂದು ಮತ್ತೊಂದು ಸಲಹೆ ಮಾಡುತ್ತೇನೆ. ಗೇಣಿದಾರರಿಗೆ ಅನ್ವಯಿಸಿದರೆ ತಪ್ಪಿಲ್ಲ.

ಇನ್ನು ಸ್ಟಾಂಡರ್ಡ್ ಎಕರೆ ಲೆಕ್ಕ ಹಾಕುವುದರಲ್ಲಿ ಸ್ವಲ್ಪ ಭಿನ್ನಾಭಿಪ್ರಾಯವಿದೆ. ಕೆಲವು ಕಡೆ ಎಂಟು ಪಲ್ಲ ಜೋಳ ಬೆಳೆಯುವುದು ಸುಮಾರು ಎಂಟೆಕರೆ ಭೂಮಿಯಾಗಬಹುದು. ಎಕರೆಗೆ ಒಂದೇ ಪಲ್ಲ ಬೆಳೆಯುವ ಬೆಂಗಾಡು ಪ್ರದೇಶವು ಇದೆ ಎಂದು ಹೇಳುತ್ತಾರೆ.

ಇದರ ಪ್ರಕಾರ ಒಬ್ಬನಿಗೆ 8 x 25 ಎಕರೆ ಕೊಡಬೇಕಾಗುತ್ತದೆ. ಇಂಥ ಹತ್ತು ಜನರಿದ್ದರೆ 10 x 8 x 25 ಎಕರೆ ಬಿಡಬೇಕಾಗುತ್ತದೆ, ಆಗ ಸರ್ಕಾರ ಬಹಳ ಜಮೀನನ್ನು ಬಿಡಬೇಕಾಗುತ್ತದೆ. ಹೀಗೆ ಮಾಡುವುದರಿಂದ ರೈತರಿಗೆ ಅನುಕೂಲವಾಗುವುದಕ್ಕೆ ಬದಲು ಅನಾನುಕೂಲವಾಗಬಹುದೆಂದು ನನಗೆ ತೋರುತ್ತದೆ. ಕೆಲವರು ಹೆಚ್ಚು ಅನುಕೂಲ ಪಡೆಯುತ್ತಾರೆ, ಮತ್ತೆ ಕೆಲವರಿಗೆ ಏನೂ ಸಿಕ್ಕುವುದಿಲ್ಲ. ಎಂಟೆಕರೆಗೆ ಒಂದು ಪಲ್ಲವಾದರೆ ಇಪ್ಪತ್ತೈದು ಎಕರೆ ಒಂದು permissible holding. ಆದುದರಿಂದ 8 x 25 ಎಕರೆಯಾಗುತ್ತದೆ. ಒಂದು ಸಂಸಾರ ಇಂಥ ನೂರು ಎಕರೆ ಇಟ್ಟುಕೊಳ್ಳಬಹುದೆಂದಿದೆ. ಆದ ಕಾರಣ ಈಗಿನ ಎಕರೆಗಳಲ್ಲಿ ಸುಮಾರು 800 ಎಕರೆಯಾಗುತ್ತದೆ. ಇಷ್ಟನ್ನು ಒಂದು ಕುಟುಂಬಕ್ಕೆ ಬಿಡಬೇಕಾಗುತ್ತದೆ. ಇದು ಸಾಧುವಲ್ಲ. ಎಕರೆಗೆ ಎಂಟು ಪಲ್ಲ ಬೆಳೆದರೆ, ಅಲ್ಲಿ ಬಹಳ ಕಡಿಮೆಯಾಗುತ್ತದೆ. ಆದ್ದರಿಂದ ಸ್ಟಾಂಡರ್ಡ್ ಎಕರೆಯ ಬಗ್ಗೆ ಈ formula ಸಮಂಜಸ ಅಥವಾ ಅಲ್ಲವೆ ಎನ್ನುವುದನ್ನು ಪುನ: ಪರಿಶೀಲನೆ ಮಾಡಬೇಕು. ಜಮೀನು ಕಂದಾಯದ ಆಧಾರದ ಮೇಲೆ ಇಷ್ಟೊಂದು ಗೊತ್ತು ಮಾಡಬಹುದು ; ಇಲ್ಲದಿದ್ದರೆ ಈಗಿರುವ ಎಕರೇಗಳನ್ನೇ ಇಷ್ಟಿರಬೇಕೆಂದಿಟ್ಟುಕೊಳ್ಳಬಹುದು. ಇಪ್ಪತ್ತೈದು ಅಥವಾ ಮೂವತ್ತು ಎಕರೆ ಎಂದು ಜಮೀನಿನ ಅಥವಾ fertility ಅಥವಾ ಬೆಳೆಯ ಮೇಲೆ ಕಡಿಮೆ ಅಥವಾ ಹೆಚ್ಚು ಮಾಡುವುದಕ್ಕೆ ಅವಕಾಶವನ್ನು ಈ ಮಸೂದೆಯಲ್ಲಿ ಅಳವಡಿಸಬೇಕು ; ಇಲ್ಲಿದಿದ್ದರೆ ಉದ್ದೇಶ ಸಾರ್ಥಕವಾಗುವುದಿಲ್ಲ. ಅಲ್ಲದೆ convert ಮಾಡುವಾಗ ಬಹಳ ತೊಂದರೆಯುಂಟಾಗುತ್ತದೆ.

ಅಧ್ಯಕ್ಷರು :- Fertility ಯ ಮೇಲೆ ಗೊತ್ತು ಮಾಡುವುದು ಕಷ್ಟವಾಗುತ್ತದೆ, ಬೆಳೆಯ ಮೇಲೆ ಮಾಡುವುದು ಸುಲಭ, ಆಗಲೂ ಇದು ತೊಂದರೆಯಾಗುತ್ತದೆ.

ಶ್ರೀ ಎಸ್. ಗೋಪಾಲಗಾಡ :- ಇದು ಸುಲಭವೆಂದು ಸೂಚಿಸಿದ್ದಾರೆ. ಸುಲಭವಾಗಲಾರದು, ನ್ಯೂನತೆಯಿದೆ ಎಂದು ಶ್ರೀಮಾನ್ ಭೀಮಪ್ಪನಾಯಕರು ತೋರಿಸಿದ್ದಾರೆ. ಕೆಲವು ನ್ಯೂನ್ಯತೆಗಳಿವೆಯೆಂದು ನನಗೂ ತೋರುತ್ತದೆ. Fertility ಇಲ್ಲದೇಯಿರುವ ಕಡೆಯೂ ಎಂಟು ನೂರು ಎಕರೆ ಬಿಡುವ ಸಂದರ್ಭ ಬಂದರೆ, ಅದು ಅಷ್ಟು ಸೂಕ್ತವಾಗುವುದಿಲ್ಲವೆಂಬುದು ಒಂದಂಶ. ಆದ ಕಾರಣ ಇದನ್ನು ಇನ್ನೂ ಪರಿಶೀಲನೆ ಮಾಡಬೇಕೆಂಬುದು ನನ್ನ ಅಭಿಪ್ರಾಯವಾಗಿದೆ.

ಇನ್ನು ಇದರಲ್ಲಿ ಅಳತೆ ಮತ್ತು ತೂಕದ ಬಗ್ಗೆ ಈ ಕಾನೂನನ್ನು ಸರಿಯಾದ ರೀತಿಯಲ್ಲಿ ಅನ್ವಯಿಸುವುದಕ್ಕೆ ಸರ್ಕಾರದವರು ಕ್ರಮವನ್ನು ತೆಗೆದುಕೊಳ್ಳಬೇಕು. ಇದನ್ನು ನಾನು ಎರಡನೆಯ ಸಾರಿ ಒತ್ತಾಯ ಮಾಡಿ ಹೇಳುತ್ತಿದ್ದೇನೆ. ಈ ವಿಷಯದಲ್ಲಿ ಇನ್ನೊಂದು ಮಸೂದೆ ಕೂಡ ಬರುತ್ತದೆಂದು ಕೇಳಿದೆ. ಅದನ್ನು ಕೂಡ ದಾರಿಗೆ ಕೊಡುವಾಗ ಮುಖ್ಯವಾಗಿ ಮಲೆನಾಡು ಪ್ರದೇಶದಲ್ಲಿ ಇದನ್ನು ತಹಬದಿಗೆ ತರದೇ ಹೋದರೆ ಕಷ್ಟವಾಗುತ್ತದೆ.



ಅಧ್ಯಕ್ಷರು :- ಜಾರಿಗೆ ಕೊಟ್ಟಿದ್ದಾರೆ.

ಶ್ರೀ ಎಸ್. ಗೋಪಾಲಗೌಡ :- ಸರಿಯಾಗಿ ಜಾರಿಯಲ್ಲಿಲ್ಲ. ಕಾಂಟ್ರ್ಯಾಕ್ಟ್ ವ್ಯಕ್ತಿಗೆ ಇದನ್ನು ಸರಿಯಾಗಿ ಅನ್ವಯಿಸಿಲ್ಲವೆಂದು ಕಾಣುತ್ತದೆ. ಯಾವುದಾದರೂ ಕರಾರು ರೀತಿ ಗೇಣಿ ಪಡೆಯುತ್ತಿದ್ದರೆ ಅದಕ್ಕೆ ಪರಿಹಾರವನ್ನೇನಾದರೂ ಒದಗಿಸಿದ್ದಾರೆಯೆ ಎಂದರೆ, ಅದಿಲ್ಲ. ಹಳೆಯ ಪದ್ಧತಿಯ ಪ್ರಕಾರವೇ ಮಂತ್ರಿಗಳ ನೆಂಟರು ಇಷ್ಟರು ಕೂಡ ಅಳೆಸುತ್ತಿದ್ದಾರೆ.

Sri. Kadidal Manjappa :- Better we avoid these remarks about our friends or relatives.

ಶ್ರೀ ಎಸ್. ಗೋಪಾಲಗೌಡ :- ದೂರದವರ ವಿಷಯ ಹೇಳಿದರೆ ಅರ್ಥವಾಗುವುದಿಲ್ಲ. ಎಲ್ಲೋ ಅಳೆಯುತ್ತಿರಬಹುದೆಂದು ತಿಳಿದುಕೊಳ್ಳುತ್ತಾರೆ. ಆದ್ದರಿಂದ ಅವರಿಗೆ ಅರ್ಥವಾಗಲೆಂದು ಹೇಳಿದೆನೇ ಹೊರತು it is not an aspersion or insinuation.

ಭೂಮಿಯನ್ನು ಕೊಂಡುಕೊಳ್ಳುವ ವಿಷಯದಲ್ಲಿ ಈ ಕಾನೂನಿನಲ್ಲಿ ಹತ್ತು ವರ್ಷದ ಅವಧಿಯಲ್ಲಿ ಆರು ಕಂತುಗಳಲ್ಲಿ ಕೊಡಬೇಕೆಂದಿದೆ. ಇದರಲ್ಲಿ ಏನಾಗುತ್ತದೆಯೆಂದು, ಅವನು ಗೇಣಿಯನ್ನು ಕೊಡಬೇಕು, ಈ ಕಂತುಗಳನ್ನೂ ಕೊಡಬೇಕು ; ಅದರಿಂದ ಕಷ್ಟವಾಗುತ್ತದೆ. ಹೀಗಾಗಿ ಅನೇಕರಿಗೆ ಕೊಂಡುಕೊಳ್ಳುವುದಕ್ಕೆ ಕಷ್ಟವಾಗುತ್ತದೆ, ಅವರಿಗೆ ಶಕ್ತಿ ಇರುವುದಿಲ್ಲ. ಆದುದರಿಂದ ಇಷ್ಟು ವರ್ಷ, ಇಷ್ಟು ಗೇಣಿಯನ್ನು ಕೊಟ್ಟರೆ ಅವನಿಗೆ ಭೂಮಿಯನ್ನು ಕೊಡುವುದಾಗಿ ನಮೂದು ಮಾಡಬೇಕು. ಏಕೆಂದರೆ, ಇದುವರೆಗಿದ್ದ ವ್ಯವಸ್ಥೆ ತನ್ನ ಅವಸಾನ ಕಾಲದಲ್ಲಿದೆ. ಇದೇ ವ್ಯವಸ್ಥೆ ಮುಂದುವರಿಯುತ್ತದೆ ಎಂದು ಯಾರೂ ನಂಬಿಕೆಯನ್ನಿಟ್ಟಕೊಂಡಿದ್ದಾರೆಂದು ನಾನು ತಿಳಿದುಕೊಂಡಿಲ್ಲ. ಕ್ರಮವಾಗಿ ಮಧ್ಯವರ್ತಿಗಳನ್ನು ತೊಡೆದುಕೊಂಡಿಲ್ಲ. ಕ್ರಮವಾಗಿ ಮಧ್ಯವರ್ತಿಗಳನ್ನು ತೊಡೆದು ಹಾಕಬೇಕೆಂದರೆ ನಾನು ಹೇಳಿದ ಈ ಕ್ರಮವನ್ನನುಸರಿಸಬೇಕಾಗುತ್ತದೆ. ಇನ್ನೂ ಹತ್ತು ವರ್ಷ ಈಗ ಕೊಡತಕ್ಕ ಗೇಣಿಯನ್ನು ಕೊಟ್ಟರೆ ಮುಂದೆ ಬರಿಯ ಕಂದಾಯವನ್ನು ಕೊಟ್ಟುಕೊಂಡು ಆ ಜಮೀನನ್ನು ಅವನೇ ಮಾಡಿಕೊಳ್ಳಬಹುದೆಂದು ಹೇಳುವುದರಲ್ಲಿ ತಪ್ಪಿಲ್ಲ. ಹಾಗೆ ಮಾಡದಿದ್ದರೆ, ಅವನು ಕಂತುಗಳನ್ನು ಕೊಟ್ಟುಕೊಂಡು ಕೊಳ್ಳುವುದಕ್ಕಾಗುವುದಿಲ್ಲ. ಇದರಿಂದ ಬೇರೆಯವರು ಕೊಂಡುಕೊಳ್ಳುವುದಕ್ಕೂ ಅವಕಾಶವಾಗುತ್ತದೆ. ಇದಕ್ಕಾಗಿ ಹತ್ತು ವರ್ಷದ ಅವಧಿಯಲ್ಲಿ ಆರು ಕಂತುಗಳಲ್ಲಿ ಕೊಡಬೇಕೆಂದು ಏನಿದೆಯೋ ಅದನ್ನು ಸುಲಭ ಮಾಡಿ, ರೈತ ಕೊಂಡುಕೊಳ್ಳುವುದಕ್ಕೆ ಹೆಚ್ಚು ಅನುಕೂಲಗಳನ್ನೊದಗಿಸಿ ಕೊಡಬೇಕೆಂದು ಸರ್ಕಾರಕ್ಕೆ ನಾನು ವಿನಂತಿ ಮಾಡಿಕೊಳ್ಳುತ್ತೇನೆ.

ಇತ್ತೀಚೆಗೆ ನನಗೆ ತಿಳಿದಿರುವ ಹಾಗೆ ಬೋಂಬಾಯಿನಲ್ಲಿ ಇನ್ನೂ ಕೆಲವು ವರ್ಷ ಕಾಲ protected tenancy ಆಗಿ ಮುಂದುವರಿದು ಅನಂತರ ಆ ಜಮೀನಿನ ಖಾತೆಯನ್ನು

ಅವರವರ ಹೆಸರಿಗೇ ಬದಲಾಯಿಸುತ್ತಾರೆ. ಈ ಹೊತ್ತು ಟೆನೆಂಟ್ ಆಗಿದ್ದರೆ ಅಂಥವನು ಕಾಲಕ್ರಮದಲ್ಲಿ ಆ ಭೂಮಿಯ ಮಾಲೀಕನಾಗುತ್ತಾನೆ. ಮಧ್ಯವರ್ತಿಯು ಎಂಟು ಹತ್ತು ವರ್ಷಗಳಲ್ಲಿ ಕ್ರಮವಾಗಿ ಚಿತ್ರದಿಂದ ಹೊರಟು ಹೋಗುತ್ತಾನೆ. ಇದರಿಂದ ಯಾವುದೊಂದು ಘರ್ಷಣೆಯು ಇಲ್ಲದೆ ಈ ವ್ಯವಸ್ಥೆಯನ್ನು ತೊಡೆದು ಹಾಕುವುದು ಆ ಪದ್ಧತಿಯಿಂದ ಸಾಧ್ಯವಾಗಿದೆ.

ಇನ್ನು ಇದರಲ್ಲಿ ಜಮೀನ್ದಾರನಿಗೆ 25 ಎಕರೆಯಿದ್ದರೆ ಅದರಲ್ಲಿ ಆರೂ ಕಾಲು ಎಕರೆಯನ್ನು ಸ್ವಂತ ಸಾಗುವಳಿ ಬಳಸಿಕೊಳ್ಳಬಹುದೆಂದಿದೆ. ಇದೇ ರೀತಿ 25 ಎಕರೆಯವರೆಗೆ ಬಳಸಿಕೊಳ್ಳಬಹುದು ಮತ್ತು ಅದನ್ನು ಸ್ವಂತ ಸಾಗುವಳಿ ಮಾಡಬಹುದೆಂದಿದೆ. ಜಮೀನ್‌ದಾರರ ದೃಷ್ಟಿಯಿಂದ ನಾವು ಇಂಥ ಒಂದು ಕ್ಲಾಜನ್ನು ಒಪ್ಪಬೇಕಾಗುತ್ತದೆ. ಏಕೆಂದರೆ, ಈ ಹೊತ್ತು ಕೆಲವರು ಬರಿಯ ಹತ್ತು ಹದಿನೈದು, ಇಪ್ಪತ್ತು ಎಕರೆ ಇರುವವರು ಕೂಡ ನಾನಾ ಕಾರಣಗಳಿಂದ ತಾವೇ ಸಾಗುವಳಿ ಮಾಡಲಾರದೆ ಬೇರೆಯವರಿಗೆ ಕೊಟ್ಟಿರುತ್ತಾರೆ. ಅಂತ ಸಂದರ್ಭದಲ್ಲಿ ಸ್ವಂತ ಸಾಗುವಳಿ ಮಾಡಬೇಕೆಂದರೆ ಭೂಮಿ ಸಿಕ್ಕದೆ ಹೋಗಬಹುದು. ತಾವೇ ಸಾಗುವಳಿ ಮಾಡುತ್ತೇನೆನ್ನುವವರಿಗೆ ಅದಕ್ಕೆ ಅವಕಾಶವಿರಬೇಕು. ಇದರಲ್ಲಿ ಕೆಲವು ಮಾರ್ಪಾಡುಗಳನ್ನು ಕೂಡ ಮಾಡಬಹುದು. ಈಗಿರುವ ರೀತಿಯಲ್ಲಿ ನಮ್ಮಲ್ಲಿರತಕ್ಕ ಭೂಮಿಯನ್ನು ಹಂಚುವ ವ್ಯವಸ್ಥೆಯನ್ನು ಮಾಡಿದರೆ ಇನ್ನೊಂದು ಕಷ್ಟ ಬರಬಹುದು. ಅನೇಕ ಜನ ರೈತರಿಗೆ ನೀವು ಬೇರೆ ಜಮೀನನ್ನು ಕೊಟ್ಟು ವ್ಯವಸ್ಥೆ ಮಾಡಬಹುದು. ಒಂದು ಕಡೆಯಿಂದ ರೈತರಿಗೆ, ಗೇಣಿದಾರರಿಗೆ ರಕ್ಷಣೆ ಕೊಡುತ್ತಾ ಹೋದರೆ ಅದರ ಹಕ್ಕನ್ನು ಕಾಪಾಡುತ್ತಾ ಹೋದಹಾಗೆಲ್ಲಾ ಜಮೀನ್ದಾರ ಕಳೆದುಕೊಳ್ಳುತ್ತಾ ಹೋಗುತ್ತಾನೆ. He becomes ultimately a landless man. ಬೊಂಬಾಯಿನಲ್ಲಿರುವ ಹಾಗೆ ಬರಿಯ ಹೆಸರು ಉಳಿಯುತ್ತದೆ. ಭೂಮಿ ಉಳಿಯುವುದಿಲಿಲ. ಆದುದರಿಂದ ಇದಕ್ಕೆ ಬೇರೆ ವ್ಯವಸ್ಥೆಯನ್ನು ಕೂಡ ನೀವು ಮಾಡಬೇಕಾಗುತ್ತದೆ. ಇದರಲ್ಲಿ ಮುಖ್ಯವಾಗಿ ಸೀಲಿಂಗ್ ಲಿಮಿಟ್ ತರುವ ವ್ಯವಸ್ಥೆ ಬಹಳ ಮುಖ್ಯ. ಇದನ್ನು ಮಾಡಿದರೆ ಭೂಮಿ ಹಂಚಿಕೆ ಸರಾಗವಾಗಿ ನಡೆಯುತ್ತದೆ. ಆಗ ಭೂ ವ್ಯವಸ್ಥೆಯನ್ನು ಸ್ವಲ್ಪ ಮಟ್ಟಿಗೆ ಅನುಕೂಲವಾದ ರೀತಿಯಲ್ಲಿ ರೂಪಿಸಿಕೊಳ್ಳಬಹುದು.

ಈ ಮಸೂದೆಯಲ್ಲಿ ಇನ್ನು ಅಮಲ್ದಾರರಿಗೆ ಬದಲಾಗಿ ಅಸಿಸ್ಟೆಂಟ್ ಕಮೀಷನರ್‌ರವರಿಗೆ ಅಧಿಕಾರವನ್ನು ಕೊಡಲಾಗಿದೆ. ಇದುವರೆಗೆ ನಾನು ನೋಡುವ ಹಾಗೆ ಅಮಲ್ದಾರ್ ಆಗಿರತಕ್ಕಂಥವರು ತಮ್ಮ ಕಾರ್ಯ ಗೌರವದ ಜೊತೆಯಲ್ಲಿ ನ್ಯಾಯವಾದಿಗಳಾಗಿ ಈ ಕೋರ್ಟನ್ನು ನಡೆಸಿಕೊಂಡು ಕೆಲಸವನ್ನು ನಿರ್ವಹಿಸುವುದು ಬಹಳ ಕಷ್ಟವಾಗಿದೆ. ಸಾಗರ, ಸೊರಬ, ಹೊಸನಗರ, ತೀರ್ಥಹಳ್ಳಿ ಇತ್ಯಾದಿ ಕಡೆಗಳಲ್ಲಿ ಈಗಾಗಲೇ ನೂರಾರು ಕೇಸುಗಳು ಪೆಂಡಿಂಗ್ ಇದ್ದು ಅಲ್ಲಿ ಕೆಲಸ ನಡೆಯುತ್ತ ಇಲ್ಲ. ಇದನ್ನು ಮೊದಲು ಸುಧಾರಣೆ ತಂದಾಗ Special Amildar ರನ್ನು ನೇಮಿಸುತ್ತೇವೆಂದು ಸರ್ಕಾರದವರು ಹೇಳಿದರು. ಆದರೆ ಅವರನ್ನು ನೇಮಿಸಿಲ್ಲ. ಈ ತಿದ್ದುಪಡಿಯಾದ ಮೇಲಾದರೂ ಕೂಡ ಆ ಕೇಸುಗಳು ನಡೆಯುವಂತೆ



ಅವಕಾಶ ಮಾಡಿಕೊಡಬೇಕು ಎಂಬ ಮುಖ್ಯ ಅಂಶವನ್ನು ಸರಕಾರದವರು ಗಮನಿಸಬೇಕೆಂದು ನಾನು ಹೇಳುತ್ತೇನೆ. ಆದಾದನಂತರ ಈಗ ಕಾರ್ಮಿಕರ ಕಡೆಯವರು ವಕೀಲರನ್ನು ಇಟ್ಟುಕೊಳ್ಳುವುದಕ್ಕೆ ಅವಕಾಶವಿದೆ. ಇಲ್ಲದಿದ್ದರೆ ಕಾರ್ಮಿಕರು ಅವರೇ ಕೇಸುಗಳನ್ನು ವಾದಮಾಡುತ್ತಾರೆ. ಹಾಗೆಯೇ ಮಾಲೀಕರೂ ಕೂಡ ವಾದ ಮಾಡುತ್ತಾರೆ. ಆ ರೀತಿ ಒಂದು ಅವಕಾಶವನ್ನು ಕೂಡ ಈ ಬಿಲ್ಲಿನಲ್ಲಿ ಕಲ್ಪಿಸಿ ಕೊಡಬಹುದು. ರೈತನು ಸಾಮಾನ್ಯವಾಗಿ ಇಂತಹ ಕೇಸಿನಲ್ಲಿ ತನ್ನ ಪರವಾಗಿ ವಾದ ಮಾಡುವುದಾದರೆ ರೈತರ ಸಂಘದ ಪ್ರತಿನಿಧಿಗಳು ಆ ಕೋರ್ಟಿನಲ್ಲಿ ಒಂದು ವಾದಮಾಡಬಹುದು. ಹಾಗೆ ರೈತನು ವಕೀಲರನ್ನು ಇಡುವುದಕ್ಕೆ ಶಕ್ತಿ ಇಲ್ಲದೆ ಇರುವ ಸಂದರ್ಭದಲ್ಲಿ ಜಮೀನ್‌ದಾರರು ವಕೀಲರನ್ನು ಇಡಬಾರದು ಎನ್ನುವ ಒಂದು ನಿಯಮವನ್ನು ಈ ಮಸೂದೆಯಲ್ಲಿ ಅನುಮೋಧಿಸುವುದು ಒಳ್ಳೆಯದು ಮತ್ತು ಉಚಿತವೆಂದು ನಾನು ತಿಳಿದುಕೊಂಡಿದ್ದೇನೆ. ಏಕೆಂದರೆ ಅನೇಕ ಸಂದರ್ಭಗಳಲ್ಲಿ ರೈತರಿಗೆ ವಕೀಲರನ್ನು ಇಡುವುದಕ್ಕೆ ಶಕ್ತಿಯಿಲ್ಲದೆ ಅವರು ಕೇಸುಗಳನ್ನು ಕಳೆದುಕೊಂಡಿದ್ದಾರೆ. ಜಮೀನ್ದಾರರು ವಕೀಲರನ್ನು ಇಡುತ್ತಾರೆ. ಆದರೆ ರೈತರಿಗೆ ಸರಿಯಾದ ರೀತಿಯಲ್ಲಿ ವಾದ ಮಾಡುವುದಕ್ಕೆ ಗೊತ್ತಾಗುವುದಿಲ್ಲ. Evidence ಕೊಡುವುದಕ್ಕೂ ಗೊತ್ತಾಗುವುದಿಲ್ಲ. ಅಂತಹ ಸಂದರ್ಭದಲ್ಲಿ ಅವರು ಕೇಸುಗಳನ್ನು ಕಳೆದುಕೋಂಡಿದ್ದಾರೆ.

ಶ್ರೀ ಎಲ್. ಸಿದ್ದಪ್ಪ (ಚನ್ನಗಿರಿ) :- ಒಬ್ಬ Standard counsel ಇಟ್ಟುಕೊಳ್ಳಬಹುದು.

ಶ್ರೀ ಎಸ್. ಗೋಪಾಲಗೌಡ :- ಹಿಂದಿನ ಸಲ ನಾನು ಆ ರೀತಿಯಾಗಿ ಹೇಳಿದ್ದು. ಆ ರೀತಿ ಪ್ರಾಸಿಕ್ಯೂಟರುಗಳನ್ನು ಕೂಡ ಇಡುವುದು ಅಷ್ಟು ಸೂಕ್ತವಾಗಲಾರದು ಮತ್ತು ಅದರಿಂದ ಎಷ್ಟರಮಟ್ಟಿಗೆ ಕೆಲಸ ನಡೆಯಬಹುದು ಎಂಬ ಅನುಮಾನ ಕೂಡ ನನಗಿದೆ. ರೈತನು ಅನುಕೂಲವಿದ್ದ ಕಡೆ ವಕೀಲರನ್ನು ಇಟ್ಟುಕೊಳ್ಳಬಹುದು. ಸರ್ಕಾರದವರು ರೈತ ವರ್ಗದವರನ್ನೂ ಮತ್ತು ಬಡವರನ್ನೂ ಉದ್ದಾರ ಮಾಡಬೇಕು. ರಕ್ಷಣೆ ಮಾಡಬೇಕು, ಎಂದು ನಾನು ಹೇಳುತ್ತಿದ್ದೇನೆ. ಆ ದೃಷ್ಟಿಯಿಂದ ರೈತನ ಹಿತರಕ್ಷಣೆ ಮಾಡುವುದಕ್ಕೆ ಒಬ್ಬ counsel ನ್ನು ಸರ್ಕಾರದವರು ಕೊಟ್ಟರೂ ಅದರಲ್ಲಿ ತಪ್ಪೇನೂ ಇಲ್ಲ. ಅದನ್ನು ಕೂಡ ಪ್ರಯೋಗ ರೀತ್ಯಾ ಮಾಡಿ ನೋಡಬಹುದು.

ಅಧ್ಯಕ್ಷರು :- ಅದರಿಂದ ತೊಂದರೆಯಾಗುತ್ತದೆಂದು ತಾವು ಹೇಳಿದ್ದರಲ್ಲ ?

ಶ್ರೀ ಎಸ್. ಗೋಪಾಲಗೌಡ :- ನನ್ನ ಒಂದು ಅನುಭವದಿಂದ ಹಾಗೆ ತೊಂದರೆ ಆಗಬಹುದೋ ಏನೋ ಎಂಬ ಒಂದು ಶಂಕೆಯಿಂದ ಹಾಗೆ ಹೇಳಿದೆನು. ರೈತರಿಗೆ ಕೋರ್ಟಿನಲ್ಲಿ ಯಾವ ರೀತಿ ಆಗುತ್ತದೆ ಎಂಬುದನ್ನೂ ಬೇಕಾದರೆ ಈ ರೀತಿಯಿಂದ ಕಂಡುಕೊಳ್ಳಬಹುದು. ಅದು ಇಲ್ಲದೆ ಹೋದರೆ ಕಾನೂನಿನಲ್ಲಿ ಅನೇಕ ವಿಧವಾದ ರಕ್ಷಣೆಗಳನ್ನು ಕೊಟ್ಟರೂ ಅವುಗಳ ರಕ್ಷಣೆಯನ್ನು ಪಡೆಯುವುದಕ್ಕೆ ಶಕ್ತಿ ಸಾಮರ್ಥ್ಯ ಇಲ್ಲದೆ,

ಅವುಗಳ ಉಪಯೋಗಗಳನ್ನು ಪಡೆಯಲಾಗದೆ ಹೋಗುತ್ತದೆ. ಇದರಿಂದ ರೈತರಿಗೆ ಬಹಳ ಕಷ್ಟವಾಗುತ್ತದೆ ಮತ್ತು ಅವರು ಬಹಳ ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಮಲೆನಾಡು ಪ್ರದೇಶಗಳನ್ನು ನಾಲ್ಕು ತಾಲ್ಲೂಕುಗಳಾಗಿ ಮಾಡಿ ಒಂದೊಂದು ಸಲ ಒಂದೊಂದು ತಾಲ್ಲೂಕು ಹೆಡ್ ಕ್ವಾರ್ಟಸ್ಸಿಗೆ ಹೋಗಿ ಕೋರ್ಟಗಳನ್ನು ನಡೆಸಿ ನ್ಯಾಯವನ್ನು ಒದಗಿಹುವ ಪದ್ಧತಿಯ್ನನು ಜಾರಿಗೆ ತರಬಹುದು. ಈಗ ಶಿವಮೊಗ್ಗದಲ್ಲಿ ನಮ್ಮ Sub-division ಇರುವುದು. ಆಗುಂಬೆಯಿಂದ ಅಲ್ಲಿಗೆ ಸುಮಾರು 60 ಮೈಲಿಗಳಾಗುತ್ತವೆ. ಆದ್ದರಿಂದ ಒಬ್ಬ ರೈತ ಆಗುಂಬೆಯಿಂದ ಶಿವಮೊಗ್ಗಾಕ್ಕೆ ಬಂದು ರಕ್ಷಣೆ ಪಡೆಯುವುದು ಸಾಧ್ಯವಿಲ್ಲ. ವಕೀಲರನ್ನು ಇಡುವುದಿಲ್ಲ. ಕೋರ್ಟಿಗೆ ಬರುವುದಿಲ್ಲ. ಹೀಗಾದರೆ ಜಮೀನದಾರರು ಅಕ್ರಮವಾಗಿ ಏನು ಕಾರ್ಯಕ್ರಮ ಕೈಗೊಳ್ಳಬಹುದೋ ಅದನ್ನು ಅನುಭವಿಸಿಕೊಂಡು ಆನಂತರ ರೈತರು ಜಮೀನು ಬಿಟ್ಟು ಊರು ಬಿಟ್ಟು ಹೋಗುವುದಕ್ಕೆ ಸಿದ್ದರಾಗಿರುತ್ತಾರೆ. ಇಂತಹ ಅನೇಕ ವಿಚಾರಗಳು ಈಗ ನಡೆಯುತ್ತಿವೆ. ಆದ್ದರಿಂದ, ಈಗ ಈ ಕಾನೂನನ್ನು ತಡಮಾಡಿ ತರುವುದರಿಂದ ಈ ಕಾನೂನನ್ನು ತರುತ್ತೇವೆಂದು ಸ್ಪಷ್ಟವಾಗಿ ಹೇಳಿಕೊಂಡು ಓಡಾಡುತ್ತಿರುವುದರಿಂದ ಏನೇನು ದುಷ್ಪರಿಣಾಮಗಳು ಆಗಿವೆ ಎಂಬುದನ್ನು ಒಂದೆರಡು ಮಾತುಗಳಲ್ಲಿ ವಿವರಿಸಬೇಕಾಗಿದೆ. ಕಾನೂನು ಜಾರಿಗೆ ಬಂದು ಇದನ್ನು ಖಚಿತವಾಗಿ ಜಮೀನ್ದಾರರಾಗಲಿ, ರೈತರಾಗಲಿ ಅನುಭವಿಸಬೇಕೆನ್ನುವ ಅಭಿಪ್ರಾಯದಿಂದ ನಾವು ಜಾರಿಗೆ ತರಲಿಲ್ಲ.

ಶ್ರೀ ಕಡಿದಾಲ್ ಮಂಜಪ್ಪ :- ತಾವು ಹೇಳಿದ್ದು ನನಗೆ ಅರ್ಥವಾಗುವುದಿಲ್ಲ.

ಶ್ರೀ ಎಸ್. ಗೋಪಾಲಗೌಡ :- ತಾವು ಕಾನೂನನ್ನು ಏನೋ ಮಾಡಿದ್ದೀರಿ. ಆದರೆ ಅದನ್ನು ಜಾರಿಗೆ ಕೊಡುವ ವಿಷಯದಲ್ಲಿ ಎಷ್ಟರಮಟ್ಟಿಗೆ ಸಾಧ್ಯವಾಗಿದೆ ಎಂಬುದನ್ನು ನೋಡಬೇಕು. ಈ ಹೊತ್ತು ನಮ್ಮಲ್ಲಿ ಗೇಣಿಕಾರರು ಇಲ್ಲ. ನಮ್ಮ ಪ್ರಾಂತ್ಯದಲ್ಲಿ ಗೇಣಿ ಪದ್ಧತಿ ಇದ್ದರೂ ಕೂಡ ಗೇಣಿಕಾರರು ಬರೆದುಕೊಡುವ ಪದ್ಧತಿ ಇಲ್ಲ. ಕಾಲದಿಂದಲೂ ಹಾಗೆಯೇ ಬಂದಿದೆ. ಕಾಗೋಡು ತಮಗೆಲ್ಲಾ ಗೊತ್ತಿರುವ ಹಾಗೆ ಇದಕ್ಕೆ ಸಾಕ್ಷಿ. ಹಿಂದಿನಿಂದಲೂ ಇದ್ದಂಥ ರೈತರನ್ನು ಆಮೇಲೆ ಬಂದಂಥ ಜಮೀನ್ದಾರರು ಹೇಗೆ ಅವರನ್ನು ಭೂಮಿ ಬಿಟ್ಟು ಓಡಿಸಿದರು ಎಂಬುದು ತಮಗೆ ಗೊತ್ತಿದೆ. ಆ ರೀತಿ ಎಷ್ಟೋ ನಿತ್ಯ ಜೀವನದಲ್ಲಿ ನಡೆಯುತ್ತಿವೆ. ಬೆಡಗೂರು ಗ್ರಾಮದಲ್ಲಿ ಈಗ ರೈತರನ್ನು ಓಡಿಸುತ್ತಿದ್ದಾರೆ. ಗುತ್ತಿಗೆಯನ್ನು ಅಳೆಸುವಾಗ 1 /3 ಭಾಗ ಬಿಡುವುದಿಲ್ಲ.

ಶ್ರೀ ಕಡಿದಾಲ್ ಮಂಜಪ್ಪ :- ಅವರಿಗೆ ಕೋರ್ಟಿಗೆ ಕಳುಹಿಸುವ ಹಾಗೆ ಏರ್ಪಾಡು ಮಾಡಬೇಕು.



ಶ್ರೀ ಎಸ್.ಗೋಪಾಲಗೌಡ :- ಅದನ್ನು ತಮ್ಮ ಪಾರ್ಟಿಯವರು ಮಾಡಬೇಕು. ಹಾಗೆ ಮಾಡದಿದ್ದರೆ ಹೇಗೆ ಆಗುತ್ತದೆ ? ಕಾನೂನು ಮಾಡುವಾಗ ಜನತೆಗೆ ಅನುಕೂಲವಾಗಲಿ ರಕ್ಷಣೆಯಾಗಲಿ ಇರುವಂತೆ ಮಾಡಬೇಕು ಜಮೀನುದಾರರ ಸಂಖ್ಯೆ ಕಡಿಮೆ ಆದರೆ ರೈತರ ಸಂಖ್ಯೆ ಜಾಸ್ತಿ. ಈ ಜಮೀನ್ದಾರರಿಗೆ ಖಾತೆ ಇಜೆ, ಪಟ್ಟಾ ಇದೆ. ಯಾರು ಯಾರಿಗೆ ಭೂಮಿ ಕೊಟ್ಟಿದ್ದಾರೆ. ಎಷ್ಟೆಷ್ಟು ಕೊಟ್ಟಿದ್ದಾರೆ, ಎಷ್ಟು ಗೇಣಿಯನ್ನು ಅಳೆಸುತ್ತಿದ್ದಾರೆಂಬುದನ್ನು ಅವರ ಹತ್ತಿರ ಕೇಳಿ ತಿಳಿದುಕೊಳ್ಳುವುದಕ್ಕೆ ಒಂದು ನೋಟಿಫಿಕೇಷನ್‌ನನ್ನು ತಾವು ಏತಕ್ಕೆ ಮಾಡಬಾರದು ? ಈ ಹೊತ್ತಿಗೂ ಕೂಡ ಆ ಕಾನೂನು ಜಾರಿಯಲ್ಲಿದ್ದರೂ ಅದು null and void ಆಗಿದೆ. ಈ ಹೊತ್ತಿಗೆ ಕೂಡ ಜಾಲ ಗೇಣಿಕಾರರು ಬರೆಸಿಕೊಂಡಿದ್ದಾರೆ.

ಅಧ್ಯಕ್ಷರು :- ಅವರು ಕೋರ್ಟಿಗೆ ಹೋಗುತ್ತಾರೆ.

ಶ್ರೀ ಎಸ್. ಗೋಪಾಲಗೌಡ :- ಕೋರ್ಟಿಗೆ ರೈತರನ್ನು ಯಾರು ಕರೆದುಕೊಂಡು ಹೋಗಬೇಕು ಎಂಬುದೇ ಈಗಿರುವ ಪ್ರಶ್ನೆ.

ಶ್ರೀ ಕಡಿದಾಲ್ ಮಂಜಪ್ಪ :- Assembly ಸದಸ್ಯರು (ನಗು)

ಶ್ರೀ ಎಸ್. ಗೋಪಾಲಗೌಡ :- ಇಲ್ಲಿ ಕಾನೂನನ್ನು ಮಾಡುವುದು ಎಷ್ಟು ಅವಶ್ಯಕವೋ ಅದನ್ನು ಸರಿಯಾದ ರೀತಿಯಲ್ಲಿ ಜಾರಿಗೆ ತರುವುದು ಮತ್ತು ಸಕಾಲದಲ್ಲಿ ಅವರಿಗೆ ನ್ಯಾಯವನ್ನು ಒದಗಿಸಿಕೊಡುವುದು ಕೂಡ ಅಷ್ಟೇ ಅವಶ್ಯಕ ಎನ್ನುವುದನ್ನು ನಾನು ಇಲ್ಲಿ ಒತ್ತಿ ಹೇಳುತ್ತೇನೆ. ಶ್ರೀಮಾನ್ ಭೀಮಪ್ಪನಾಯಕ್ ಅಂಥವರು ತಪ್ಪು ತಿಳಿದುಕೊಳ್ಳುವುದಕ್ಕೆ ಸಾಧ್ಯವಿದೆಯೆ ? ಅವರು ceiling limit ಏನು ಎನ್ನುವ ಬಗ್ಗೆ ವಾದ ಮಾಡಿದ್ದಾರೆ. ದೇಶದಲ್ಲಿ ಗೊಂದಲ ಎದ್ದಿರುವುದು ಶ್ರೀಮಾನ್ ಮಂಜಪ್ಪಗೌಡರು ceiling limit ಮಾಡುತ್ತಾರೆ. ಅದು 100 ಎಕರೆಯಂತೆ, 100 ಎಕರೆಗಿಂತ ಜಾಸ್ತಿ ಇರುವವರಿಗೆ ಯಾರ ಯಾರ ಹೆಸರಿಗೆ ಜಮೀನನ್ನು ಬರೆಯುವುದಕ್ಕೆ ಸಾಧ್ಯ ಎಂದು ಈ ರೀತಿಯಾಗಿ ಈಗಾಗಲೇ ಹಿಸ್ಸೆಗಳು ನಡೆಯುತ್ತಿವೆ. ಹೆಣ್ಣು ಮಕ್ಕಳಿಗೂ ಹಿಸ್ಸೆಗಳನ್ನು ಕೊಡೋಣ ಎನ್ನುತ್ತಿದ್ದಾರೆ. ಒಪ್ಪಂದದಲ್ಲಿ 100 ಎಕರೆ ಇಗ್ಗರೆ ಅದನ್ನು ಹದ್ದು ಬಸ್ತು ಮಾಡೋಣ ಎಂದು ಈ ರೀತಿ ಮಾಡುತ್ತಿದ್ದಾರೆ. ಆ ಕಾನೂನು ಬರುತ್ತದೆಂದು ಸುಮ್ಮನೆ ಪ್ರಚಾರಮಾಡಿ ಹೀಗೆಲ್ಲಾ ತೊಂದರೆಯಾಗುತ್ತಿದೆ. ಕರಾರು ಬರೆದುಕೊಡಿ ಎಂದು ಹೆದರಿಸಿ ಕಾನೂನು ನನ್ನ ಗಮನಕ್ಕೆ ಬಂದಿದೆ. ಒಬ್ಬರನ್ನು ಜಮೀನ್ದಾರರು ಕರೆಸಿಕೊಂಡು ನಿಮ್ಮಿಂದ ಬಾಕಿ ಬರುವುದು ಇದೆ. ನಿಮ್ಮಿಂದ ಎರಡು ಖಂಡುಗ ಭತ್ತ ಬಾಕಿ ಬರುವುದು ಇದೆ, ಅದನ್ನು ಬರೆದಿದ್ದೇನೆ, ಅದಕ್ಕೆ ರುಜುಹಾಕಿ ಎಂದು ಒಬ್ಬ ರೈತನಿಗೆ ಹೇಳಿದರು. ಆ ರೈತ ಅದಕ್ಕೆ ರುಜುಹಾಕಿದ ತಕ್ಷಣ ಜಮೀನುದಾರರು ನಾಳೆಯಿಂದ ತೋಟಕ್ಕೆ ಕಾಲು ಇಟ್ಟರೆ ನಿನ್ನ ಕಾಲನ್ನು ಮುರಿಯುತ್ತೇನೆ ಎಂಬುದಾಗಿ ಹೇಳಿದರಂತೆ.

ಶ್ರೀ ಕಡಿದಾಲ್ ಮಂಜಪ್ಪ :- Crescent House ನ ಹತ್ತಿರ ಒಬ್ಬ ವ್ಯಕ್ತಿ ಬಂದು ತಮ್ಮನ್ನು ಬರೆದು ಕೊಡಿ ಎಂದು ಕೇಳಿದಾಗ ನೀವು ಸುಮ್ಮನೆ ಕಣ್ಣು ಮುಚ್ಚಿಕೊಂಡು ಬರೆದುಕೊಟ್ಟರೆ ಆಗ ಸರ್ಕಾರ ಏನು ತಾನೇ ಮಾಡುವುದಕ್ಕಾಗುತ್ತದೆ ?

ಶ್ರೀ ಎಸ್. ಗೋಪಾಲಗೌಡ :- ಜನರನ್ನು ಅಂತಹ ಸ್ಥಿತಿಯಲ್ಲಿ ಇಟ್ಟಿದ್ದೀರಲ್ಲಾ ? ಅದಕ್ಕೆ ತಾವೇ ಕಾರಣರು. ಈ ಕೇಸು ಬರುತ್ತದೆ. ಅವರು ತಮ್ಮ ಸ್ನೇಹಿತರೇ ; ಒಳ್ಳೆಯ ವಕೀಲರು ಮತ್ತು ಒಳ್ಳೆ Advocate. ಅವರು ಸತ್ಯನಾರಾಯಣ ವ್ರತಕ್ಕೆ ನಮ್ಮ ಮನೆಗೆ ಬನ್ನಿ ಎಂದು ಕರೆಸಿಬಿಟ್ಟು ಈ ರೀತಿ ಬರೆದುಕೊಡು, ಇಲ್ಲದಿದ್ದರೆ ಕಾಲು ಮುರಿಯುತ್ತೇನೆ ಎಂದು ಹೇಳಿದರಂತೆ. ಇಂತಹ ಉದಾಹರಣೆಗಳು ಅಪರೂಪವಲ್ಲ. ಆದುದರಿಂದ ಈ ಪದ್ಧತಿಯನ್ನು ತೊಡೆದು ಹಾಕಬೇಕಾದರೆ ಈ ಕಾನೂನು ಬಹಳ ತೀವ್ರವಾದ ರೀತಿಯಲ್ಲಿ ಬರಬೇಕು, ಅದು ಎಲ್ಲರಿಗೂ ಅನ್ವಯಿಸುವಂಥದ್ದಾಗಿರಬೇಕು ಮತ್ತು ಅದನ್ನು ಜಾರಿಗೆ ಕೊಡುವಾಗ ಅದಕ್ಕೆ ಒಂದು ಬೇರೆ ಕೋರ್ಟನ್ನೇ ಮಾಡಬೇಕು. ಹಾಗಿದ್ದಲ್ಲಿ Amildar ರಿಗೆ ಈ ಕೇಸುಗಳನ್ನು ಒಪ್ಪಿಸಿಬಿಟ್ಟರೆ ಇದರಿಂದ ತೊಂದರೆಯಾಗುತ್ತದೆ. ಅವರಿಗೆ ಕೆಲಸ ಜಾಸ್ತಿ ಇರುತ್ತದೆ. ಅವರು ತಮ್ಮ ಕೆಲಸದ ಜೊತೆಗೆ ಕೇಸುಗಳಿಗೆ ಸಂಬಂಧಪಟ್ಟಂತೆ spot inspection ಮಾಡಿ evidence ತೆಗೆದುಕೊಂಡು ಈ ಕೇಸುಗಳನ್ನು ಇತ್ಯರ್ಥ ಮಾಡುವುದಕ್ಕೆ ಕಷ್ಟವಾಗುತ್ತದೆ ಈಗ ಅನೇಕ ಕೇಸುಗಳು ಪೆಂಡಿಂಗ್‌ನಲ್ಲಿ ಇಲ್ಲವೇ ? ಅಸಿಸ್ಟೆಂಟ್ ಕಮೀಷನರ್‌ರವರಿಗೆ ಅಧಿಕಾರ ಕೊಟ್ಟು ಅವರು Shimoga ದಲ್ಲಿ ಇರುವುದಾದರೆ ಅದರಿಂದ ಏನು ಪ್ರಯೋಜನವಾಗುವುದಿಲ್ಲವೆಂದು ಆಗಲೇ ನಾನು ಹೇಳಿದ್ದೇನೆ. ಎಲ್ಲಿ ಈ ಸಮಸ್ಯೆ ಇದೆಯೋ ಅಲ್ಲಿ ಘರ್ಷನೆ ಮತ್ತು ವಾದ ವಿವಾದಗಳು ನಡೆಯುತ್ತವೆ. ಎಲ್ಲಿ ಈ ತರಹ ಕೇಸುಗಳು ಹೆಚ್ಚಾಗಿವೆಯೋ ಅಂತಹ ಸ್ಥಳಗಳಲ್ಲಿ ಈ ಕೋರ್ಟು ಒಂದು ವಾರ ಅಥವಾ ಎರಡು ವಾರಗಳು ಕುಳಿತುಕೊಂಡು ಅಲ್ಲಿ ಆ ಕೇಸುಗಳನ್ನು ವಿಚಾರಮಾಡಿ ತೀರ್ಮಾನ ಕೊಡುವ ರೀತಿಯಲ್ಲಿ ಮಾಡಬೇಕು ಎನ್ನುವ ಒಂದು ವಿಧಾನವನ್ನು ಈ ಮಸೂದೆಯಲ್ಲಿ ಸೇರಿಸುವುದು ಬಹಳ ಒಳ್ಳೆಯದೆಂದು ನಾನು ಸರಕಾರಕ್ಕೆ ಸಲಹೆ ಮಾಡುತ್ತೇನೆ. ಆಮೇಲೆ eviction ವಿರುದ್ಧವಾಗಿ ಇದರಲ್ಲಿ ಸ್ವಲ್ಪ ಮಟ್ಟಿಗೆ ಮೂಲ ಕಾನೂನಿನಲ್ಲಿರುವುದಕ್ಕಿಂತ ಹೆಚ್ಚಾಗಿ ಅವಕಾಶ ಕೊಟ್ಟಿದೆ.

"ಯಾವುದೇ ಒಂದು ಒಪ್ಪಂದ, ಸಂಪ್ರದಾಯ, ಕೋರ್ಟಿನ ಡಿಕ್ರಿ, ಅಥವಾ ಹುಕುಂ ಇದ್ದಾಗ್ಯ ಸಹ ಒಬ್ಬ ಪಿಕ್ಕಿದಾರನು -

(ಎ) (1) ತಾನು ಪಿಕ್ಕಿದಾರನಾಗಿರತಕ್ಕ ಯಾವುದಾದರೂ ಜಮೀನಿನ ಯಾವುದಾರೂ ಸಾಲಿನ ಗುತ್ತಾ ಮೊಬಲಗನ್ನು ಪಾವತಿ ಮಾಡಲು ತಪ್ಪಿದ್ದ ಹೊರತು, ಅಥವಾ



(2) ಹನ್ನೆರಡನೆ ಪ್ರಕರಣದ ಮೇರೆಗೆ, ನ್ಯಾಯವಾದ ಗುತ್ತಾವನ್ನು ನಿರ್ಧರಿಸುವುದಕ್ಕಾಗಿ 12 ನೇ ಪ್ರಕರಣದ ಮೇರೆಗೆ ಹಾಕಿಕೊಂಡ ಅರ್ಜಿಯ ಅಮುಲ್ದಾರ್‌ರವರಲ್ಲಿ ಅಥವಾ ಅಸಿಸ್ಟೆಂಟ್ ಕಮಿಷನರ್‌ರವರಲ್ಲಿ ಅಥವಾ ಡೆಪ್ಯುಟಿ ಕಮೀಷನರ್‌ರವರಲ್ಲಿ ಇತ್ಯರ್ಥವಾಗದೆ ಉಳಿದಿರತಕ್ಕ ಸಂದರ್ಭದಲ್ಲಿ, ಅಂಥ ಪಿಕ್ಕಿದಾರನು ಒಂದುವೇಳೆ ಅಂಥ ಯಾವ ಅರ್ಜಿಯನ್ನೂ ಸಲ್ಲಿಸದೇ ಇದ್ದ ಪಕ್ಷಕ್ಕೆ ಆ ಸಾಲಿಗೆ ಯಾವ ಗುತ್ತಾವನ್ನು ಪಾವತಿಮಾಡಲು ಬದ್ಧನಾಗಿರುತ್ತಿದ್ದನೋ ಆ ಮೊಬಲಗಿಗೆ ಸಮವಾದ ಒಂದು ಮೊಬಲಗನ್ನು ಆಯಾ ಸಂದರ್ಭಾನುಸಾರ ಅಮಲ್ಧಾರ್‌ರವರಲ್ಲಿ ಅಥವಾ ಅಸಿಸ್ಟೆಂಟ್ ಕಮಿಷನರ್‌ರವರಲ್ಲಿ ಡೆಪ್ಯುಟಿ ಕಮಿಷನರ್‌ರವರಲ್ಲಿ ಠೇವಣಿ ಪಡೆಯಲು ತಪ್ಪಿದ್ದ ಮೊದಲು ಅಥವಾ

(3) ಹನ್ನೆರಡನೆಯ ಪ್ರಕರಣದ ಮೇರೆಗೆ ನಿರ್ಧರಿಸಲ್ಪಟ್ಟಿರತಕ್ಕ ನ್ಯಾಯವಾದ ಗುತ್ತಾ ಮೊಬಲಗು ಪಿಕ್ಕಿದಾರನು ಠೇವಣಿಯಿಟ್ಟಿರತಕ್ಕ ಮೊತ್ತಕ್ಕಿಂತಲೂ ಅಧಿಕವಾಗಿದ್ದ ಸಂದರ್ಭದಲ್ಲಿ, ಆಯಾ ಸಂದರ್ಭಾನುಸಾರ ಅಮಲ್ದಾರ್‌ರವರು ಅಥವಾ ಅಸಿಸ್ಟೆಂಟ್ ಕಮಿಷನರ್‌ರವರು ಅಥವಾ ಡೆಪ್ಯೂಟಿ ಕಮಿಷನರು, ತೀರ್ಮಾನಿಸತಕ್ಕ ತಾರೀಖಿನಿಂದ ಎರಡು ತಿಂಗಳುಗಳೊಳಗಾಗಿ ತನ್ನಿಂದ ಸಲ್ಲಬೇಕಾಗಿರತಕ್ಕ ಬಾಕಿ ಮೊಬಲಗನ್ನು ಪಾವತಿಮಾಡಲು ಅವನು ತಪ್ಪಿದ ಹೊರತು,

(ಬಿ) ಜಮೀನಿಗೆ ನಾಶಕರವಾದಂಥ ಅಥವಾ ಖಾಯಂ ಆಗಿ ನಷ್ಟವನ್ನುಂಟು ಮಾಡುವಂಥ ಯಾವುದಾದರೂ ಕೆಲಸವನ್ನು ಮಾಡಿದ್ದು ಹೊರತು.

(ಸಿ) ಜಮೀನನ್ನು ಒಳವಿಭಾಗ ಮಾಡಿದ್ದ ಹೊರತು,

(ಡಿ) ಜಮೀನನ್ನು ಒಳಗೇಣಿಗೂ ಕೊಟ್ಟಿದ್ದ ಹೊರತು ಅಥವಾ ಅದನ್ನು ತಾನೇ ಸ್ವಂತವಾಗಿ ವ್ಯವಸಾಯ ಮಾಡಲು ತಪ್ಪಿದ್ದ ಹೊರತು.

(ಇ) ಜಮೀನನ್ನು ವ್ಯವಸಾಯ ಮಾಡದೆ ಬಂಜರು ಬಿಟ್ಟಿದ್ದ ಹೊರತು ಅಥವಾ

(ಎಫ್) ವ್ಯವಸಾಯದ ಉದ್ದೇಶವಲ್ಲದ ಇತರ ಉದ್ದೇಶಕ್ಕಾಗಿ ಅಂಥ ಜಮೀನನ್ನು ಉಪಯೋಗಿಸಿದ್ದ ಹೊರತು...." ಎಂಬುದಾಗಿ ಹೇಳಿ ಪಿಕ್ಕಿಯನ್ನು ಬಿಡಿಸುವುದನ್ನು ಹೇಳಿದೆ. ನಾನಾಗಲೇ ಹೇಳಿದಂತೆ 'ಎರಡು ತಿಂಗಳೊಳಗಾಗಿ' ಎಂದಿರುವುದನ್ನು ತೆಗೆದು ಒಂದು ವರ್ಷ ಎಂದು ಮಾಡುವುದರಿಂದ ರೈತನಿಗೆ ಬಹಳ ಅನುಕೂಲ ಮಾಡಿದಂತಾಗುತ್ತದೆ. ಇಲ್ಲದಿದ್ದರೆ, ತೀರ್ಮಾನಕೊಟ್ಟ ಎರಡು ತಿಂಗಳೊಳಗೆ ಸಲ್ಲಿಸುವುದು ಬಹಳ ಕಷ್ಟ. ಇದರಿಂದ ಭೂಮಿಯನ್ನು ಬಿಡಿಸುವುದು ಬಹಳ ಕಷ್ಟ. ಇದರಿಂದ ಭೂಮಿಯನ್ನು ಬಿಡಿಸುವುದು ಬಹಳ ಜಮೀನ್ದಾರರಿಗೆ ಅನುಕೂಲ ಮಾಡಿದಂತಾಗುತ್ತದೆ.

ಒಬ್ಬ ಸದಸ್ಯರು :- ಒಂದು ವರ್ಷ ಎಂದು ಹೇಳಿದರೆ, ಅಷ್ಟು ಹೊತ್ತಿಗೆ ಇನ್ನೊಂದು ವರ್ಷ ಬರುತ್ತದೆಯಲ್ಲವೇ ?

ಶ್ರೀ ಎಸ್. ಗೋಪಾಲಗೌಡ - ಇಲ್ಲದಿದ್ದರೆ ಕಂತುಗಳಲ್ಲಿ ತೆಗೆದುಕೊಳ್ಳುವಂತೆ ಮಾಡಿ. ಎಲ್ಲಿ ಜಮೀನ್ದಾರರು ಗೇಣಿಯನ್ನೇ ಅವಲಂಬಿಸಿಕೊಂಡು ಜೀವನ ಮಾಡುತ್ತಿರುತ್ತಾರೋ ಅಲ್ಲಿ ಮಾತ್ರ ಇದರಿಂದ ಸ್ವಲ್ಪ ಕಷ್ಟವಾಗಬಹುದು, ಅಷ್ಟೇ.

ಒಬ್ಬ ಸದಸ್ಯರು :- ಅಂಥವರಿಗೂ ಕೊಡದೆ ಹೋದರೆ.

ಶ್ರೀ ಎಸ್. ಗೋಪಾಲಗೌಡ - ತಾವೇ ಎಲ್ಲರೂ ಉದಾರವಾಗಿ ಬಿಟ್ಟುಕೊಟ್ಟಿದ್ದೇವೆ, ವಿನೋಬಾ ಭಾವೆಯವರಿಗೆ ಧಾರೆಯೆರೆದಿದ್ದೇವೆ. ಎಂದು ಹೇಳಿದ್ದಾರೆ ಲೋಕಕಲ್ಯಾಣವಾಗುತ್ತಿತ್ತು. ಅವರ ಮಾತಿಗೆ ಬೆಲೆಕೊಟ್ಟ ಜಮೀನ್ದಾರರು ತಮ್ಮ ಜಮೀನನ್ನು ಬಿಟ್ಟು ಕೊಡುವುದಾರೆ, ಇಂಥ ಕಾನೂನು ಮಾಡುವ ಆವಶ್ಯಕತೆಯೇ ಇರುತ್ತಿರಲಿಲ್ಲ. ಅಂಥವರಿದ್ದರೆ ಮುಂದೆ ಬಂದು ಈ ಸಭೆಯಲ್ಲಿ ಬೇಕಾದರೆ ತಾನು ಇಷ್ಟು ಬಿಟ್ಟು ಕೊಟ್ಟೆ ಎಂದು declare ಮಾಡಿಕೊಳ್ಳ ಬಹುದು. ಅದು ಎಲ್ಲಾ ದೇಶಕ್ಕೂ ಮಾದರಿಯಾಗಿರುತ್ತದೆ. ಆ ರೀತಿ ಹೆಚ್ಚಿಗೆ ಜಮೀನಿರುವವರೆಲ್ಲರೂ ತಮ್ಮಗಾಗಿ ಹತ್ತಿಪ್ಪತ್ತು ಎಕರೆಗಳನ್ನು ಮಾತ್ರ ಇಟ್ಟುಕೊಂಡು, ಮಿಕ್ಕದ್ದನ್ನೆಲ್ಲಾ ಇತರರಿಗೆ ಬಿಟ್ಟುಕೊಟ್ಟು ಕಂದಾಯ ಕೊಡಲು ಬದ್ಧರು, ಮಿಕ್ಕದ್ದನ್ನು ಬೇರೆಯವರಿಂದ ತೆಗೆದುಕೊಳ್ಳಬಹುದು ಎಂದು ಹೇಳುವುದಾದರೆ ಅದಕ್ಕಿಂತ ಹೆಚ್ಚಿನ ಕ್ರಾಂತಿ ಇರುತ್ತದೆಯೇ ? ನಮಗೂ ಈ ಮಸೂದೆಗಳ ತೊಂದರೆಯಿರುವುದಿಲ್ಲ. ಜನರು ಅದನ್ನು ಮಾಡುವುದು ಸೂಕ್ತ. ಮುಂದೆ ಆ ರೀತಿ ಮಾಡಿಯಾರು ಎಂದು ಕಾದು ಈ ಮಸೂದೆಯನ್ನು ಮಾಡದೆ ಇರುವುದಕ್ಕಾಗುವುದಿಲ್ಲ. ಅದರ ಅಗತ್ಯ ಈ ಬಹಳವಾಗಿದೆ. ಏಕೆಂದರೆ, ಈಗಿರತಕ್ಕ ಪದ್ಧತಿಯಿಂದ ರೈತನನ್ನು ರಕ್ಷಿಸ ಬೇಕಾದರೆ ಈ ಕಾನೂನು ಮತ್ತಷ್ಟು ತೀವ್ರವಾಗಿರಬೇಕು. ಅದ್ದರಿಂದ ನಾನು ಮೊದಲೇ ಹೇಳಿದ ಹಾಗೆ, ಟೆನೆನ್ಸಿಯನ್ನು ರೈತರು ತಾನಾಗಿ ವಾಪಸ್ಸು, ಕೊಟ್ಟರೆ, ಅಥವಾ ತಾನು ಉಳುಮೆ ಮಾಡದೆ ಹಾಳುಬಿಟ್ಟರೆ ಅಥವಾ ಗೇಣಿಯನ್ನು ಕೊಡುವುದಕ್ಕೆ ನಿರಾಕರಿಸಿದರೆ ಅಂಥ ಸಮಯಗಳಲ್ಲಿ ಗೇಣಿಯನ್ನು ಕಿತ್ತುಕೊಳ್ಳುವುದಕ್ಕೆ ಹಕ್ಕಿರಬೇಕೇ ವಿನಾ ಬಾಕಿ ಸಂದರ್ಭಗಳಲ್ಲಿ ಅವಕಾಶವೇ ಇರಕೂಡದು.

ಆಮೇಲೆ, ಟೆನೆನ್ಸಿ ಅವಧಿಯ ವಿಷಯದಲ್ಲಿ ಹತ್ತು ವರ್ಷ ಎಂದು ಹೇಳಿದ್ದಾರೆ. ಇದನ್ನೇಕೆ ಹೀಗೆ ಮೊಟಕು ಮಾಡಬೇಕಾಗಿತ್ತು ? ನಮ್ಮ ಕಡೆಗಳಲ್ಲಿ ಈಗಲೂ ವಂಶಪಾರಂಪರ್ಯ ಗೇಣಿ ಪದ್ಧತಿಯಿರಲಿಲ್ಲವೇ ?

Sri KADIDAL MANJAPPA.- That is not affected by this.

ಶ್ರೀ ಎಸ್. ಗೋಪಾಲಗೌಡ - ಹೌದು, ಹೌದು ಹಾಗೆಯೇ ಅಲ್ಲಿನ Weights ಮತ್ತು measures ಕೂಡ affect ಆಗಿಲ್ಲ.



ನಮ್ಮ ಕಡೆಯಲ್ಲಿ ಸರಿಯಾದ ಪತ್ರಗಳ ಆಧಾರದ ಮೇಲೆ ಈ ರೀತಿಯಾಗಿ ವಂಶಪಾರಂಪರ್ಯವಾಗಿ ಷಿಕ್ಮಿಗಳು ರೂಢಿಸಿಕೊಂಡು ಬರುತ್ತಿರುವ ಸಂದರ್ಭಗಳಿವೆ. ಈ ಬಿಲ್ಲಿನಲ್ಲಿಯೂ ಕೂಡ ಅಂಥ ಅವಕಾಶವನ್ನು ಕೊಡುವುದರಿಂದ ಏನು ತಪ್ಪಾಗುತ್ತದೆ ? ಬೇಕಾದರೆ ತಾವು ಹೇಳುವ ಪ್ರಕಾರ ಸ್ವಂತ ಸಾಗುವಳಿಗೆ 6 1/4 ಭಾಗ ಬಿಡಿಸಿಕೊಳ್ಳಬಹುದೆಂದು ಮಾಡಬಹುದು. ಆದರೆ, ಹತ್ತು ವರ್ಷ ಎಂದು ಒಂದು ನಿಗಧಿಮಾಡುವುದಕ್ಕೆ ಕಾರಣವಾದರೂ ಏನಿದೆ ? ರೈತನು ಹಾಗೆಯೇ ಮುಂದುವರಿದು ಕೊಂಡು ಹೋಗುವುದಕ್ಕೆ ಈ ಮಸೂದೆಯಲ್ಲಿ ಅದಷ್ಟು ಅವಕಾಶ ಮಾಡಿಕೊಡಬೇಕು. ಹೀಗೊಂದು ಅವಧಿ ಮಾಡಿಬಿಟ್ಟರೆ ಅದರ ಪರಿಣಾಮವೇನಾಗುತ್ತದೆಂಬುದನ್ನು ಯೋಚನೆ ಮಾಡಬೇಕು. ಆ ಅವಧಿಯಷ್ಟಕ್ಕೇ ಅವನ ಮನಸ್ಸು ಓಡುತ್ತಿದೆಯೇ ಹೊರತು ಶಾಶ್ವತವಾಗಿ ಯಾವ ಅಭಿವೃದ್ಧಿ ಕಾರ್ಯವನ್ನು ಮಾಡುವುದಕ್ಕೂ ಅವನು ಕೈಹಾಕುವುದಿಲ್ಲ. ಏಕೆಂದರೆ, ಹತ್ತು ವರ್ಷವಾದ ಮೇಲೆ ತನ್ನನ್ನು ಬಿಡಿಸಿ ಬಿಡಬಹುದೆಂಬ ಭಯ ಅವನಿಗೆ ಉಂಟಾಗುತ್ತದೆ. ಈ ಅಂಶವನ್ನು ತಾವು ಮುಖ್ಯವಾಗಿ ಪರಿಶೀಲನೆ ಮಾಡಿ ಆದಷ್ಟು ದೀರ್ಘಾವಧಿ tenancy ಯನ್ನು ಕೊಡುವುದಕ್ಕೆ ಈ ಮಸೂದೆಯಲ್ಲಿ ಅವಕಾಶ ಮಾಡಿಕೊಡಬೇಕೆಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ.

ಆ ಮೇಲೆ ಲಿಮಿಟೇಷನ್ ವಾಯಿದೆ ಎಂದು ಹೇಳಿ ಬಿಲ್ಲಿನ ಮೇಲೆ ಪುನರ್ವಿಮರ್ಶೆ ಅರ್ಜಿಗೆ ಅವಕಾಶ ಮಾಡಿಕೊಟ್ಟಿದೆ. ಈ ಅರ್ಜಿಯನ್ನು ಸಲ್ಲಿಸುವುದಕ್ಕೆ ಅರವತ್ತು ದಿನಗಳ ಅವಧಿಯನ್ನು ಕೊಟ್ಟಿದೆ. ಈ ಕಾಲಾವಧಿಯನ್ನು ಕೂಡ ಹೆಚ್ಚಿಸುವುದು ಬಹಳ ಅಗತ್ಯ, ತಿದ್ದುಪಡಿ ಮಾಡುವಾಗ ಇದನ್ನು ಕೈಬಿಟ್ಟಿರುವಂತೆ ಕಾಣುತ್ತದೆ. ಈಗಲಾದರೂ ಕಂದಾಯ ಮಂತ್ರಿಗಳು ಇದರ ಬಗ್ಗೆ ಗಮನ ಕೊಡಬೇಕೆಂದು ಹೇಳುತ್ತೇನೆ. ರೈತರಿಗೆ ಸ್ವಲ್ಪ ಜಾಸ್ತಿ ವಾಯಿದೆ ಕೊಡಬೇಕಾದ್ದು ಆವಶ್ಯಕ. ಮೂವತ್ತು ದಿವಸಗಳಲ್ಲಿ ಕೊಡಬೇಕು ಎಂದು ಹೇಳಿ ಲೆಕ್ಕ ಹಾಕಿ ಕೊಳ್ಳುವುದಕ್ಕೆ calendar ಇರುವುದಿಲ್ಲ. ಅವರೇನಿದ್ದರೂ ದೀಪಾವಳಿಯಿಂದ ದೀಪಾವಳಿಯವರೆಗೆ ಎಂದರೆ ನೆನಪಿಟ್ಟುಕೊಳ್ಳಬಹುದು. ಲಿಮಿಟೇಷನ್ ವಿಚಾರದಲ್ಲಿ ಆ ಆಕ್ಟಿನ 14, 15, 16ನೆಯ ವಿಧಿಗಳು ಅನ್ವಯಿಸುವುದಿಲ್ಲವೆಂದು ಹೇಳಿದ್ದೀರಿ. ಹಾಗೆಯೇ ಇನ್ನೂ ಇತರ ನಿಯಮಗಳೂ ಅನ್ವಯಿಸುವುದಿಲ್ಲವೆಂದು ಹೇಳಿದ್ದರೆ ರೈತನಿಗೆ ಮತ್ತಷ್ಟು ಅನುಕೂಲ ಮಾಡಿದ ಹಾಗಾಗುತ್ತಿತ್ತು.

ಈ ಮಸೂದೆ ಬಹುಶಃ ಪರಿಶೀಲನಾ ಸಮಿತಿಗೆ ಕಳುಹಿಸಲ್ಪಡಬಹುದೆಂದು ಕಾಣುತ್ತದೆ. ಏಕೆಂದರೆ, ಅನೇಕ ತಿದ್ದುಪಡಿಗಳನ್ನು ಮಾನ್ಯ ಸದಸ್ಯರು ಕಳುಹಿಸಿದ್ದಾರೆ. ಅವೆಲ್ಲಾ ಪರಿಶೀಲನೆಯಾಗಿ ಬಹುಶಃ, ಈ ಅಧಿವೇಶನದಲ್ಲೇ ಬರಲಾರದು. ಅದ್ದರಿಂದ ಈ ತಿದ್ದುಪಡಿಗಳನ್ನು ಪುನಃ ಆಮೂಲಾಗ್ರವಾಗಿ ಪರಿಶೀಲನೆಮಾಡಿ, ನಾನು ಕೆಲವು ಸೂಚನೆಗಳನ್ನು ಕೊಟ್ಟ ಪ್ರಕಾರ, ಅದರಲ್ಲೂ ಮುಖ್ಯವಾಗಿ 1/6 ಭಾಗದಷ್ಟು ಅಂಶ ಮಾತ್ರ ಜಮೀನ್ದಾರರಿಗೆ ಸಲ್ಲಬೇಕೆಂಬುದನ್ನು ಪರಿಗಣಿಸಲೇಬೇಕು. ಇದನ್ನು ಸರ್ಕಾರದವರು ನೋಟಿಫಿಕೇಷನ್ ಮುಖಾಂತರ ಮಾಡುತ್ತೇವೆಂದರೆ ಏನೂ ಪ್ರಯೋಜನವಿಲ್ಲ Weights and measures

ವಿಷಯದಲ್ಲೂ ಕೂಡ ನಾನು ಹೇಳಿದ ಲೋಪ ದೋಷಗಳನ್ನು ಮನಗಂಡು ಸರಿಯಾದ ರೀತಿಯಲ್ಲಿ ಜಾರಿಗೆ ಬರುವಂತೆ ಮಾಡಬೇಕು. ನಮ್ಮ ಸ್ನೇಹಿತರು ಕೆಲವರು ಈ ಸಮಸ್ಯೆ ತಮ್ಮ ಕಡೆ ಇಲ್ಲವೆಂದು ಹೇಳಿ ಈ ಮಸೂದೆಯನ್ನು ಹಿಂದಕ್ಕೆ ಹಾಕುವುದಾದರೆ, ಕೊನೆಯ ಪಕ್ಷ ನಮ್ಮ ಮಲೆನಾಡಿನಲ್ಲಾದರೂ ಇದನ್ನು ತಂದು ಅಲ್ಲಿನ ಸಮಸ್ಯೆಯನ್ನು ಪರಿಹರಿಸಲೆಂದು ಕೇಳಿಕೊಳ್ಳುತ್ತೇನೆ. ಇಲ್ಲದಿದ್ದರೆ eviction ಗಳಾಗಿ ಅಲ್ಲಿ ಬಹಳ ಅನ್ಯಾಯವಾಗುತ್ತದೆ. ರಶೀದಿಗಳನ್ನೇ ಕೊಟ್ಟಿರುವುದಿಲ್ಲ; ಐದು ವರ್ಷದ ಗೇಣಿ ಪತ್ರವನ್ನು ಯಾರೂ ಬರೆದು ಕೊಡುತ್ತಿಲ್ಲ. ಇದರಿಂದಾಗಿ ಬಹಳ ತೊಂದರೆಗೆ ಅವಕಾಶವಾಗಿದೆ. ಈ ಕಾನೂನು ಒಂದು ಸಾಮರಸ್ಯದಿಂದ ನಡೆದುಕೊಂಡು ಹೋಗುತ್ತಿದ್ದರೂ ವಿರಸಕ್ಕಿಟ್ಟುಕೊಂಡಿದೆ. ಇಂಥ ಸಂದರ್ಭದಲ್ಲಿ ಸರ್ಕಾರದವರು ಹೆಚ್ಚು ವಿಳಂಭಮಾಡದೆ ಈ ಕಾನೂನನ್ನು ಸರಿಯಾಗಿ ತಿದ್ದುಪಡಿ ಮಾಡಿ ಜಾರಿಗೆ ತರಬೇಕಾದ್ದು ಅವಶ್ಯಕ. ಆ ರೀತಿ ತಂದು ಈ ಹೊತ್ತು ರೈತರಿಗೆ ರಕ್ಷಣೆ ಕೊಟ್ಟು ಕ್ರಮವಾಗಿ ಮಧ್ಯವರ್ತಿ ಪದ್ಧತಿಯನ್ನು ತೊಡೆದುಹಾಕಿ, ಯಾರು ಉಳುಮೆ ಮಾಡುತ್ತಾನೋ ಅವನಿಗೆ ಬೆಳೆದ ಫಸಲಿನ ಮೇಲೆ ಪೂರ್ಣ ಅಧಿಕಾರ ಬರುವಂತೆ ಸರ್ಕಾರದವರು ಸರಿಯಾದ ಏರ್ಪಾಡನ್ನು ಮಾಡಬೇಕೆಂದು ನಾನು ಹೇಳುತ್ತೇನೆ.



## ಮೈಸೂರು (ಧಾರ್ಮಿಕ ಮತ್ತು ದತ್ತಿ) ಇನಾಂಗಳ ರದ್ದಾಯಿತಿ

## ಮಸೂದೆ 1954

ಸ್ವಾಮಿ, ಸಭೆಯ ಮುಂದೆ ಮಂಡಿಸಲ್ಪಟ್ಟಿರುವ ಮೈಸೂರು ರಿಲಿಜಿಯಸ್ ಅಂಡ್ ಚಾರಿಟಬಲ್ ಇನಾಂ ಅಬಾಲಿಷನ್ ಬಿಲ್ಲನ್ನು ಸ್ವಾಗತಿಸುತ್ತಾ ನಾನು ಕೆಲವು ವಿಷಯಗಳನ್ನು ಪ್ರಾಸ್ತಾಪಿಸಬೇಕೆಂದಿದ್ದೇನೆ. ಇನಾಂ ಮತ್ತು ಜಹಗೀರಿ ಮುಂತಾದ ಪದ್ಧತಿಗಳನ್ನು ಹೊಡೆದುಹಾಕಬೇಕು ಅನ್ನತಕ್ಕಂಥ ಅಭಿಪ್ರಾಯ ದೇಶದ ಮುಂದೆ ಬಂದು ಪ್ರಯತ್ನಗಳು ನಡೆದುದು ಇದೇ ಮೊದನೆಯ ಸಲವಲ್ಲ. ಈಗ ಅಂಕಿಅಂಶಗಳನ್ನು ನಾನು ಸ್ವಲ್ಪ ಸೂಚಿಸುತ್ತೇನೆ. ಮೇ 1915ರಲ್ಲಿ ಮತ್ತು 16-7-1918ರಲ್ಲಿ ಸಮಿತಿಗಳು ರಚನೆಯಾದುದುಂಟು. ಅದರಿಂದೇನೂ ಫಲಕಾರಿಯಾಗಿಲ್ಲವೆಂದು ಅನಂತರ 1925ರಲ್ಲಿ ಲ್ಯಾಂಡ್ ರೆವೆನ್ಯೂ ಕೋಡನ್ನು ತಿದ್ದುಪಡಿಮಾಡಿ ಕೆಲವು ಮಟ್ಟಿಗೆ ಹಕ್ಕು ಬಾಧ್ಯತೆಗಳನ್ನು ತಿದ್ದುಪಾಟು ಮಾಡಿದರು. ಅದು ಸಾಲದೆಂದು ಮತ್ತೆ 1932ರಲ್ಲಿ ಮತ್ತೊಂದು ಸಮಿತಿಯನ್ನು ರಚನೆ ಮಾಡಿದರು. ಇದಾದಮೇಲೆ 1948ರಲ್ಲಿ ಇತ್ತೀಚಿನ ಸಮಿತಿಯು ಶ್ರೀ ಗುಂಡಪ್ಪಗೌಡರ ಅಧ್ಯಕ್ಷತೆಯಲ್ಲಿ ನೇಮಕವಾಯಿತು. ಪೂರ್ಣವಾಗಿ ಭೂಸುಧಾರಣೆ ಮಾಡಬೇಕು. ಹಿಂದೆ ನಮ್ಮ ದೇಶದಲ್ಲಿ ಯಾವ ರೀತಿಯಿತ್ತು, ಅದನ್ನು ಈಗಿನ ಕಾಲಕ್ಕನುಗುಣವಾಗಿ ಯಾವ ರೀತಿಯಲ್ಲಿ ಮಾರ್ಪಾಟು ಮಾಡಬಹುದು ಎಂಬುದನ್ನು ಪರಿಶೀಲಿಸಲು ಈ ಸಮಿತಿಯು ರಚಿಸಲ್ಪಟ್ಟಿತು.

ಈ ಇನಾಂ ಬಗ್ಗೆ ನಮ್ಮ ದೇಶದಲ್ಲಿ ಮತ್ತು ಪರದೇಶದಲ್ಲಿ ಭೂಸ್ವಾಸ್ಥ ಯಾವ ರೀತಿ ಬೆಳೆದಿದೆ, ನಮ್ಮ ದೇಶದಲ್ಲಿ ಈ ಭೂಸ್ವಾಸ್ಥ ಈಗಿನ ಕಾಲಕ್ಕನುಸಾರವಾಗಿದೆಯೇ ಅಥವಾ ಇಲ್ಲವೇ ಎಂಬುದನ್ನು ಗುಂಡಪ್ಪಗೌಡರ ಸಮಿತಿಯ ವರದಿಯಲ್ಲಿ ಸೂಕ್ಷ್ಮವಾಗಿ ಹೇಳಿರುತ್ತಾರೆ. ಇಲ್ಲಿರತಕ್ಕಂಥ ಬದಲಾವಣೆ ಮೂಲಭೂತವಾಗಿದೆ; radical ಆಗಿದೆ. ಈಗಿನ ಕಾಲಕ್ಕೆ ಅನುಸಾರವಾಗಿದೆಯೆಂದು ಹೇಳುವುದಕ್ಕಾಗುವುದಿಲ್ಲ. ಇದನ್ನು ಉಪಯೋಗಿಸಿಕೊಳ್ಳುವುದರಲ್ಲಿ ಅಭ್ಯಂತರವಿಲ್ಲ. ಈಗ ನಮ್ಮ ಮುಂದೆ ಇರತಕ್ಕ ಬಿಲ್ಲಿಗೂ ಈಗಾಗಲೇ ಹಿನ್ನೆಲೆಯುಳ್ಳ ವಯಸ್ಸಾಗಿದೆ. ಅಲ್ಲದೆ ಇನಾಂ, ಜೋಡಿ, ಸರ್ವಮಾನ್ಯ. ಖಾಯಂಗುತ್ತ ಇವುಗಳನ್ನು ತೊಡೆದುಹಾಕುವುದಕ್ಕೆ ಸಂಬಂಧಿಸಿದ ಹಾಗೆ ಮಸೂದೆಯನ್ನು ತಂದಿದ್ದ ಅಂಶವನ್ನು ರೆವೆನ್ಯೂ ಸಚಿವರು ಈ ಮಸೂದೆಯನ್ನು ಮಂಡಿಸುತ್ತಾ ಸಭೆಯ ಗಮನಕ್ಕೆ ತಂದಿರುತ್ತಾರೆ. ಅದರೆ ಅದು ಯಾವ ಕಾರಣದಿಂದ ಶಾಸನ ಕಡತಕ್ಕೆ ಏರಲಿಲ್ಲವೋ ಗೊತ್ತಾಗಲಿಲ್ಲ. ಈ ಇನಾಂ ಮತ್ತು ಜಹಗೀರಿ ಪದ್ಧತಿಯಲ್ಲಿ ಏನು ಭೂಮಿ ಇತ್ತೋ ಅದನ್ನು ಎರಡು ಭಾಗ ಮಾಡಿ, ಎರಡು ಮಸೂದೆ ತರುವುದು ಸೂಕ್ತ ಎಂದು ಈಗ ಎರಡು ಮಸೂದೆಗಳನ್ನು ತರುವ ಏರ್ಪಾಡು ಆಯಿತು. ಈಗತಾನೇ ಇದೇ ಅಧಿವೇಶನದಲ್ಲಿ Personal and Miscellaneous Inams Abolition Bill ಬಗ್ಗೆ ಒಂದು ಕಾನೂನು ಅಂಗೀಕಾರವಾಗಿದೆ. ಈಗ ಆಗ ಬೇಕಾದದ್ದು ದೇವಾಲಯ ಮತ್ತು ಧರ್ಮಾದಾಯ ಇನಾಂಗಳನ್ನು ರದ್ದುಮಾಡತಕ್ಕಂಥ ಕೆಲಸ, ಈಗ ನಿನ್ನೆ ಒಂದು ವಿಷಯವನ್ನು ಸಭೆ ಗಮನಿಸಿದೆ. ಏನೆಂದರೆ, ಇದರ ಬಗ್ಗೆ ವಾದ ವಿವಾದ ಹೆಚ್ಚಾಗಿ ನಡೆದಿದೆ. ಇದನ್ನು ರದ್ದುಮಾಡಬೇಕು,

ಬೇಡವೇ ಎಂಬ ವಿಚಾರದಲ್ಲಿ ಭಿನ್ನಾಭಿಪ್ರಾಯವಿದೆ. ಈ ಮಸೂದೆಯ ಬಗ್ಗೆ ಜನಾಭಿಪ್ರಾಯವನ್ನು ಸಂಗ್ರಹಿಸುವುದಕ್ಕೆ ಇದನ್ನು ಪ್ರಸಾರ ಮಾಡಬೇಕೆಂಬ ಒಂದು ಅಭಿಪ್ರಾಯ ಹೊರಬಿದ್ದಿದೆ.

ದಿನಾಂಕ 31-3-1954:

ನನಗೆ ಅನ್ನಿಸುವುದು ಇಷ್ಟು : ಈ ವಿಷಯವನ್ನು ಒಂದೇ ಒಂದು ಸೇರಿಸಿ ನೋಡುವುದರಿಂದ ಈ ರೀತಿ ತಪ್ಪಭಿಪ್ರಾಯಕ್ಕೆ ತಪ್ಪು ಕಲ್ಪನೆಗೆ ಅವಕಾಶವಿದೆ ಅನ್ನುವುದು. ಈ ಬಿಲ್ಲು ಇತ್ತೀಚೆಗೆ ಬರುತ್ತಿದೆ ಅನ್ನುವ ಅಭಿಪ್ರಾಯ ಪ್ರಕಟವಾದ ಮೇಲೆ ಅನೇಕರು ಈ ಮಸೂದೆಯ ಬಗ್ಗೆ ಮಾತನಾಡಿರುವುದನ್ನು ಪತ್ರಿಕೆಗಳಲ್ಲಿ ಮತ್ತು ಮಾತನಾಡುವಾಗ, ಸಂಭಾಷಣೆ ಮಾಡುವಾಗ ಕೇಳಿದ್ದೇನೆ. ಇದರಲ್ಲಿ ಏನು ಒಂದು ಭಯ ಅಥವಾ ಸಂಶಯ ಕಂಡುಬರುತ್ತದೆ ಅಂದರೆ, ಒಂದು ಧಾರ್ಮಿಕ ಶ್ರದ್ಧೆಗೆ ಈ ಮಸೂದೆಯಿಂದ ಧಕ್ಕೆ ಬರುತ್ತಿದೆಯೆಂಬ ಭಯ. ಇದು ಬರುವುದಕ್ಕೆ ಅವಕಾಶವಿದೆ. ಇವೊತ್ತು ಕ್ರಮವಾಗಿ ಈ ಧಾರ್ಮಿಕ ಶ್ರದ್ಧೆ ಅಥವಾ ಹಿಂದಿನ ಒಂದು ಸಾಂಪತ್ತಿನ ವೈಭವ ಇದರಮೇಲೆ ನಿಂತುಕೊಂಡ ಹಾಗೆ ನಾನು ಕಾಣೆ. ಸಾಮಾನ್ಯವಾಗಿ ನಮ್ಮಲ್ಲಿ ಮೊದಲು ವಿಚಾರಕ್ಕೆ ಮಹತ್ವ ಕೋಡುತ್ತೇವೆ. ಇವೆರಡೂ ಅದಮೇಲೆ ಅವನಿಗೇ ಎಂದು ಕಟ್ಟಿದ್ದ ಸ್ಮಾರಕಕ್ಕೆ ಮಹತ್ವ ಕೊಡುತ್ತೇವೆ. ಇದು ಮನುಷ್ಯನ weakness ಇದಕ್ಕೆ ಉದಾಹರಣೆ ಕೊಡಬಹುದು. ಏಸು ಹೇಳಿದ, ಅಡಿದ ಮಾತಿಗೆ ಮೊದಲು ಪ್ರಾಧಾನ್ಯತೆ ಕೊಟ್ಟೆವು. ಅನಂತರ ಏಸುವನ್ನು ಶಿಲುಬೆಗೆ ಹಾಕಿದಮೇಲೆ ಅದಕ್ಕೆ ಮಹತ್ವ ಕೊಟ್ಟೆವು. ಇವೆರಡೂ ಅದಮೇಲೆ ಚರ್ಚಿಗೆ ಮಹತ್ವ ದೊರಕಿತ್ತು. ಹಾಗೆಯೇ ಮಹಾತ್ಮಾಗಾಂಧಿಯವರು ಹೇಳಿದ, ಅಡಿದ ಅಹಿಂಸಾ, ತ್ಯಾಗ, ಅಸ್ಪೃಶ್ಯತಾ ನಿವಾರಣೆ ಮಾಡಬೇಕೆಂಬ ಮಾತಿಗೆ ಬೆಲೆ ಕೊಟ್ಟೆವು. ಇವೊತ್ತು ಆ ಮಹಾತ್ಮಾಗಾಂಧಿಯ ಸ್ಮಾರಕಕ್ಕೆ ಬೆಲೆ ಕೊಟ್ಟು, ಬಿರ್ಲಾಭವನದಲ್ಲಿ ಆತನನ್ನು ಪೂಜಿಸೋಣವೆಂಬ ಅಭಿಪ್ರಾಯ ಮೂಡಿದೆ. ಹಾಗೆಯೇ ಈ ಶೃಂಗೇರಿ ಬಗ್ಗೆ ಹೇಳಿಕೊಂಡು ಬಂದರೆ, ಇದು ಒಂದು ಚಾರಿತ್ರಿಕ ಅಂಶವನ್ನು ಒಳಗೊಂಡಿದೆ. ಇವೊತ್ತು ಹೊಸದಾಗಿ ಇದು ಸ್ಥಾಪನೆ ಮಾಡಿದ್ದಲ್ಲ. ಪುರಾತನ ಕಾಲದಲ್ಲಿ ಇದು ಶೃಂಗಗಿರಿ ಅಗಿತ್ತೆಂದೂ, ಅಲ್ಲಿ ಋಷ್ಯ ಶೃಂಗರು ಇದ್ದರೆಂದೂ, ಕಾಲಕ್ರಮೇಣ ಅದು ಶೃಂಗೇರಿ ಆಯಿತೆಂದೂ ಪ್ರತೀತಿ ಇದೆ. ಹಿಂದಿನ ಕಾಲದಿಂದಲೂ ಈ ಸ್ಥಳ ಕ್ಷೇತ್ರ ಮಹತ್ವದ್ದು ಎಂದು ಕೇಳಿದ್ದೇವೆ. ಶಂಕರಾಚಾರ್ಯರ ಹೆಸರನ್ನು ನಮ್ಮ ದೇಶದಲ್ಲಿಯೂ ಹೊರಗಡೆಯೂ ಕೇಳದೇ ಇರತಕ್ಕವರಿಲ್ಲ. ಶಂಕರಾಚಾರ್ಯರು ಅಂಥ ಅಗಾಧವಾದ ಕೆಲಸವೇನು ಮಾಡಿದರೆಂದರೆ, ಅವರು ಅಧ್ಯಾತ್ಮಿಕದಲ್ಲಿ ಹೆಚ್ಚು ಅಧ್ಯಯನಮಾಡಿ ಒಂದು ತತ್ವವನ್ನು ಜಗತ್ತಿನ ಮುಂದೆ ಇಟ್ಟರು. ಅದೇ ಅದ್ವೈತ ತತ್ವ. ದೇವರು ಬೇರೆ ಅಲ್ಲ, ನಾನು ಬೇರೆ ಅಲ್ಲ. ಅಹಂಬ್ರಹ್ಮ-ಶಿವನು ನಾನೇ, ಬ್ರಹ್ಮನು ನಾನೇ ಎಂಬ ತತ್ವವನ್ನು ಇಡೀ ಜಗತ್ತಿನ ಮುಂದೆ ಇಟ್ಟರು. ಅವರು ದೈವಾಧೀನರಾದ ನಂತರ ಉಳಿದಿರುವುದು ಈ ಶೃಂಗೇರಿ ಪೀಠ. ಅವರ ಜನ್ಮ ಸಾರ್ಥಕ ಸೂಚನೆಯ ಕುರುಹಾಗಿ ಈ ಸ್ಮಾರಕ ಒಂದು ಉಳಿದಿದೆ. ಅನಂತರ ಈ ಮಹಾಪೀಠವನ್ನು ಉಳಿಸಿಕೊಂಡು ಬರಲು ವಿಜಯನಗರ ಸಾಮ್ರಾಜ್ಯದ ಕಾಲದಲ್ಲಿ ಕೆಲವು ಜೋಡಿ ಜಹಗೀರ ಬಂದವು. ಈ ವಿಚಾರವಾಗಿ ಈ ರೀತಿ ಇದೆ :



"This Jahgir was endowed to the Sri Sringeri Mutt by the Vijayanagar rulers in 1346 A.D. and has been recognised by the several succeeding lines of rules. As the Sri Sringeri Mutt is a religious and charitalbe institution we consider that the Jahgir may be dealt with on the lines suggested in paragraph 30 supra........"

ಇಲ್ಲಿ ಏನು ತಿಳಿಸಿರುತ್ತಾರೆಯೋ ಅದನ್ನು ಈ ಮಸೂದೆಯಲ್ಲಿ ಅಡಕಮಾಡಿರುತ್ತೀರೆಂದು ನಾನು ತಿಳಿಯುತ್ತೇನೆ. ಇದರಲ್ಲಿ ಹೀಗಿದೆ :

In paragraph 30 it is said -

"The same section i.e., section 38 of the Madras Estates (Abolition and Conversion into Ryotwari) Act. 1948 also provides that where the tasdik allowance so payable isless than the difference between the average net annual income derived by the institution or accruing to the institution from all sources in the estate or part during the five complete fasli years immediately preceding the abolition of the estates or part was held by the institution, and the income which the institution may be expected to derive from the lands in respect of which it is entitled to a ryotwari patta, the deficiency should be made good to the institution by Government."

ಇದಿಷ್ಟು ಶೃಂಗೇರಿ ವಿಚಾರಕ್ಕೆ ಸಂಬಂಧಿಸಿದ್ದಾಯಿತು. ಶ್ರೀ ಪಿ.ಆರ್. ರಾಮಯ್ಯನವರು ಈ ವಿಚಾರವಾಗಿ ಮಾತನಾಡುತ್ತಾ ಪ್ರಾಧಾನ್ಯತೆಯನ್ನು ಕೊಟ್ಟಿರುತ್ತಾರೆ. ನಿಜವಾಗಿಯೂ ಧಾರ್ಮಿಕ ಪತ್ರಕ್ಕೆ ಈ ಮಸೂದೆ ಅಡ್ಡಿ ಅತಂಕವನ್ನೇನಾದರೂ ಉಂಟುಮಾಡುತ್ತದೆಯೇ ಎಂಬುದು ಯೋಚಿಸಬೇಕಾದ ಪ್ರಶ್ನೆ. ಈ ವಿಚಾರವಾಗಿ ಕೆಲವು ಮಾನ್ಯ ಸದಸ್ಯರು ಕೋಮಿನ ದೃಷ್ಟಿಯಿಂದ ಮಾತನಾಡಿರುತ್ತಾರೆ. ಇದು ಬಹಳ ವಿಷಾದಕರವಾದುದು. ಮತದ ವಿಚಾರವೇ ಬೇರೆ, ಈ ಜೋಡಿ, ಇನಾಂ, ಭೂ ಸ್ವಾಸ್ಥ್ಯದ ವಿಚಾರವೇ ಬೇರೆ ಧರ್ಮದ ವಿಚಾರವನ್ನೇನೂ ನಾನು ಇಂದು ಪ್ರಶ್ನಿಸಬೇಕಾಗಿಲ್ಲ. ಯಾವ ಯಾವ ಕಾಲದಲ್ಲಿ ಯಾವ ಯಾವ ಮತ ತತ್ವದ ಬಗ್ಗೆ ಘರ್ಷಣೆ ನಡೆದಿದೆಯೆಂಬುದು ಚಾರಿತ್ರಿಕ ಅಂಶ.

ನಮ್ಮ ದೇಶದಲ್ಲಿ ಹೇಳಬೇಕೆಂದರೆ, ಜೈನ ಮಠ ಅದಮೇಲೆ ಬೌದ್ಧ ಮತ, ಅದರ ಜೊತೆಗೆ ಹಿಂದೂ ಮತ, ಅಮೇಲೆ ಬಂದ ಮಹಮ್ಮದೀಯ ಮತ, ಅನಂತರದಲ್ಲಿ ಕ್ರಿಶ್ಚಿಯನ್ ಮತ ಹೀಗೆ ನಾನಾಮತಗಳು ಹುಟ್ಟಿ ಅನೇಕ ಕಾಲ ಹೋರಾಟಮಾಡಿ, ಕೆಲವು ಬದುಕಿವೆ

ಕೆಲವು ಬದುಕಿಲ್ಲ. ಅದು ಬೇರೆ ಪ್ರಶ್ನೆ. ಅಂದ ಮಾತ್ರಕ್ಕೆ ನಾವುಗಳು ಅವುಗಳನ್ನು ಈ ಭೂವ್ಯವಸ್ಥೆಯ ಜೊತೆಯಲ್ಲಿ ಗಂಟು ಹಾಕಿ ಇನಾಂಗಳನ್ನು ತೊಡೆದುಹಾಕುವುದಕ್ಕೆ ಪ್ರಯತ್ನ ಪಡುತ್ತಿದ್ದೇವೆ. ಧರ್ಮಕ್ಕೆ ಗುರು ಇಟ್ಟು ಹೊಡೆಯುತ್ತಿದ್ದೇವೆ ಎಂದು ಹೇಳಿ ಅನ್ನುವುದರಲ್ಲಿ ಬಹಳವಾಗಿ ಸೆಂಟಿಮೆಂಟು ಇದೆ. ಅದು ಇರ್ರ್ಯಾಪನಲ್ಲೂ, ವಿಚಾರರಹಿತವಾದ ಒಂದು ಭಾವ ಅಥವಾ ಮೌಢ್ಯದಿಂದ ಉಂಟಾಗಿರತಕ್ಕ, ಮೌಢ್ಯದ ಮೇಲೆ ನಿಂತಿರತಕ್ಕ ಮಮತ; ಒಂದು ವ್ಯಾಮೋಹ ಎಂದು ಹೇಳಬೇಕು. ಈ ಮೂಢ ನಂಬಿಕೆಗೆ

ಒಂದು ಉದಾಹರಣೆ ಹೇಳುವುದಾದರೆ, ನಾನು ಇವೊತ್ತು ಈ ಸಭೆಯಲ್ಲಿ ಒಬ್ಬ ಚುನಾಯಿತ ಸದಸ್ಯನಾಗಿದ್ದೇನೆ; ನಾಳೆ ದಿನ ನನ್ನ ಅವಧಿ ಮುಗಿದು ಹೋದಮೇಲೆ ನಾನು ಇಲ್ಲಿಗೆ ಬಂದು ಹೊರಗಡೆ ನಿಂತುಕೊಂಡು ಬಹಳವಾಗಿ ಅತ್ತು ಕರೆದು, ನನ್ನನ್ನು ಒಳಕ್ಕೆ ಬಿಡಿರಿ, ಮೊದಲಿನಿಂದಲೂ ಆ ಸ್ಥಳದಲ್ಲಿ ನಾನು ಕುಳಿತು ಕೊಳ್ಳುತ್ತಾ ಇದ್ದೆ ಎಂದು ಹೇಳಿ ಪ್ರಲಾಪಮಾಡಿದರೆ ತಾವೆಲ್ಲಾ ಏನು ಅನ್ನುತ್ತೀರಿ ಸ್ವಾಮಿ ?

ಒಬ್ಬ ಸದಸ್ಯರು - ಅದೂ ಒಂದು ಸೆಂಟಿಮೆಂಟು, ಅನ್ನುತ್ತೀರಿ. ಹುಚ್ಚಾ ಹುಚ್ಚಾಸ್ಪತ್ರೆಗೆ ಸೇರಿಸಿ ಎಂದು ಜನ ಅನ್ನುವುದು ಗೊತ್ತೇ ಇದೆ. ಇದಕ್ಕೂ ಸಹ ಅದೇ ರೀತಿ ಬಂದು ಪೀಡಿಸುತ್ತಾ ಇದ್ದಾರೆ ಎಂದು ಅನ್ನುವುದು ಒಂದು ಬಹಳ ದೊಡ್ಡ ಮಾತಾಗುತ್ತದೆ. ಹೀಗೆ ಕಾನೂನಿನ ಒಂದು ವಿಷಯವನ್ನು ಪ್ರತಿಭಟನೆ ಮಾಡುವಾಗ ಅಥವಾ ಒಂದು ವಾದವನ್ನು ನಮ್ಮದು ಎಂದು ಹೇಳುವಾಗ ಅಥವಾ ಒಂದು ತತ್ವವನ್ನು ವೃದ್ಧಿಪಡಿಸುವಾಗ, ಬೆಳೆಸುವಾಗ, ವಿಚಾರ ಎಷ್ಟುಮಟ್ಟಿಗೆ ಇದೆ ಎಂಬುದು ಬಹಳ ಮುಖ್ಯವಾದ ವಿಷಯ. ಆದ್ದರಿಂದ ನನಗೆ ಕಾಣುವುದು ಈ ಇನಾಂ ಜೋಡಿ, ಜಹಗೀರಿ ವ್ಯವಸ್ಥೆಗಳನ್ನು ತೊಡೆದುಹಾಕುವುದು ಅತಿ ಮಹತ್ವದ ವಿಷಯ. ಯಾವತ್ತೂ ಚರ್ಚಿಸಬಹುದಾದ ಮತ್ತು ಚರ್ಚೆಮಾಡಿ ಒಂದು ತೀರ್ಮಾನಕ್ಕೆ ಬರದೇ ಇರತಕ್ಕಂಥ ಈ ಮತ, ದೇವರು ಮುಂತಾದ ಅಧ್ಯಾತ್ಮಿಕ ವಿಷಯಗಳನ್ನು ತೊಡೆದುಹಾಕಿ ಅದರ ಮೇಲೆ ಈ ಒಂದು ಬಿಲ್ಲಿನ ಮೆರಿಟ್ಸ್‌ನ್ನು ಕನ್‌ಸಿಡರ್ ಮಾಡುವುದಕ್ಕೆ ಅವಕಾಶವಾಗಬಾರದು. ಈ ರೀತಿಯಾದರೆ ನಾನೂ ಕೂಡ ಅನೇಕ ದಿವಸಗಳ ಕಾಲ ಹೀಗೆಯೇ ಚರ್ಚೆ ಮಾಡುತ್ತ ಮುಂದು ವರಿಸಿಕೊಂಡು ಹೋಗುವುದಕ್ಕೆ ತಯಾರಾಗಿದ್ದೇನೆ; ತಾವೂ ಅದೇರೀತಿ ಮಾಡಿಕೊಂಡು ಇದರ ತೀರ್ಮಾನವಾಗಬೇಕಾದರೆ ಕೊನೆಗೆ ಶಂಕರನ ಹತ್ತಿರವೇ ಹೋಗಬೇಕಾಗುತ್ತದೆ. ಹೊರಗಡೆ ಬೊಂಬಾಯಿ, ದೆಹಲಿ ಈ ಪ್ರದೇಶಗಳಿಂದ್ದೆಲ್ಲಾ ನಿರ್ಣಯಗಳಾಗಿ ಒಂದೊಂದನ್ನೂ ನೋಡಿದ್ದೇನೆ. ಈ ಇನಾಂ ರದ್ದಾಗುತ್ತದೆ ಎಂಬ ವಿಷಯದ ಮೇಲೆ ಅತಿ ದೊಡ್ಡವರು ಅನ್ನಿಸಿಕೊಳ್ಳವವರಿಂದ ಹಿಡಿದು ಸಾಮಾನ್ಯ ಮನುಷ್ಯರವರೆಗೂ ಕೇಳಿದ್ದೇನೆ. ಈ ರೀತಿ ಕೊಟ್ಟಿರತಕ್ಕ ಇನಾಂಗಳು ಹೋಗಿಬಿಟ್ಟರೆ ಧರ್ಮಕ್ಕೆ ಅಂತ್ಯ, ಕೊನೆ ಬಂದುಬಿಡುತ್ತದೆಯೋ ಏನೋ ಅನ್ನುವ ಭಯವನ್ನು ಇದರ ಜೊತೆಗೆ ಬೆರೆಸಿರುವುದು ಬಹಳ ದೊಡ್ಡ ತಪ್ಪು ಎಂದು ಹೇಳಬೇಕಾಗಿದೆ. ಅಂಥ ಶಂಕೆ ಅಥವಾ ಭಯಗಳಿಗೆ ಕಾರಣ ಇಲ್ಲ. ಇನಾಂ. ಜಹಗೀರಿ ಹೋದಮಾತ್ರಕ್ಕೇ ಆ ಉದಾಸ್ತವಾದ ತತ್ವಗಳು ಹೋಗುವುದಿಲ್ಲ, ಯಾರೂ ಭಯಪಡಬೇಕಾಗಿಲ್ಲ ಎಂದು ನಾನು ಒಂದೇ ಒಂದು ಮನವಿಯನ್ನು ಆ ಜನರಲ್ಲಿ ಮಾಡಿಕೊಳ್ಳಬೇಕಾಗಿದೆ.



ಇನ್ನು ಸ್ವಾಮಿ, ಇವುಗಳನ್ನು ತೊಡೆದುಹಾಕುವ ವಿಷಯದಲ್ಲಿ ಹೆಚ್ಚು ಕಾಲ ವಿಳಂಬವಾಗಿದೆ ಎಂದು ನಾನು ಹೇಳದೇ ವಿಧಿ ಇಲ್ಲ. ಯಾವ ರೀತಿ ವಿಳಂಬವೆಂದು ಹೇಳಿದರೆ, ಸ್ವಾತಂತ್ರ್ಯ ಬಂದ ಮೇಲೆ ತಾವು ಸಿದ್ಧಪಡಿಸಿಟ್ಟರತಕ್ಕ ಒಂದು ರಾಜ್ಯಾಂಗ ಇದೆ. ನಾನು ತಿಳಿದುಕೊಳ್ಳಬಲ್ಲೆ. ಆ ರಾಜ್ಯಾಂಗದ ಪ್ರಿಯಾಂಬಲ್‌ನಲ್ಲಿ ಏನು ಶಬ್ದವನ್ನು ಬರೆದಿದ್ದಾರೆ: equality, fraternity and liberty ಎಂಬುದಾಗಿ. ಆ ಶಬ್ದವಗಳನ್ನು ಅಕ್ಷರಶಃ ಮತ್ತು ಕಾಯಾವಾಚಾಮನಸಾ ಎಲ್ಲರೂ ಅನುಭವಕ್ಕೆ ತಂದುಕೊಂಡು ಆ ಶಬ್ದಗಳ ಅರ್ಥಕ್ಕೆ ಸರಿಯಾದ ಜೀವನವನ್ನು ರೂಢಿಸುವುದಕ್ಕೆ ಒಮ್ಮೆಗೇ ಸಾಧ್ಯವಾಗುವುದಿಲ್ಲ. ಅದನ್ನು ನಾನು ಅರ್ಥ ಮಾಡಿಕೊಳ್ಳಬಲ್ಲೆ. ಆದರೆ ಆ ರೀತಿಯಾದ ಒಂದು ಸಮಾನತೆಯ ಸಮಾಜವನ್ನು, ಒಂದು ಭ್ರಾತೃತ್ವ ಇರತಕ್ಕ ಸಮಾಜವನ್ನು, ಆ ಮಾತಿನಲ್ಲಿ ಬರತಕ್ಕ ಒಂದು ಸ್ವತಂತ್ರವಾಗಿರತಕ್ಕ ಸಮಾಜವನ್ನು ರಚನೆ ಮಾಡುವುದಕ್ಕೆ ಜವಾಬ್ದಾರಿಯನ್ನು ಹೊತ್ತಿರತಕ್ಕವರು ಏನೇನು ಪ್ರಯತ್ನಗಳನ್ನು ಮಾಡಿದ್ದೀರಿ, ಮಾಡುತ್ತಾ ಇದ್ದೀರಿ ಎನ್ನುವುದು ಬಹಳ ಮುಖ್ಯವಾದ ಪ್ರಶ್ನೆ. ಅದನ್ನು ನೋಡಿದರೆ ಈ ಬಿಲ್ಲು ತಮಗೆ ಒಂದು ಸಾಕ್ಷಿ ಹೇಳತಕ್ಕದ್ದಾಗಿದೆ; ಬಹಳ ವಿಳಂಬ ಮಾಡಿದ್ದೀರಿ ಎಂಬುದನ್ನು ತೋರಿಸುತ್ತದೆ. ಮನಸ್ಸಿತ್ತೋ ಇಲ್ಲವೋ ಎಂಬುದನ್ನು ಪ್ರಶ್ನೆಮಾಡಿ ನೋಡಬೇಕಾಗಿಲ್ಲ. ರೈತರನ್ನು ರಕ್ಷಣೆ ಮಾಡಬೇಕು, ಎಲ್ಲರಿಗೂ ಸಮಾನವಾದ ಹಕ್ಕುಬಾಧ್ಯತೆಗಳನ್ನು ಕಲ್ಪಿಸಿಕೊಡಬೇಕೆಂಬುದೇ ನಮ್ಮ ಉದ್ದೇಶ, ರಾಜ್ಯಾಂಗದ ವಿಧಿಗಳನ್ನು ಚಾಚೂ ತಪ್ಪದೆ ಅನುಸರಿಸುವುದೇ ನಮ್ಮ ಉದ್ದೇಶ ಎಂದು ಹೇಳುತ್ತೀರಿ. ಆದರೆ ಅವೊತ್ತು ನೀವುಗಳ ಕೊಟ್ಟ ಕಾರಣಗಳನ್ನೇ ಕೊಟ್ಟರೂ ಬಹುಶಃ ನೀವು ತಪ್ಪದೆ ಇರುವುದಿಲ್ಲ - ಈ ಇನಾಂಗಳನ್ನೂ ಕಿತ್ತುಕೊಳ್ಳಬೇಕಾಗಿಲ್ಲ ಎಂದು ವಾದ ಹೂಡುತ್ತಾ ಹೋದರೆ ನನಗಾಗಲಿ ಮತ್ತೊಬ್ಬರಿಗಾಗಲಿ ಕಾಲ ನಿಂತುಕೊಳ್ಳುವುದಿಲ್ಲ. ಅದೇ ರೀತಿ ಒಂದು ದೊಡ್ಡ ಸೈನ್ಯ ಮುತ್ತಿಗೆ ಹಾಕುವುದಕ್ಕೆ ಬಂದಾಗ ಇನಾಂ ಅಬಾಲಿಶ್ ಮಾಡುತ್ತಾರೆ, ಸ್ವಲ್ಪ ತಡೆಯಿರಿ ಎಂದರೆ ತಡೆಯುವುದಿಲ್ಲ. ಎಷ್ಟೋ ಜನ ಇತ್ತೀಚಿನ ಹೋರಾಟದಲ್ಲಿ Actual ಆಗಿ ಸುಮ್ಮನೆ ಹೋರಾಟ ಮಾಡಿದರು. ಅದು ಬೇರೆ ಪ್ರಶ್ನೆ: ತಾವೂ ಅದೇರೀತಿ ಮಾಡಿಕೊಂಡು ಇದರ ತೀರ್ಮಾನವಾಗಬೇಕಾದರೆ ಕೊನೆಯಲ್ಲಿ ಆ ರೀತಿ ಹೋರಾಟ ಮಾಡಿದವರಲ್ಲಿ ಅನೇಕರು ಮನೆಗೆ ಹೋಗಲಿಲ್ಲ. ಹಾಗಾದರೆ ಇನ್ನೆಲ್ಲಿಗೆ ಹೋದರು? ಜೈಲಿಗೆ ಹೋದರು, ನಮ್ಮ ಸರ್ಕಾರ ಬಂದು ನಮಗೆ ಹಿತಯುತವಾದ ಒಂದಷ್ಟು ಕೆಲಸ ಮಾಡುತ್ತದೆ ಎನ್ನುವ ಒಂದು ಆಕಾಂಕ್ಷೆಯನ್ನು ತಮ್ಮಲ್ಲಿ ಇಟ್ಟಿದಂಥ ಆ ಜನರ ಗತಿ ಏನಾಯಿತು ಎಂಬುದನ್ನು ತಾವು ಸ್ವಲ್ಪ ಆಗಿಂದಾಗ್ಗೆ ಯೋಚನೆ ಮಾಡುವುದು ಒಳ್ಳೆಯದು, ತಮ್ಮ ಗಮನ ಅವರ ಕಡೆಗೆ ಹೋಗುವುದು ಒಳ್ಳೆಯದು. ಆ ಜನರು ಯಾರಿದ್ದಾರೆ, ಅವರ ಪಾಡು ಏನಾಗಿದೆ. ಅವರಿಗೇನಾದರೂ ನೀವು ಸಹಾಯ ಮಾಡಿದ್ದೀರಾ ಎಂಬುದನ್ನು ನೋಡಿದರೆ, ಬಹಳ ವಿಷಾದದಿಂದ ಹೇಳಬೇಕಾಗುತ್ತದೆ, ಅನೇಕರು ಅದೇ ನಿರೀಕ್ಷಣೆಯಲ್ಲಿ ಸತ್ತುಹೋದರು. ಇದು ಹೇಗಿದೆ ಎಂದರೆ ವರ್ಡ್ಸ್ ವರ್ತ್ ಕವಿ ಮೈಕೇಲ್ ಎಂಬ ಕಥೆಯನ್ನು ಬರೆದಿದ್ದಾನೆ. ಅದರಲ್ಲಿ ಮೈಕೇಲ್ ಅನ್ನುವವನು ತನ್ನ ತಂದೆಗೆ, ಪೇಟೆಗೆ ಹೋಗುತ್ತೇನೆ, ಕೆಲವು ದಿವಸ ಅಲ್ಲಿದ್ದು ಬರುತ್ತೇನೆ, ಮನೆಗೆ ಬೇಕಾದ ಸಾಮಾನು ತರುತ್ತೇನೆ ಎಂದು ಹೇಳಿ ಹೋಗಿರುತ್ತಾನೆ.

ಬಹಳ ದಿವಸ ಆಯಿತು. ಅವನು ವಾಪಸು ಬರುವುದೇ ಇಲ್ಲ. ಅವನ ನಿರೀಕ್ಷಣೆಯನ್ನೇ ಮಾಡುತ್ತಾ ಹೊಟ್ಟೆಗೆ ಇಲ್ಲದೆ ಈ ಮುದುಕ ಸತ್ತುಹೋಗುತ್ತಾನೆ. ಅಂಥ ಸಂದರ್ಭಗಳು, ಉದಾಹರಣೆಗಳು ನಮ್ಮ ದೇಶದಲ್ಲಿ 1947ರಿಂದ ಈ ಚೆಗೆ ಬಹಳವಾಗಿ ಇದೆ. ಏಕೆಂದರೆ ನಿರಾಶೆಯಿಂದ ಬದುಕುವುದು ಒಂದು ರೀತಿ; ಬೆಳಿಗ್ಗೆಯಿಂದ ಕಷ್ಟಪಟ್ಟರೂ ಏನೂ ಪ್ರಯೋಜನವಿಲ್ಲವಲ್ಲ, ಎಂದು ಬದುಕುವುದು ಒಂದು ರೀತಿ. ಯಾವ ಆಶೆಯು. ಇಲ್ಲ ಎಂದು ಬದುಕುವವರಿಗೆ, ನಿರಾಶಾಮಯವಾದ ಜೀವನ ಹಾಗೆಯೇ ನಡೆದುಕೊಂಡು ಹೋಗಿ ನಿರುತ್ಸಾಹಿಗಳಾಗಿರುತ್ತಾರೆ. ಅವರನ್ನೂ ನೋಡಿ; ಅದೇ ಯಾರೋ ಬರುತ್ತಾರೆ. ಯಾರಿಂದಲೋ. ಅನುಕೂಲವಾಗುತ್ತದೆ ಎಂಬ ಒಂದು ಆಶೆಯನ್ನಿಟ್ಟುಕೊಂಡು ಬದುಕು ಮಾಡುವವರನ್ನೂ ನೋಡಿ. ಆರೀತಿ ಒಂದು ಆಶೆ ಈಡೇರದೇ ಹೋದಾಗ, ನಿರಾಶನಾದಾಗ ಅಂಥವನ ಜೀವನ ಕುಸಿದುಬೀಳುತ್ತದೆ. shock ಹೊಡೆಯುತ್ತದೆ.

ಇನ್ನೂ 50 ವರ್ಷಗಳು ಬದುಕಬೇಕೆಂಬ ಆಸೆಯಿರುವವರನು ನಿರಾಶೆಯಾದಾಗ ಸಾಯುತ್ತಾನೆ. ನಾನು ಹೇಳಿದಹಾಗೆ, 1915ನೆಯ ಇಸವಿಯಿಂದ ಜೋಡಿ, ಜಹಗೀರಿ, ಇನಾಂ ಮುಂತಾದುವುಗಳಲ್ಲಿರುವ ರೈತರು, ಬಂಧಮುಕ್ತಿಯಾಗುತ್ತದೆ, ಸರ್ಕಾರವೇನಾದರೂ ಮಾಡಿ ಹಕ್ಕುಬಾದ್ಯತೆ ಕೊಡಿಸುತ್ತಾರಂತೆ ಎಂದು ನಿರೀಕ್ಷೆ ಮಾಡಿರುವವರು ಎಷ್ಟೋ ಜನ ಅದು ಈಡೇರದೆ ಸತ್ತುಹೋಗಿದ್ದಾರೆ; ಇದಾಗಬಾರದು. ಇದಕ್ಕೆ ಆಶ್ವಾಸನೆಗಳನ್ನು ಕೊಡದೆ ಹೊದರೆ, ಈ ಕೆಲಸ ಮಾಡುತ್ತೇವೆಂದು ಹೇಳದೇ ಹೋದರೆ ಪರಮ ಸುಖ. ಹೇಳದಿದ್ದರೆ ಯಾವ ತರಹದ ಸರ್ಕಾರ ಏನು ಕೆಲಸ ಮಾಡುತ್ತದೆಯೆಂಬುದು ಸ್ಪಷ್ಟವಾಗಿರುವುದಿಲ್ಲ. ಇಂಥಾದ್ದು ಮಾಡುತ್ತೇವೆ, ಇಂಥಾದ್ದು ಮಾಡುವುದಿಲ್ಲ ಎಂದು ಐದಾರು ವಿಷಯ ಹೇಳಿದರೆ ನಿಮ್ಮನ್ನು ಕಾಡಿಸುವುದಿಲ್ಲ, ಜಮೀನು ಮಂಜೂರು ಮಾಡುತ್ತೇವೆ, ಈ ದಿವಸ ನಮ್ಮ ಮನೆಗೆ ಬಾ ಎಂದು ಹೇಳಿ ಕೊಡದೆ ಕಾಡಿಸುವುದಕ್ಕಿಂತ ನಮ್ಮಲ್ಲಿ ಈಗ ಭೂಮಿಯಿಲ್ಲವೆಂದು ಬೋರ್ಡ್ ಹಾಕಿ ಬಿಟ್ಟರೆ ಆ ಜೇಟಿ ನೋಡಿ ಹೊರಟುಹೋಗುತ್ತಾರೆ, ಅದನ್ನು ನೋಡಿದಮೇಲೆ ಮಾತನಾಡುವುದಕ್ಕೆ ಕೂಡ ಅವಕಾಶವಿರುವುದಿಲ್ಲ.

**ದಿನಾಂಕ: 1-4-1954**

(ಸಾಗರ-ಹೊಸನಗರ).- ಸ್ವಾಮಿ, ಈ ದೇವಾದಾಯ ಮತ್ತು ಧರ್ಮಾದಾಯ ಇನಾಂಗಳನ್ನು ರದ್ದುಮಾಡುವ ಮಸೂದೆಯ ಬಗ್ಗೆ ನಿನ್ನೆ ಮಾತನಾಡುತ್ತಾ ನಾನು ಸಂಕ್ಷೇಪವಾಗಿ ಈ ಇನಾಂಗಳ ಇತಿಹಾಸ ಮತ್ತು ಇವುಗಳನ್ನು ತೊಡೆದು ಹಾಕಲು ಸಂಸ್ಥಾನದಲ್ಲಿ ಮಾಡಿರತಕ್ಕಂಥ ಸಂಪ್ರದಾಯಗಳನ್ನು ಸ್ಥೂಲವಾಗಿವಿವರಿಸಿ, ಈ ಇನಾಂ, ಜೋಡಿ, ಇವುಗಳ ರದ್ದಿಯಾತಿಯಿಂದ ಯಾವ ಧರ್ಮಕ್ಕೂ, ಚ್ಯುತಿ ಬಂದಿಲ್ಲ ಎಂಬ ವಿಷಯವನ್ನು ಪ್ರಸ್ತಾಪಿಸಿದೆ. ಈಗ ಮುಂದುವರಿದು ಈ ಮಸೂದೆಯ ಅಗತ್ಯದ ಬಗ್ಗೆ ಒಂದೆರಡುಮಾತುಗಳನ್ನು ಹೇಳಬೇಕಾಗಿದೆ. ಈ ಜೋಡಿ, ಇನಾಂ ಪದ್ಧತಿಗಳು ಆಗಿ ಹೋಗಿರತಕ್ಕಂಥ ಹಳೆಯ ಕಾಲದ ಆರ್ಥಿಕ ಸಾಮಾಜಿಕ ಮತ್ತು ರಾಜಕೀಯ ರೀತಿ ನೀತಿಗಳನ್ನು ಪ್ರತಿಬಿಂಬಿಸತಕ್ಕದಾಗಿದೆ.



ಆರ್ಥಿಕ ದೃಷ್ಟಿಯಿಂದ ನೋಡಿದರೆ ಇವು feudalistic ಪದ್ಧತಿಗೆ ಅನುಸಾರವಾಗಿದೆ. ಇವೊತ್ತು ರಾಜಕೀಯ ಸ್ವಾತಂತ್ರ್ಯವನ್ನು ಗಳಿಸಿಕೊಂಡನಂತರದಲ್ಲಿ ಆರ್ಥಿಕ ಮತ್ತು ಸಾಮಾಜಿಕ ಕ್ಷೇತ್ರದಲ್ಲಿ ಸಮಾನತೆ ಮತ್ತು ಸ್ವಾತಂತ್ರ್ಯವನ್ನು ಪಡೆದುಕೊಳ್ಳುವುದಕ್ಕೆ ವ್ಯವಸ್ಥೆ ಮಾಡಬೇಕಾಗಿದೆ. ಈ ದಿಕ್ಕಿನಲ್ಲಿ ಅನೇಕ ಕ್ರಾಂತಿಕಾರಕ ಬದಲಾವಣೆಗಳು ನಡೆಯಬೇಕಾಗಿವೆ. ಈ ಸಂದರ್ಭದಲ್ಲಿ ಸಾಮಾನ್ಯವಾಗಿ vested interest ಗಳು ಪರಿವರ್ತನೆಯಾಗುತ್ತವೆಯೆಂಬುದು ಗೊತ್ತಿದ್ದರೂ ಆ ಬದಲಾವಣೆಗೆ ವಿರುದ್ಧವಾಗಿ ತಮ್ಮ ಎಲ್ಲ ಶಕ್ತಿಯನ್ನು ಸಂಗ್ರಹಿಸಿ ಹೋರಾಡತಕ್ಕದ್ದು ಸಹಜವಾಗಿದೆ.

ಇದೇ ರೀತಿ ಇಂದು ನಮ್ಮ ದೇಶದಲ್ಲಿರತಕ್ಕಂಥ ಬಂಡವಾಳ ಶಾಯಿಯ ಆರ್ಥಿಕ ಪದ್ಧತಿಯನ್ನು ಬದಲಾಯಿಸುವುದಕ್ಕೆ ಹೋದಾಗ, ಈ ಪದ್ಧತಿಯ ಇಂತಹ ಒಂದು ಬದಲಾವಣೆಯನ್ನು ತೀವ್ರವಾಗಿ ಪ್ರತಿಭಟಿಸುತ್ತದೆ. ಇದು ಆಶ್ಚರ್ಯವಾದ ವಿಷಯವೇನೂ ಅಲ್ಲ. ಇದೇ ರೀತಿ ನಾವು ನೂತನ ಯುಗದ ಆರಂಭದಲ್ಲಿದ್ದೇವೆಂದು ತಿಳಿದುಕೊಂಡಿದ್ದರೂ ಸಹ ನೂತನ ಯುಗಕ್ಕೆ ಎಲ್ಲರ ಸ್ವಾಗತವೂ ಇದೆ ಎಂದು ಭಾವಿಸುವುದಕ್ಕಾಗುವುದಿಲ್ಲ. ಎಷ್ಟೋ ಜನರು ಹಳೆಯ ಪದ್ಧತಿಯ ಪೋಷಣೆಯಲ್ಲಿಯೇ ಬೆಳೆದುಕೊಂಡು ಬಂದಿರತಕ್ಕಂಥವರು ಸಾಮಾನ್ಯವಾಗಿ ಈ ಬದಲಾವಣೆಯನ್ನು ವಿರೋಧಿಸುವುದು ಸಹಜವಾಗಿದೆ. ಆದುದರಿಂದಲೇ ನಾವು ಈ ದಿನ ಈ ಮಾನ್ಯಸಭೆಯ ಒಳಗಡೆ ಮತ್ತು ಹೊರಗಡೆ, ದೇಶದಲ್ಲಿ ಈ ಪದ್ಧತಿ ಹೋದರೆ ಇದರಿಂದ ಹಾನಿ ಇದೆ ಎಂದು ಹೇಳುವ ಎಚ್ಚರಿಕೆ ಮಾತು ಕೇಳಿ ಬರುತ್ತಿದೆ; ಆದರೆ ಇಲ್ಲಿ ನಿಜವಾಗಿಯೂ ಕೆಲವು ಮೂಲಭೂತ ವಿಷಯಗಳನ್ನು ನಾನು ಚರ್ಚೆಮಾಡಿ ಮುಂದುವರಿಯುವುದೇ ಒಳಿತು ಎಂದು ನನಗೆನ್ನಿಸುತ್ತದೆ. ಯಾವಾಗಲೂ ಜ್ಞಾನಿಗಳೊಬ್ಬರು ಹೇಳಿರುವ ಹಾಗೆ " Old order Changeth yielding place to new" ಹಳೆಯ ಪದ್ಧತಿ ಹೊಸ ಪದ್ಧತಿಗೆ ಅವಕಾಶ ಮಾಡಿಕೊಟ್ಟು ತಾನೇ ಬದಲಾವಣೆ ಹೊಂದುತ್ತದೆ. ಹಾಗೆ ಇಂದು ನಾವು ಒಂದು ಪರ್ವಕಾಲದಲ್ಲಿದ್ದೇವೆ. ಹಳತು ಹೊಸತನದ ರೂಪವನ್ನು, ಪರಿವರ್ತನೆಯನ್ನು ಪಡೆಯಬೇಕಾಗಿದೆ. ನಾವು ನಮ್ಮ ದೃಷ್ಟಿ ಕೋಣವನ್ನು ಯುಗದ ಕೂಗಿಗೆ, ಯುಗದ ಬದಲಾವಣೆಗೆ ಹೊಂದಿಸಿಕೊಳ್ಳದೆ ಹೋದರೆ, ನಮ್ಮ ಮನೋಭಾವವನ್ನು ಬದಲಾಯಿಸಿಕೊಳ್ಳದೆ ಹೋದರೆ ಆಗ ಆ ಬದಲಾವಣೆ ಅಷ್ಟು ಸುಖಮಯವಾಗಿ ಆಗಲಾರದು. ಇದಕ್ಕೆ ನಾನು ಉದಾಹರಣೆ ಕೊಡಬೇಕೆಂದರೆ, ಸಾಮಾನ್ಯ ರೀತಿಯ ಹೆರಿಗೆ ಆಗುವುದಿಲ್ಲ. ಶಸ್ತ್ರ ಚಿಕಿತ್ಸೆ ಯಿಂದ ಮಾಡಿಸಿದರೆ ಹೆರಿಗೆಯಂತಾಗುತ್ತದೆ.

ಶ್ರೀ ಕೆ. ಹನುಮಂತಯ್ಯ (ಮುಖ್ಯಮಂತ್ರಿಗಳು).- ಈ ವಿಚಾರದಲ್ಲಿ ನಿಮಗೆ ಸಾಕಾದಷ್ಟು ಅನುಭವವಿಲ್ಲ.

ಶ್ರೀ ಎಸ್. ಗೋಪಾಲಗೌಡ.- ಆದೇನಿಲ್ಲ; ನಿಮಗೂ ನೇರವಾದ ಅನುಭವವಿಲ್ಲ, ಇದನ್ನೇ ನಾವು ಕ್ರಾಂತಿ ಎನ್ನುವುದು. ಮೊದಲೂ ಮಾನಸಿಕ ಕ್ರಾಂತಿ ಆಗಿ, ಪರಸ್ಪರ ವಿಮರ್ಶೆಯಿಂದ ಬದಲಾವಣೆ ಆಗಬೇಕು. ಆರೀತಿ ಯಾದರೆ ಶಾಂತಿಯುತವಾದ ಕ್ರಾಂತಿ ಆಗುತ್ತದೆ. "ಕ್ರಾಂತಿ" ಎಂಬ ಶಬ್ದ ಇರತಕ್ಕ ಕಡೆ ರಕ್ತ ಹರಿಯಬೇಕೆಂಬುದು ಒಂದು ಶಾಶ್ವತ ನಿಯಮವಲ್ಲ. ಕ್ರಾಂತಿಯನ್ನು ನಾವು ದಿನನಿತ್ಯದಲ್ಲಿ ಕಾಣುತ್ತೇವೆ. ಹೀಗೆಯೇ ಪ್ರತಿಭಾವವೂ, ಪ್ರತಿ ವ್ಯವಸ್ಥೆಯೂ ಕಾಲಕಾಲಕ್ಕೆ ಪರಿವರ್ತನೆಗೆ ಒಳಗಾಗಿದೆ. ಅಂದಮೇಲೆ ಆಮೇಲೆ ಇಂಥ ಪರಿವರ್ತನೆಯನ್ನು ಇಂಥ ವಿಕಾಸವನ್ನು ನಾವು ತಡೆಗಟ್ಟುವುದಕ್ಕೆ ಸಮರ್ಥರಾಗುವುದಿಲ್ಲ. ಒಂದು ವೇಳೆ ತಡಗಟ್ಟಲು ಹೋದರೆ ಅವರು ಆ ಕಾರ್ಯದಲ್ಲಿ ವಿಫಲರಾಗುತ್ತಾರೆ. ಇಂಥ ಒಂದು ಯುಗದ ಬದಲಾವಣೆಯನ್ನು ಯಾರೂ ತಡೆಗಟ್ಟಲು ಶಕ್ಯವಿಲ್ಲ. ಹಾಗೆ ತಡೆಯುವುದಕ್ಕೆ ಹೋದರೆ ಘರ್ಷಣೆ ಹೆಚ್ಚಾಗಿ, ಉತ್ಕ್ರಾಂತಿ ಆಗಬಹುದು, ರಕ್ತದ ಕ್ರಾಂತಿ ಆಗಬಹುದು. ಈಗಲೂ ಸಹ ನಾವು ಧರ್ಮದ ವಿಷಯದಲ್ಲಿ ನೋಡಿದರೂ ಕೂಡ ಇವೊತ್ತು ನನಗೆ ಅರ್ಥವಾಗಿರುವ ಹಾಗೆ ಅನೇಕ ಧರ್ಮಗಳು ಕಲುಷಿತವಾಗಬಹುದು ಎಂದು ಹೇಳಬಹುದು. ಕಾರಣವೇನೆಂದು ನೋಡಿದರೆ, ಧರ್ಮ ಯಾವತ್ತೂ ಒಂದೇ ಆಗಿರುತ್ತದೆ.

ಧರ್ಮ, ಅದು ಸರ್ವಕಾಲಕ್ಕೂ ಉಳಿಯತಕ್ಕದ್ದೂ. ಆದರೆ ಮನುಷ್ಯ ತನ್ನ ಆಚರಣೆಯಲ್ಲಿ ಯಥಾನುಶಕ್ತಿ ಆಚರಿಸುತ್ತೇನೆ ಎಂದು ಹೇಳಿ ಕ್ರಮ ಕ್ರಮವಾಗಿ ಅದರ ಕಷ್ಟವಾದ ಭಾಗಗಳನ್ನು ಬಿಡುತ್ತಾ ಬರುತ್ತಾನೆ. ಅದು ಅಷ್ಟರಮಟ್ಟಿಗೆ ಕಲುಷಿತವಾಗುತ್ತದೆ ಯಾವತ್ತು ನಮ್ಮ ಆಚಾರದಲ್ಲಿ ಪ್ರತಿನಿತ್ಯದ ಆಚಾರದಲ್ಲಿ ವಿಚಾರ ಶೂನ್ಯವಾಗುತ್ತಾ ಹೋಗುತ್ತದೆಯೋ ಅಂದಿಗೆ ಆ·ಆಚಾರ ಗೊಡ್ಡು ಆಚಾರವಾಗುತ್ತದೆ. ಅದರ ಹಿಂದೆ ಇರತಕ್ಕ ಭಾವ ಮೂಡಭಾವನೆಯಾಗುತ್ತದೆ. ಹೀಗೆ ನಾವು ಅನೇಕ ವರ್ಷಗಳಿಂದ ಆಚರಣೆಯಲ್ಲಿ ಅನೇಕ ಮುಖ್ಯವಾದ ಅಂಶಗಳನ್ನು ಕೈಬಿಡುತ್ತಾ ಬಂದು ಇವೊತ್ತು ನಮ್ಮ ಆಚಾರದಲ್ಲಿ ಎಂದು ಶುಷ್ಕತೆ, ತಿರುಳಿಲ್ಲದಿರುವಿಕೆ ಮತ್ತು ಮೌಢ್ಯದಿಂದ ತುಂಬಿರುವ ಭಾವಾರ್ಥವನ್ನು ಇಟ್ಟುಕೊಂಡಿರುವುದನ್ನು ನಾವು ನೋಡುತ್ತಾ ಇದ್ದೇವೆ. ವಿಚಾರರಹಿತವಾದ ಆಚಾರವನ್ನು ಇವೊತ್ತು ನಾವು ಅನುಕರಿಸುತ್ತಾ ಇದ್ದೇವೆ. ನಡವಳಿಕೆಯಲ್ಲಿ ಇಟ್ಟುಕೊಂಡು ಇದ್ದೇವೆ. ಒಂದು ಉದಾಹರಣೆಯುನ್ನು ಕೊಡುವುದಾದರೆ, ಈ ಶೃಂಗೇರಿಯ ಉದಾಹರಣೆಯನ್ನೇ ಕೊಡುತ್ತೇನೆ. ಶ್ರೀಮಾನ್ ಹನುಮಂತಯ್ಯನವರು ಮಾತನಾಡುತ್ತಾ ಮೊನ್ನೆ ಒಂದು ಸಂದರ್ಭದಲ್ಲಿ ಉಡುಪಿಯ ಉದಾಹರಣೆ, ಮೇಲೂಕೋಟೆಯ ಉದಾಹರಣೆ ಹೇಳಿದರು. ಹಿಂದೂಧರ್ಮದಲ್ಲಿ " ಸರ್ವೇಜನಾ: ಸುಖಿನೋಭವಂತ್ತು" ಎಂದು ಹೇಳಿ ಎಲ್ಲರೂ ಸುಖವಾಗಿರಬೇಕು, ಅದು ಉದಾತ್ತವಾದ ತತ್ವ ಎಂಬ ಒಂದು ವಾಕ್ಯದ ಮೇಲೆ ನಾವು ಸಾಮಾನ್ಯವಾಗಿ ನಮ್ಮ ಸಂಸತಿಯನ್ನು ಜಗತ್ತಿನಲ್ಲಿ ಎತ್ತು ಹಿಡಿಯತಕ್ಕದ್ದೀನಿದೆಯೋ, ಪರಮತಸಹಿಷ್ಣುತೆ ಮತ್ತು ಎಲ್ಲಾ ವ್ಯಕ್ತಿಗಳನ್ನು ಸಮಾನತೆಯಿಂದ ಕಾಣುತ್ತೇವೆ ಎಂಬ ವಾದ, ಮಾತು, ಏನಿದೆಯೋ ಅದು ಆಚರಣಯಲ್ಲಿಲ್ಲದೆ, ಒಂದು



ವಿಚಾರರಹಿತವಾದ ಆಚರಣೆ, ಗೊಡ್ಡು ಆಚಾರ ನಮ್ಮಲ್ಲಿ ಬಂದಿದೆ. ಆದ್ದರಿಂದಲೇ ಇಂದು ಈ ಧರ್ಮ ಕಲುಷಿತವಾಗಿದೆ ಎಂದು ಹೇಳುತ್ತೇವೆ. ಅದಕ್ಕೆ ನಾನು ಉದಾಹರಣೆ ಕೊಡಬೇಕಾದರೆ ನಾವು ಮೊದಲೂ ತತ್ವಕ್ಕೆ ಮಾರುಹೋಗುತ್ತೇವೆ, ಆಮೇಲೆ ತತ್ವವನ್ನು ಹೇಳಿದ ವ್ಯಕ್ತಿಗೆ ಮಾರುಹೋಗುತ್ತೇವೆ, ಆನಂತರದಲ್ಲಿ ತತ್ವ ಮತ್ತು ವ್ಯಕ್ತಿ ಇಬ್ಬರನ್ನೂ ಬಿಟ್ಟು ಸಂಸಾರದ ಉನ್ನತಿಗೆ ಮಾರುಹೋಗುತ್ತೇವೆ. ಹಾಗೆಯೇ ಇವೊತ್ತು ನಾವು ಈ ಗುರುಪೀಠಗಳು, ಮಠಗಳು, ಧಾರ್ಮಿಕ ಸಂಸ್ಥೆಗಳು ಧರ್ಮದರ್ಶಿಗಳು ಇವುಗಳನ್ನು ನೋಡಿದರೆ ವಿಚಾರ ಮಾಡಿದರೆ ಒಟ್ಟಿನಲ್ಲಿ ಅವರು ಏನಾಗಿದ್ದಾರೆ? ಆ ಪೀಠಗಳು ಏನಾಗಿವೆ?

Sri A. BHEEMAPPA NAIK (Molakalmuru).- Sir, I want to raise to a point of order. While we are entitled to speak on the bill itself, it would not be appropriate for us to comment or make obsevations on the Mutts. It is not the Mutts that have come in the way. It is some of the Members who are in the way. Making reflections on their conduct would not be correct. Whether inams should be retained or abrogated or abolished is all the question. I would request the Speaker to kindly control the Member as regards points which are extraneous to this Inam Bill.

Sri MULKA GOVINDA REDDY (Chitaldrug).- It is necessary that we should speak in a comprehensive way, Sir.

Mr. SPEAKER.- I am very attentive and think that he is making out a case in his own way.

ಶ್ರೀ ಎಸ್. ಗೋಪಾಲಗೌಡ.- ಅದ್ದರಿಂದ ಇವೊತ್ತು ನಾವು ವಿಚಾರಮಾಡಿ ನೋಡಿದರೆ ತತ್ವದ ಬಗ್ಗೆ ನಾವು ಅಷ್ಟೇ ಅಗ್ರಹವನ್ನು ಇವೊತ್ತು ತೋರಿಸುತ್ತಾ ಇಲ್ಲ. ಸತ್ಯಕ್ಕೆ ನಮ್ಮ ಅಗ್ರಹ ಅಷ್ಟಾಗಿ ಇಲ್ಲ. ಹಾಗೆಯೇ ಧಾರ್ಮಿಕ ಶ್ರದ್ಧೆಯ ಬಗ್ಗೆ ನಮ್ಮ ಅಗ್ರಹ ಅಷ್ಟು ಮಟ್ಟಿಗೆ ಇಲ್ಲ. ಆದರೆ ಇವೊತ್ತು ಪರಿಪೋಷಿತವಾಗಿ ಇದ್ದಂತಾ ಒಂದು ಇನಾಂ ವ್ಯವಸ್ಥೆ ಏನಿದೆ ಅದರ ಬಗ್ಗೆ ನಾವು ಹೆಚ್ಚು ವಾದಕ್ಕೆ ಒಳಗಾಗಿದ್ದೇವೆ. ಅದು ಯಾವ ಒಂದು ಧರ್ಮವನ್ನು ಎತ್ತಿಹಿಡಿಯೂತ್ತೋ ಆ ಧರ್ಮವೇ ಇಂದು ಕುರುಡಾಗಿದೆ. ಅಂಧವಾಗಿದೆ ಜನತೆ ಆಕಡೆಗೆ ನೋಡುತ್ತಾ ಇದೆ ಎಂದು ಇವೊತ್ತು ಹೇಳಬೇಕಾಗಿದೆ. ಅದೇ ನಾವು ಇವೊತ್ತು ಬಹಳ ಮುಖ್ಯವಾಗಿ ಅರ್ಥಮಾಡಿಕೊಳ್ಳಬೇಕಾದದ್ದು. ಇಲ್ಲಿ ಕೋಮುವಾರು

ಪ್ರಶ್ನೆ ಇಲ್ಲ. ಇದು ಇಡೀ ಹಿಂದೂ ಸಮಾಜದ ಪ್ರಶ್ನೆಕೂಡ ಆಗುತ್ತದೆ. ಇದರಲ್ಲಿ ಅಸ್ಪೃಷ್ತೆ ಮತ್ತು ಅದರ ಬಗ್ಗೆ ನಾವು ತಳೆದಿರತಕ್ಕ ಮನೊಭಾವ, ಅವರ ಬಗ್ಗೆ ನಾವು ಹಿನ್ನಲೆಯಲ್ಲಿ ಬಹಳವಾಗಿ ತನ್ನ ಒಂದು ಪರಿಣಾಮವನ್ನು ಉಂಟುಮಾಡತಕ್ಕದ್ದಾಗಿದೆ. ನಾವು ಆತ್ಮವಂಚಕರಾಗಿ, ಪರಿಸ್ಥಿತಿಯನ್ನು ಎದುರಿಸಲಾದರೆ, ಅದು ತಾನಾಗಿಯೇ ಬಗೆಹರಿದೀತು ಎಂಬ ಒಂದು ಉದಾಸೀನಭಾವವನ್ನು ತಾಳುವುದರಿಂದ ಪ್ರಗತಿಗೆ ಬಹಳವಾಗಿ ಪೆಟ್ಟು ಬೀಳುತ್ತದೆ ಎಂಬುದು ಬಹಳ ಮುಖ್ಯವಾದ ವಿಷಯ. ಶ್ರೀಮಾನ್ ಭೀಮಪ್ಪನಾಯಕರು ಇದನ್ನು ಏಕೆ ಪ್ರಶ್ನೆ ಮಾಡುತ್ತೀರಿ ಎಂದು ಅಪ್ಪಣೆಕೊಡಿಸಿದರು. ಈ ದಿನದ ಪತ್ರಿಕೆಯಲ್ಲಿ ತಾವು ನೋಡಿದ್ದೀರಿ ಈ ಮಸೂದೆ ಮಂಡನೆ ಅದ ಬಗ್ಗೆ ವರದಿ ಆಗಿದೆ; ಮತ್ತು ಆದೇ ಸಂದರ್ಭದಲ್ಲಿ ಅನೇಕ ಶಿಷ್ಯರು ತಮ್ಮ ಅಭಿಪ್ರಾಯಗಳನ್ನು ಹೊರಗಡೆ ವ್ಯಕ್ತಪಡಿಸಿದ್ದಾರೆ. ಹೊರಗಡೆ ಅಭಿಪ್ರಾಯಗಳಿಗೆ ಈ ಮಾನ್ಯ ಸಭೆಯು ಮತ್ತು ಸದಸ್ಯರು ಗಮನ ಕೊಡಬಾರದು ಎಂಬ ನಿಯಮವೇನೂ ಇಲ್ಲ. ನಾನು ನಿನ್ನೆ ಕೂಡ ಎಲ್ಲರಲ್ಲೂ ಪ್ರಾರ್ಥನೆಮಾಡಿಕೊಂಡೆ. ಈ ಇನಾಂ, ಜಹಗೀರಿ ವ್ಯವಸ್ಥೆಗೂ, ಭೂಸುಧಾರಣೆ ವ್ಯವಸ್ಥೆಗೂ ಧರ್ಮವನ್ನು ಎತ್ತಿ ಗಂಟುಹಾಕಬೇಡಿ. ಅದ್ದರಿಂದ ಅಚಾತುರ್ಯ ನಡೆಯುತ್ತದೆ, ಅದು ತಪ್ಪು ಕಲ್ಪನೆಗೆ ಎಡೆಕೊಡುತ್ತದೆ, ಆದರಿಂದ ಅನಾಹುತ ಆದೀತು ಎಂದು ಹೇಳಿ ಬಹಳ ನಮ್ರತೆಯಿಂದ ವಿನಂತಿಮಾಡಿದೆ. ಅನೇಕರಿಗೆ ಬಹುಶಃ ಅದು ನಿಜವಾಗಿಯೂ ಒಪ್ಪಿಗೆಯಾಗಿ ಅದು ಅವರಿಗೆ ಸರಿ ಎಂದು ಕಂಡಿತೋ ಅನ್ನುವ ರೀತಿಯಲ್ಲಿ ಪ್ರಚಾರಮಾಡಿಕೊಂಡು ಹೋಗಿದ್ದಾರೆ. ಇಲ್ಲಿ ಒಂದು ಕಡೆ ಬರೆಯುತ್ತಾರೆ ಗುರುಗಳೇ ಮಠ ಬಿಟ್ಟು ಹೋಗಬಹುದು ಎಂದು ಇದು ಜನತೆಯಲ್ಲಿ ಒಂದು ಕಳವಳವನ್ನುಂಟುಮಾಡತಕ್ಕ ಪ್ರಚಾರ. ಹಾಗೇನಾದರೂ ಸರ್ಕಾರಕ್ಕೆ ಉದ್ದೇತ ಇದ್ದರೆ ಅದನ್ನು ತಿಳಿಸಿದರೆ ನಾನು ಕೂಡ ಅ ಉದ್ದೇಶವನ್ನು ಖಂಡಿಸುವುದಕ್ಕೆ ಇವೊತ್ತು ಸಿದ್ದನಿದ್ದೇನೆ. ಏಕೆಂದರೆ ನಾನು ಒಬ್ಬ ಸಮಾಜವಾದದ ಪಂಥಕ್ಕೆ ಸೇರಿದವನಾಗಿ...

ಶ್ರೀ ಪಿ. ಆರ್. ರಾಮಯ್ಯ (ಬಸವನಗುಡಿ) .- ಆ ಮಾತು ಯಾರು ಹೇಳಿದ್ದಾರೆ, ಗುರುಗಳು ಹೊರಟುಹೋಗಬಹುದು ಎಂದು?

ಶ್ರೀ ಎಸ್. ಗೋಪಾಲಗೌಡ.- ಸುಂದರಂ ಅಯ್ಯರ್ ಅನ್ನುವವರೊಬ್ಬರು ಆರ್ಟಿಕಲ್ ಬರೆದಿದ್ದಾರೆ.

ಶ್ರೀ ಪಿ.ಆರ್. ರಾಮಯ್ಯ.- ಗುರುಗಳು ಹೇಳಿಲ್ಲ ಆ ಮಾತು.

ಶ್ರೀ ಎಸ್. ಗೋಪಾಲಗೌಡ.- ಗುರುಗಳ ಮಾತು ನಾನು ಏಕೆ ಹೇಳುವುದಕ್ಕೆ ಹೋಗತ್ತೇನೆ ? ನನ್ನದೃಷ್ಟಿ ಸಾಮಾನ್ಯವಾಗಿ ರಾಜಕೀಯ ದೃಷ್ಟಿ. ಸಮಾಜದಲ್ಲಿ ಹೆಚ್ಚಾಗಿ ಅರ್ಥಿಕ ಸಮಾನತೆ ಉಂಟಾಗಬೇಕು, ಸಾಮಾಜಿಕ ಸಮಾನತೆ, ಸ್ವಾತಂತ್ರ ಇರಬೇಕು



ಎಂಬುದನ್ನೇ ನಾನು ಹೆಚ್ಚು ಪ್ರಾಮುಖ್ಯವಾಗಿ ನೋಡತಕ್ಕವನು; ಅದಕ್ಕೆ ಹೆಚ್ಚು ಪ್ರಾಶಸ್ತ್ಯಕೊಡುತ್ತೇನೆ ಮತ್ತು ಧರ್ಮ ಪ್ರತಿಯೊಬ್ಬ ಮನುಷ್ಯನ ವೈಯಕ್ತಿಕವಾದ ಒಂದುಭಾವ ಎಂದು ಕೂಡ ನಾನು ತಿಳಿದುಕೊಂಡಿದ್ದೇನೆ. ಅದ್ದರಿಂದ ನಾನು ಒಂದು ಧರ್ಮಕ್ಕೆ ಉತ್ತೇಜನಕೊಟ್ಟು ಮತ್ತೊಂದು ಧರ್ಮವನ್ನು ಹಳಿಯಬೇಕಾಗಿಲ್ಲ. ಆ ಕೆಲಸಮಾಡಬೇಕೆಂಬ ಉದ್ದೇಶ ನನಗೆ ಇಲ್ಲ. ಅದರೂ ಕೂಡ ಇಂದು ಜನತೆಯಲ್ಲಿ ಉಂಟಾಗಿರುವ ಒಂದು ತಪ್ಪು ತಿಳಿವಳಿಕೆ ಏನಿದೆ ಅದನ್ನು ತೊಡೆದುಹಾಕುವುದು ಬಹಳ ಮುಖ್ಯ, ಅದರಿಂದ ಹೆಚ್ಚಿನ ಒಂದು ಉಪಕಾರವಾದೀತು ಎಂದು ನಾನು ಭಾವಿಸುತ್ತೇನೆ.

ಸ್ವಾಮಿ, ನಾನು ಈ ನಮ್ಮ ಧರ್ಮ ಕಲುಷಿತವಾಗಿದೆ ಎಂಬುದನ್ನು ಹೇಳುತ್ತಾ ಇದ್ದೆ. ಅಚಾರ ವಿಚಾರರಹಿತವಾಗಿದೆ. ಅದ್ದರಿಂದಲೇ ಈ ಗೊಂದಲ ಬಂದಿದೆ ಎಂಬುದನ್ನು ಹೇಳುತ್ತಾ ಇದ್ದೆ. ಅದಕ್ಕೆ ಅಸ್ಪೃಶ್ಯತೆ ಇರುವುದನ್ನು ಉದಾಹರಣೆಯಾಗಿ ಕೊಟ್ಟೆ. ಈ ಸಂದರ್ಭದಲ್ಲಿ ಮಹಾತ್ಮಾಗಾಂಧೀಜಿಯವರು ಅಸ್ಪೃಶ್ಯತೆಯ ಬಗ್ಗೆ ಒಂದು ಮಾತನ್ನು ಹೇಳಿದ್ದಾರೆ ಅದನ್ನು ಉದಹರಿಸುವುದು ಅಷ್ಟು ತಪ್ಪೇನೂ ಅಲ್ಲ ಎಂದು ತಿಳಿದುಕೊಂಡಿದ್ದೇನೆ. ಅದನ್ನು ಸಭೆಯ ಗಮನಕ್ಕೆ ತರಬೇಕೆಂದು ಇದ್ದೇನೆ:-

"ಜೋ ಕಸೀ ಭೀ ಬಾತ್ ಮೆ ಹಮಸೆ ಅಲಗ್ ನಹೀ ಹೈ, ಔರ್ ಜೋ ಅನೇಕ ತರಹಸೆ ಸಮಾಜ್ ಕೀ ಭಾರೀ ಸೇವಾ ಕರ್‌ರಹಾ ಹೈ. ಐಸಾ ಮಾನವ್ ಜಾತಿಕೆ ಎಕ್ ಬಡೆ ಜನಸಮುಹಕೋ ನಿಕಾಲ್ ಬಾಹರ್ ಕರ್ ದೇನೆ ಕಾ ಘೋರ್ ಪಾಪ್ ಹಮನೆ ಕಿಯಾ ಹೈ. ಇಸ್ ಪಾಪ್ ಮೆ ಸೆ ಹಿಂದೂಧರ್ಮ ಜಿತನೀ ಜಲ್ದೀ ನಿಕಲ್ ಜಾಯೆ ಉತನೀ ಹೀ ಉಸಕೀ ಬಡಾಯಿ ಔರ್ ಪ್ರತಿಷ್ಠಾ ಹೈ.

ಜೈನ್ ಎಕ್ ರತ್ತೀ ಸಂಖಿಯೂ ಸೆ ಲೋಟಾಭರ್ ದೂಧ್ ಬಿಗಡ್‌ಜಾತಾ ಹೈ, ಉಸೀ ಪ್ರಕಾರ್ ಅಸ್ಪೃಶ್ಯತಾ ಸೆ ಹಿಂದೂ ಧರ್ಮ ಭ್ರಷ್ಟ್ ಹೋಜಾತಾ ಹೈ. ಅಸ್ಪೃತ್ಯತಾ ಕೀ ರೂಢಿ ಮೆ ಧರ್ಮ ನಹೀಂ ಕಿನ್ತು ಅಧರ್ಮ ಹೈ.

ಇಸ್ ಜನ್ನ ಮೆ ಮುಜೆ ಮೋಕ್ಷ್ ನ ಮಿಲೆ ತೆ ಮೇರಾ ಆಕಾಂಕ್ಷಾ ಹೈ ಕಿ ಅಗಲೇ ಜನ್ನ ಮೆ ಕಿಸೇ ಭಂಗೀ ಕೇ ಫಿರ್ ಮೇರಾ ಜನ್ನ ಹೋ."

- ಗಾಂಧೀಜಿ

ಈ ಹಿಂದೂಧರ್ಮದಲ್ಲಿ ಉಂಟಾಗಿರತಕ್ಕಂಥ ಅಸ್ಪೃಶ್ಯತೆ ಧರ್ಮವಾಗುವುದಿಲ್ಲ, ಅಧರ್ಮವಾಗುತ್ತದೆ. ಅದನ್ನು ಎಷ್ಟು ಬೇಗ ನಾವು ಪರಿಹರಿಸಿಕೊಂಡರೆ ಅಷ್ಟೂ ಒಳ್ಳೆಯದು ಎಂದು ಹೇಳಿ, ಅವರು ಮುಂದೆ ಈ ರೀತಿ ಹೇಳಿದ್ದಾರೆ:- ನಾನು ಈ ಜನ್ಮದಲ್ಲಿ ಅಸ್ಪೃಶ್ಯತೆಯನ್ನು ಹೋಗಲಾಡಿಸುವುದಕ್ಕೆ ಸಾಧ್ಯವಾಗದೇ ಹೋದರೆ ಮುಂದಿನ ಜನ್ಮದಲ್ಲಿ

ಭಂಗಿಯಾಗಿ, ಹರಿಜನರಲ್ಲಿ ಹುಟ್ಟುವುದಕ್ಕೆ ಆಶೆಪಡುತ್ತೇನೆ ಎಂದು ಹೇಳಿದ್ದಾರೆ. ಬಹುಶಃ ಆ ವಾಕ್ಯ ಪರಿಪಾಲನೆಗಾಗಿಯೇ ಮಹಾತ್ಮಗಾಂಧೀಜಿಯವರ ಕೊಲೆಯಾಗಿದ್ದರೂ ಆಗಿರಬಹುದು. ಆ ವಿಮರ್ಶೆಗೆ ನಾನು ಹೋಗುವುದಿಲ್ಲ. ಆದ್ದರಿಂದ ಈ ಜಟಿಲವಾದ ಧರ್ಮಸಮಸ್ಯೆಯನ್ನು ಈ ಇನಾಂ ಪದ್ಧತಿಯ ರದ್ದಿಯಾತಿಗೆ ದಯವಿಟ್ಟು ಯಾರು ನಿಕಟಸಂಬಂಧವನ್ನು ಕಲ್ಪಿಸಬಾರದು ಎಂದು ಹೇಳಿ ಮತ್ತೊಮ್ಮೆ ಪ್ರಾರ್ಥನೆ ಮಾಡಿಕೊಳ್ಳುತ್ತೇನೆ.

ಸ್ವಾಮಿ, ಈಗ ಮೈಸೂರು ಸರ್ಕಾರ ಭೂಸುಧಾರಣೆಯ ವಿಷಯದಲ್ಲಿ ಈ ಒಂದು ಮಸೂದೆಯನ್ನು ಸಭೆಯ ಮುಂದೆ ಮಂಡಿಸಿದೆ.

ಈಗಾಗಲೇ ಇನಾಮತಿಗಳಲ್ಲಿ ಸುಮಾರು ನಾಲ್ಕು ಸಾವಿರ ಎಕರೆಗಳನ್ನು ರದ್ದುಪಡಿಸುವ ಒಂದು ಮಸೂದೆ ಕಾನೂನಾಗಿದೆ. ಈಗಿರತಕ್ಕಂಥ ದೇವಾದಾಯ ಮತ್ತು ಬ್ರಹ್ಮಾದಾಯ ಇನಾಂ ಮತ್ತು ಜಹೀರುಗಳಲ್ಲಿ 47,440 ಎಕರೆಗಳು ಶೃಂಗೇರಿಗೆ ಸಂಬಂಧಪಟ್ಟ ಜಹಗೀರಿಯಲ್ಲಿವೆ. ಉಳಿದು ಸಣ್ಣ ಸಣ್ಣ ದೇವಸ್ಥಾನಗಳಿಗೆ ಮತ್ತು ಸಂಸ್ಥೆಗಳಿಗೆ ಸೇರಿದೆ. ಈ ಬಿಲ್ಲಿನಲ್ಲಿ ಹಿಂದಿನ ಮಸೂದೆಯಲ್ಲಿ ಯಾವ ರೀತಿ ಹೇಳಿತ್ತೋ ಆದೇ ರೀತಿ ಖದೀ 0-01 ರೈತರಿಗೂ ಮತ್ತು ಖಾಯಂ ರೈತರಿಗೂ ಅವರು ಅನುಭವಿಸಿಕೊಂಡು ಬಂದಂಥ ಭೂಮಿಯನ್ನು ಅವರ ಖಾತೆಗೆ ಹಾಕಿಕೊಂಳುತ್ತೇವೆಂದು ಹೇಳಿದ್ದಾರೆ. ಆದರೆ ಕೊನೇ ನೋಟ್ ನಲ್ಲಿ ಹೇಳಿರುವ ವಿಚಾರದಲ್ಲಿ ನಿನ್ನೆ ಪ್ರಶ್ನೆ ಬಂದಿದೆ. ಖದೀಂ ರೈತರಲ್ಲದಿರುವವರು ಶೃಂಗೇರಿಯಲ್ಲಿದ್ದಾರೆಯೆ ಎಂದು ಯೋಚನೆ ಮಾಡುವ ಈ ನೋಟಿನಲ್ಲಿ ಹೀಗೆ ಹೇಳಿದ್ದಾರೆ;

" In respect of Sringeri Jahagir, it is assumed that all the tenants are kadim tenants and the net amount................"

ಇದರಲ್ಲಿ Assumed ಎಂದು ಹೇಳಿದೆ. ಆದರೆ ಮಾನ್ಯ ಮಂತ್ರಿಗಳು ಹೇಳುವ ರೀತಿಯಲ್ಲಿ ಬೇರೆ ರೈತರು ಕೂಡ ಮಂತ್ರಿಗಳು ಹೇಳುವಂತೆ ಅಲ್ಲಿದ್ದಾರೆಂದು ನಾನು ತಿಳಿದುಕೊಂಡಿದ್ದೇನೆ. ಬರೀ ಸೆಸ್ ಕೊಟ್ಟುಕೊಂಡಿರುವ ರೈತರು ಕೂಡ ಅಲ್ಲಿ ದ್ದಾರೆಂದು ನನಗೆ ತಿಳಿದು ಬಂದಿದೆ. ಇನ್ನೂ ಉಳಿದಿರತಕ್ಕಂಥ ಜಮೀನನ್ನು ಅಂದರೆ ಕಟ್ಟಡಗಳನ್ನು ಮತ್ತು ಇತರ ಜಮೀನುಗಳನ್ನು ಸಂಸ್ಥೆಯ ಹೆಸರಿನಲ್ಲಿ ರಜಿಸ್ಟರು ಮಾಡಲಾಗುತ್ತದೆ ಎಂದು ಹೇಳಿದೆ ಮತ್ತು ಅವರಿಗಿರುವ ಭೂಮಿಯನ್ನು ಅವರ ಹೆಸರಿನಲ್ಲಿ ರಿಸಜಿಸ್ಟರು ಮಾಡಬೇಕಂತಲೂ ಮತ್ತು ಕಮ್ಯೂನಲ್ ವೇಸ್ಟ್ ಲ್ಯಾಂಡ್ಸ್, ಗೋಮಾಳದ ಜಮೀನು, ಟ್ಯಾಂಕ್ ಬೆಡ್ಸ್ ಇತ್ಯಾದಿಗಳನ್ನು ಬಿಟ್ಟು ಬಾಕಿಯಾದ್ದನ್ನು ಖದೀಂ ಟೆನೆಂಟ್ಸ್ ಮತ್ತು ಪರ್ಮನೆಂಟ್ಸ್‌ಗೆ ಖಾತೆ ಮಾಡುತ್ತಾರೆ. ಅನಂತರವೂ ಉಳಿಯುವ ಭೂಮಿಯನ್ನು ಈ ಸಂಸ್ಥೆಗಳ ಹೆಸರಿನಲ್ಲಿ ರಿಜಿಸ್ಟರು ಮಾಡಲಾಗುತ್ತದೆ ಎಂದು ಕೂಡ ಹೇಳಿದ್ದಾರೆ.



ಆಮೇಲೆ ಕಾಂಪೆನ್ಸೇಷನ್ ವಿಷಯದಲ್ಲಿ ಜೋಡಿ, ಗ್ರಾಮಾಧಿಕಾರಿಗಳಿಗೆ ಕೊಡುವ ಖೋಟಿಗೆ, ಇತರ ಖರ್ಚುಗಳು, ಇರಿಗೇಷನ್ ಮತ್ತು ಮ್ಯಾನೇಜ್ ಮೆಂಟಿಗಾಗುವ ಖರ್ಚು ಇವುಗಳಿಗೆ ಐದು ವರ್ಷಗಳ ಸರಾಸರಿ ದಾವರುಷಾ ಫುತಾರಿ ಉತ್ಪತ್ತಿಯನ್ನು ಬಿಟ್ಟು ಕೊಡುವುದನ್ನು ಕರಾಡ ನಮೂದು ಮಾಡಿದ್ದಾರೆ. ಈ ಲೆಕ್ಕದ ಪ್ರಕಾರ ಸುಮಾರು 18 ಲಕ್ಷ ರೂಪಾಯಿಗಳನ್ನು ಪ್ರತಿವರ್ಷ ಕೊಡಬೇಕಾಗುತ್ತದೆ. ಇದರಲ್ಲಿ ಇತ್ತೀಚೆಗೆ ಕೆಲವು ವಾದಗಳು ಹುಟ್ಟಿವೆ, "ಸರ್ಕಾರಕ್ಕೆ ಇದರಿಂದ ಲೂಎಕ್ಸಾನಾಗುವುದಿಲ್ಲವೆ? ಸುಮಾರು ವರ್ಷಕ್ಕೆ 30 ರೂಪಾಯಿಗಳನ್ನು ಒಂದು ಸಂಸ್ಥೆಗೆ ನಾವು ಕೊಟ್ಟರೆ ನಮಗೆ ಬರುವುದು ಕಂದಾಯದ ರೂಪವಾಗಿ ಸುಮಾರು ಮೂರು ರೂಪಾಯಿಗಳು, ಐದು ವರ್ಷಗಳಿಗೆ 150 ರೂಪಾಯಿಗಳನ್ನು ಕೊಡಬೇಕು, ಯಾವ ಭೂಮಿಯನ್ನು ಪರ್ಮನೆಂಟ್ ಅಥವಾ ಖದೀಂ ಟೆನೆಂಟಿಗೆ ನೀವು ರಿಜಿಸ್ಟರು ಮಾಡುತ್ತೀರೋ ಅವನಿಂದ ಇಷ್ಟು ಬರುತ್ತದೆ. ಆದ್ದರಿಂದ ಪ್ರತಿ ವರ್ಷವೂ ಸರ್ಕಾರಕ್ಕೆ ನಷ್ಟವಾಗುತ್ತದೆ. ಆ ಲುಕ್ಸಾನಿಗೆ ನೀವು ಅವಕಾಶ ಕೊಡುತ್ತೀರಾ? ಈ ಪದ್ಧತಿಗೆ ಉಳಿಸಿದರೆ ಏನು ತೊಂದರೆ?" ಎಂದು ವಾದ ಮಾಡಿದರು. ಅದು ನಿಜ. ಈ ಎಲ್ಲಾ ಸಂಸ್ಥೆಗಳಿಗೂ ಗ್ರಾಂಟುಗಳನ್ನು ಕೊಟ್ಟುಕೊಂಡು ಹೋಗುವುದು ಸರ್ಕಾರಕ್ಕೆ ನಷ್ಟವೇ. ಆದರೆ ಅವುಗಳಿಗೆ ಯಾವ ರೀತಿಯ ಉತ್ಪತ್ತಿಯೂ ಇಲ್ಲದೆ ಪೂಜೆ ಪುನಸ್ಕಾರಾದಿಗಳೇ ಇಲ್ಲದೆ ಅರು ನಿಂತುಹೋಗಬೇಕೆಂಬ ಉದ್ದೇಶ ಯಾರಿಗೂ ಇಲ್ಲ. ಅವು ಎಲ್ಲಿಯವರಿಗೆ ಜನತೆಯ ಹಿತವನ್ನು ಕಾಪಾಡಿ ಜನತೆಯ ನೈತಿಕ ಶಕ್ತಿಯನ್ನು ಬೆಳೆಸತಕ್ಕಂಥ ಮತ್ತು ರೈತರಿಗೆ ಹಿತವಾದ ಕೆಲಸವನ್ನು ಮಾಡತಕ್ಕಂಥ ಸಂಸ್ಥೆಗಳಾಗುತ್ತವೆ ಯೋ, ಇದಕ್ಕೆ ತಕ್ಕ ವ್ಯಕ್ತಿಗಳು ಎಲ್ಲಿಯವರೆಗೆ ಆ ಸಂಸ್ಥೆಗಳಲ್ಲಿರುತ್ತಾರೋ ಅಲ್ಲಿಯತನಕ ಅವು ಯಾವುದೇ ಸರ್ಕಾರದಿಂದಾಗಲಿ ಉತ್ಪತಿಯನ್ನು ಪಡೆಯುವುದಕ್ಕೆ ಅರ್ಹವಾಗಿರುತ್ತವೆ. ಅದಕ್ಕೆ ಯಾವ ರೀತಿಯ ಒಂದು ಗ್ಯಾರಂಟಿಯನ್ನೂ ನಾವು ಕೊಡಬೇಕಾದ್ದಿಲ್ಲ. ಅವು ಜನತೆಯ ಸರ್ವಶಕ್ತಿಯ ಮೇಲೆ, ಜನತೆಯ ಉತ್ತೇಜದ ಮೇಲೆ ಮತ್ತು ಸಮಾಜದ ರೂಪರೇಖೆಗಳ ಮೇಲೆ ನಿಂತಿದೆ. ಕೊನೆಯ ತೀರ್ಮಾನ ಜನತೆ ಕೊಡಬಲ್ಲುದೇ ಹೊರತು ನಾವಾಗಲಿ ಅಥವಾ ಯಾವುದೇ ಒಂದು ಮಂತ್ರಿ ಮಂಡಲವಾಗಲಿ ಕೊಟ್ಟರೆ ಅದು ಕೊನೆಯ ತೀರ್ಮಾನವೆಂದು ಹೇಳುವುದಕ್ಕಾಗುವುದಿಲ್ಲ. ಆದ್ದರಿಂದ ಆ ದೃಷ್ಟಿಯಿಂದ, ನಾವು ಇಂದು ಸರ್ಕಾರಕ್ಕೆ ಸ್ವಲ್ಪ ನಷ್ಟವಾಗುತ್ತದೆಂದು ಇಟ್ಟುಕೊಂಡರೂ ಕೂಡ ಅವುಗಳ ಒಂದು ಸ್ಥಾನದ ದೃಷ್ಟಿಯಿಂದ ಮತ್ತು ಪರಂಪರೆಯ ದೃಷ್ಟಿಯಿಂದ ಇನ್ನುಮುಂದೆಯೂ ತಮ್ಮ ಕರ್ತವ್ಯಗಳನ್ನು, ಧರ್ಮಗಳನ್ನು ಪರಿಪಾಲನೆ ಮಾಡಿಕೊಂಡು ಹೋಗುವ ದೃಷ್ಟಿಯಿಂದ ಅವುಗಳಿಗೆ ಸಲ್ಲುವ ಒಂದು ಉತ್ಪತ್ತಿಯನ್ನು ಸರ್ಕಾರ ಕೊಡಲೇ ಬೇಕಾಗುತ್ತದೆ.

ಇನ್ನು ಜನತೆಯ ದೃಷ್ಟಿಯಿಂದ - ಸಾಮಾನ್ಯವಾಗಿ ಧಾರ್ಮಿಕ ದೃಷ್ಟಿಯಿಂದಲ್ಲ - ರೈತರು ಯಾರಿದ್ದಾರೋ ಅವರ ದೃಷ್ಟಿಯಿಂದ ಈ ಮಸೂದೆಯನ್ನು ಪರ್ಯಾಲೋಚಿಸಬೇಕು. ಇಲ್ಲಿ ಹೇಳಬಹುದು, ಬರೀ ರೈತರ ದೃಷ್ಟಿಯಿಂದ ಈ ಮಸೂದೆಯನ್ನು ತಂದು ಈ ರೀತಿಯಾಗಿ ಕೆಲವರಿಗೆ ಇದರಿಂದ ತೊಂದರೆಯನ್ನು ಕೊಡುವುದು ನ್ಯಾಯವೆ ಎಂದು ಪ್ರಶ್ನೊ ಹಾಕಿದ್ದಾರೆ.

ಇಲ್ಲಿ ತಾರತಮ್ಯ ದೃಷ್ಟಿಯಿಲ್ಲ. ಅದ್ದರಿಂದ ಒಬ್ಬರ ಭೂಮಿಯನ್ನು ಅಥವಾ ಅಸ್ತಿಯನ್ನು ಕಿತ್ತು ಇನ್ನೊಬ್ಬರಿಗೆ ಹಂಚತಕ್ಕಂಥ ಪ್ರಶ್ನೆಯೇ ಇಲ್ಲ. ಇದರಲ್ಲಿ ಮುಖ್ಯವಾಗಿ ಹಳೆಯ ಪದ್ಧತಿಯೇನಿದೆಯೆಂದು ಹೇಳಿದೆಯೋ ಅದು ಹೋಗಬೇಕು, ಬದಲಾವಣೆಯಾಗಬೇಕು ಎಂಬುದೊಂದು ವಿಷಯ. ಪದ್ಧತಿಯಲ್ಲಿ ಮಾರ್ಪಾಗಬೇಕು. ಇನ್ನೊಂದು ವಿಷಯ ಸಮಗ್ರ ಅರ್ಥಿಕದೃಷ್ಟಿಯಿಂದ ಯಾರು ಬಡವರಿದ್ದಾರೋ ಯಾರು ಉಳುಮೆಗಾರರು, ರೈತರು ಇದ್ದಾರೋ ಅವರಿಗೆ ತಮ್ಮದೇ ಅದ ಒಂದು ತುಂಡು ಭೂಮಿಯನ್ನು ದೊರಕಿಸಿಕೊಡಬೇಕು, ಅಂದರೆ ಅ ಮೂಲಕ ಅವರ ಉತ್ಪತ್ತಿಯನ್ನು ಹೆಚ್ಚಿಸಬೇಕು, ಅವರಿಗೆ ಅರ್ಥಿಕ ಸಮಾನತೆಯನ್ನು ತಂದು ಕೊಡಬೇಕೆಂಬುದು ಮುಖ್ಯವಾದ ಒಂದು ದೃಷ್ಟಿ. ಈ ದಿಕ್ಕಿನಲ್ಲಿ ಈ ಮಸೂದೆ ಸ್ವಲ್ಪಮಟ್ಟಿಗೆ ಸಹಕಾರಿಯಾಗುತ್ತದೆ. ಕಳೆದ 15-20 ವರ್ಷಗಳಿಂದ ಜಹಗೀರಿಯಗುತ್ತದೆ. ಜಹಗೀರಿಯ ವಿಷಯ ನೋಡಿದರೆ ಸರ್ಕಾರ ಅದರ ಅಡಳಿತವನ್ನು ನಡೆಸುತ್ತಿದೆ. ಈ ಸರ್ಕಾರ ಅಡಳಿತ ನಡೆಯಸುವುದರಲ್ಲಿ ಜಹಗೀರಿಯ ಎಲ್ಲಾ ಮ್ಯಾನೇಜ್ ಮೆಂಟನ್ನೂ ಹಣಕಾಸಿಗೆ ಸಂಬಂಧ ಪಟ್ಟ ಹಾಗೆ ನೋಡಿಕೊಂಡು ಬರುತ್ತಿದೆ, ಅನೇಕ ಜನ ರೈತರಿದ್ದಾರೆ. ಈ ರೈತರಿಗೇನಾದರೂ ಒಂದು ಪರಿಹಾರವಿದೆಯೆ ಎಂದು ನೋಡಿದರೆ, ಯಾವುದಾದರೂ ಒಂದು ಗೇಣಿ ಸಂಬಂಧದಲ್ಲಾಗಲಿ ಅಥವಾ ಮಳೆ ಬಂದು ಕೊಚ್ಚಿಕೊಂಡು ಹೋಗಿದೆಯೆಂದು ಹೇಳುವ ಸಂದರ್ಭದಲ್ಲಾಗಲಿ ಅಥವಾ ತೋಟಕ್ಕೆ ನಷ್ಟವಾಗಿರುವ ಸಂದರ್ಭದಲ್ಲಾಗಲಿ, ಇನ್ನಾವುದಾದರೂ ಸಂದರ್ಭದಲ್ಲಾಗಲಿ, ಇನ್ನಾವುದಾದರೂ ಪರಿಹಾರ ಬೇಕಾದರೆ ಸರ್ಕಾರವನ್ನು ಕೇಳಿದರೆ ಸರ್ಕಾರದವರು ಮಠದವರನ್ನು ಕೇಳಿ ಎಂದು ಹೇಳುತ್ತಾರೆ. ಈ ರೀತಿಯಲ್ಲಿ ಒಂದು ದ್ವಿಮುಖವಾದ ಮ್ಯಾನೇಜ್ ಮೆಂಟಿದೆ. ಅ ದೃಷ್ಟಿಯಿಂದ ರೈತರಾರಿಗೂ ಒಂದು ಸಂರಕ್ಷಣೆಯಿಲ್ಲ ಮತ್ತು ಇದಕ್ಕೆ ಯಾರಿಂದ ಪರಿಹಾರ ಪಡೆಯಬೇಕೆಂಬುದು ಕೂಡ ಅವರಿಗೆ ಗೊತ್ತಾಗುವುದಿಲ್ಲ. ಅಲ್ಲದೆ ಈ ಕಾರಣದಿಂದ ಅನೇಕ ಭೂಮಿಗಳು ಬಹಳ ಹೀನಸ್ಥಿತಿಯಲ್ಲಿವೆ. ತೋಟಗಳು ಹೀನಸ್ಥಿತಿಯಲ್ಲಿವೆ. ಸಾಮಾನ್ಯವಾಗಿ ನಾವು ನೋಡಿದರೆ ನಮ್ಮ ಕಡೆ ಒಂದು ತರಹವಿದೆ. ತೀರ ಕೆಟ್ಟ ತೋಟ, ಅಡಕೆ ಮರಗಳು ಮುಂತಾದವು ಕೆಲಸಕ್ಕೆ ಬಾರದ ಗಿಡ ಬೆಳೆದಿರುವ ತೋಟ ಇರುವುದನ್ನು ಯಾರದೆಂದು ಕೇಳಿದರೆ ದೇವಸ್ಥಾನದ ಸ್ವತ್ತು ಅಥವಾ ಮಠದ ಸ್ವತ್ತು ಎಂದು ಜನರು ಸಾಮಾನ್ಯವಾಗಿ ಹೇಳುವುದನ್ನು ಕೇಳಬಹುದು. ಈ ಜಮೀನು, ತೋಟ ಒಬ್ಬರ ಕೈಯಿಂದ ಇನ್ನೊಬ್ಬರ ಕೈಗೆ ಬಂದರೂ ಅವರಿಗೆ ಯಾವ ಅಸಕ್ತಿಯೂ ಇರುವುದಿಲ್ಲ. ಈ ದಿವಸ ಕೈದಾಟುವುದನ್ನು ಕಾಣಬಹುದೇ ವಿನಾ ಇನ್ನೇನೂ ಇಲ್ಲ. ಅಮೇಲೆ ಖಾಸಗಿ ಸಹುಕಾರರ ಹತ್ತಿರ ಹೋಗಿ ಅವರ ಭೂಮಿಯಲ್ಲಿ ಸಾಗುವಳಿ ಮಾಡಿದರೆ ಅಥವಾ ಅವರ ತೋಟವನ್ನು ವಹಿಸಿಕೊಂಡರೆ ಅಲ್ಲಿರುವ ಕಳೆ ತೆಗೆಯಲು ಅದಕ್ಕೆ ಕಾಂಪೌಂಡು ಹಾಕಲು 100 ರೂಪಾಯಿಗಳು ಕೊಡಿ ಎಂದು ಸಾಲವನ್ನು ತರಬಹುದು. ಇಲ್ಲಿ ಅಮಲ್ದಾರರ ಸಾಲಕೋಡುವುದಿಲ್ಲ, ಜಹಗೀರುದಾರರು ಸರ್ಕಾರಕ್ಕೆ ವಹಿಸಿದ್ದೇವೆಂದು ಹೇಳಿ ಒಂದೇ ಮಾತಿನಲ್ಲಿ ಜವಾಬ್ದಾರಿ ತಪ್ಪಿಸಿಕೊಳ್ಳುತ್ತಾರೆ. ಹೀಗಾಗಿ ಒಂದೆರಡರು ತೋಟವಲ್ಲ, 5-10 ಎಕರೆಗಳ ಪ್ರಶ್ನೆಯಲ್ಲ, ಸಹಸ್ರಾರು ಎಕರೆ ಜಮೀನು ಅನೇಕ ಅತ್ಯುತ್ತಮವಾದ ತೋಟ,



ಗದ್ದೆ ಮುಂತಾದವು ಈ ದಿವಸ ಹಾಳಾಗಿ ಹೀನಸ್ಥಿತಿಗೆ ಬಂದು, ಅಲ್ಲೇನೂ ಫಸಲೇ ಆಗದಿರುವ ಪರಿಸ್ಥಿತಿಯಿಂದೆ ಇದೆ. ರೈತರಿಗೆ ಯಾವುದೇ ಒಂದು ರಕ್ಷಣೆಯಿಂದ ಆ ದೃಷ್ಟಿಯಿಂದ ಈ ಜಹಗೀರಿ, ಇನಾಂ ಮತ್ತು ಇತರ ಆಡಳಿತದಲ್ಲಿರುವ ರೈತರಿಗೆ ಬೇರೆ ರೈತವಾರಿ ಪದ್ಧತಿಯಲ್ಲಿ ಯಾವ ರೀತಿಯು ಸೌಲಭ್ಯ ಕಲ್ಪಿಸಿಕೊಟ್ಟಿರುವರೋ ಹಾಗೇ ಟೆನೆನ್ಸಿ ಕಾನೂನು ಮಾಡುವುದರಿಂದ ಮತ್ತು ಬೇರೆ ವ್ಯಕ್ತಿ ಸಂಬಂಧವಾದ ಇನಾಂ ವಜಾಮಾಡಿ ಅಲ್ಲಿರುವ ರೈತರಿಗೆ ಹೆಚ್ಚಿನ ಸೌಲಭ್ಯ ಕೊಡಬೇಕೆಂದು ಯೋಚನೆ ಮಾಡಿರುವ ರೀತಿಯಲ್ಲಿ, ಈ ಇನಾಂ ಯಾರಿಗೇ ಸೇರಿರಲಿ, ರೈತರ ಹಿತದೃಷ್ಟಿಯಿಂದ ಅವರಿಗೆ ಹೆಚ್ಚಿನ ಅನುಕೂಲವಾಗುವಂತೆ ಬೇರೆ ರೈತರಿಗೆ ಪಕ್ಕದ ಗ್ರಾಮದಲ್ಲಿ, ರೈತವಾರಿ ಪದ್ಧತಿಯಲ್ಲಿ ವ್ಯವಸಾಯ ಮಾಡಿಕೊಂಡಿರುವವರೆಗೆ ಇರಬಹುದಾದ ಎಲ್ಲಾ ಹಕ್ಕುಬಾಧ್ಯತೆಗಳನ್ನೂ ದೊರಕಿಸಿ ಕೊಡಬೇಕು. ಈ ದೃಷ್ಟಿಯಿಂದ ಇದೂ ಕೂಡ ಒಂದು ಸುಧಾರಣೆಯನ್ನು ತರಬೇಕಾದ್ದು ಬಹಳ ಅತ್ಯಗತ್ಯವಾಗಿದೆ. ಆದ್ದರಿಂದ ಈ ದೇವಾದಾಯ ಮತ್ತು ಬ್ರಹ್ಮಾದಾಯ ಇನಾಂಗಳೇನಿದೆಯೋ ಅವುಗಳನ್ನು ರದ್ದುಮಾಡಬೇಕಾದ್ದು ಬಹಳ ಅಗತ್ಯವಾಗಿದೆ.

## ಆಡಳಿತ ಭಾಷೆ ಮಸೂದೆ 1963

ನಾನು ಈ ರಾಜ್ಯದ ಆಡಳಿತ ಭಾಷೆ ಕಡ್ಡಾಯವಾಗಿ ಕನ್ನಡ ಆಗಬೇಕು ಎನ್ನುವ ಬಗ್ಗೆ ಹೇಳಿದಂತಹಕೆಲವು ಶಬ್ದಗಳನ್ನು ವಿಸ್ತರಿಸುವುದಕ್ಕೆ ಪ್ರಯತ್ನ ಮಾಡುತೇನೆ. ಈ ಮಸೂದೆ ಮಾನ್ಯ ಸದಸ್ಯರಾದ ಎಸ್. ಎಂ. ಕೃಷ್ಣ ಅವರು ಹೇಳಿದ ಹಾಗೆ ಸರಳ ಮತ್ತು ಸುಂದರವಾಗಿಲ್ಲ. ಅವರಿಗೆ ಹಾಗೆ ಕಂಡಿದ್ದರೆ ನನಗೆ ಕಾಂಚನ ಮೃಗದ ರೂಪದಲ್ಲಿ ಇರುವ ಮಾರೀಚನ ಹಾಗೆ ಇದು ಕಾಣುತ್ತಾ ಇದೆ. ಈ ವಿಷಯವನ್ನು ವಿಮರ್ಶೆ ಮಾಡುವುದು ಒಳ್ಳೆಯದು ; ಇದರೊಳಗೆ ಹೇಗೆ ಆ ದೃಷ್ಟಿ ಕಾಣುತ್ತದೆ ಎಂದು ನನ್ನ ಅಭಿಪ್ರಾಯವನ್ನು ನಾನು ಸಭೆಯ ಮಂದೇಇಡುತ್ತೇನೆ. ತಾವು ಇದನ್ನು ದಯವಿಟ್ಟು ಓದಬೇಕು. ಓದಿದ್ದಿರಿ ಎಂದು ಭಾವಿಸುತ್ತೇನೆ. ಇದರಲ್ಲಿ ಒಂದು ಮಾತು ಕನ್ನಡದಲ್ಲೆ ಓದುತ್ತೇನೆ -2ನೇ ಪ್ರಕರಣ ಎಂದು ಕರೆಯುತ್ತೇವೆ -ಕ್ಲಾಸ್ ಅನ್ನುವುದನ್ನು ಪ್ರಕರಣ ಎಂದು ಕನ್ನಡಿಸಿದ್ದಾರೆ ಅದು ಬೇರೆ ಮಾತು - 2 ನೇ ಪ್ರಕರಮದಲ್ಲಿ ' ಕನ್ನಡವು ಮೈಸೂರಾರು ರಾಜ್ಯದ ರಾಜ್ಯ ಭಾಷೆಯಾಗತಕ್ಕದ್ದು ಎಂಬುದನ್ನು ಬಿಟ್ಟರೆ ಕನ್ನಡವನ್ನು ರಾಜ್ಯದ ಆಡಳಿತ ಭಾಷೆಯಾಗಿ ಮಾಡುವುದಕ್ಕೆ ಇನ್ನಾವ ಪ್ರಕರಣವೂ ಸಹಕಾರಿಯಾಗಿಲ್ಲ. ತಾವು ಇದನ್ನು ದಯವಿಟ್ಟು ಓದಬೇಕು 3-4-5-6 ಪ್ರಕರಣಗಳು ಇವೆ. ಅವು ಈ 2ನೇ ಪ್ರಕರಣದಲ್ಲಿ ಕೊಡತಕ್ಕ ಅಧಿಕಾರವನ್ನು ಮೊಟಕು ಮಾಡತಕ್ಕವು ಅಥವಾ ಅಡ್ಡಿಪಡಿಸತಕ್ಕವು ಅಥವಾ ವಿಫಲಗೊಳಿಸತಕ್ಕವು ಎಂಬುದನ್ನು ನಾನು ಅವನ್ನು ಓದುವುದರಿಂದ ಕಂಡುಕೊಳ್ಳಬಹುದು. ಆ ದೃಷ್ಟಿಯಿಂದರೂ ಕನ್ನಡ ಆಡಳಿತ ಭಾಷೆಯಾಗುತ್ತದೆ ಅನ್ನುವ ರೂಪದಲ್ಲೆ ಇಂಗ್ಲೀಷನ್ನು 1965ನೇ ಇಸವಿಯಿಂದ ಆಚೆಗೂ ಮುಂದುವರಿಸಿಕೊಂಡು ಹೋಗುವುದಕ್ಕೆ ಯಾವ ಅಭ್ಯಂತರವೂ ಕಾನುನು ದೃಷ್ಟಿಯಿಂದ ತರಕ್ಕದ್ದಲ್ಲ ಎಂಬ ಕಾರಣಕ್ಕಾಗಿಯೇ ತಂದಿರತಕ್ಕ ಮಸೂದೆ ಇದ್ದು ; ಎನ್ನುವುದು ಇಲ್ಲಿ ಗಮನಿಸಬೇಕಾದ ವಿಷಯ. ಆದ್ದರಿಂದ ಮಾನ್ಯ ಶ್ರೀ ಕೃಷ್ಣರವರನ್ನು ಕೇಳಿಕೊಳ್ಳುವುದಷ್ಟೆ ; ಇದು ಅಷ್ಟು ಸರಳ ಮತ್ತು ಸುಂದರವಾದ ಮಸೂದೆ ಅಲ್ಲ. ಈಗ ಏನು ಸರಕಾರದ ಧೋರಣೆ ಭಷೆಯ ಬಗ್ಗೆ ಇದೆಯೋ ಆ ಧೋರಣೆಯನ್ನೇ ಯಾವ ಅಡ್ಡಿ ಆತಂಕ ಇಲ್ಲದೆ ಮುಂದವರಿಸಿಕೊಂಡು ಹೋಗುವುದಕ್ಕೆ ಕಾನೂನುಬದ್ಧವಾಗೀ ಅಧಿಕಾರವನ್ನು ಈ ಸಭೆ ಸರಕಾರದವರಿಗೆ ಕೊಡಬೇಕೆಂದು ಕೇಳುತ್ತಾ ಇದ್ದಾರೆ. ಮಾನ್ಯ ಮುಖ್ಯ ಸಚಿವರು ಹೇಳಿದ ಹಾಗೆ ಪ್ರಧಾನಿ ಅವರು ಹೇಳಿದ್ದಾರೆ - 1965ರ ನಂತರವೂ ಇಂಗ್ಲೀಷನ್ನು ನಾವು ಮುಂದುವರಿಸಿಕೊಂಡು ಹೋಗುತ್ತೇವೆ ಎಂದು ಅವರು ಈ ದೇಶದ ಜನರಿಗೆ ಭಾರವಸೆ ಕೊಟ್ಟಿದ್ದಾರೆ. ಆ ಬರವಸೆಯನ್ನು ಈಡೇರಿಸುವುದಕ್ಕೆ ಈ ಮಸೂದೆ ಎನ್ನುವುದು ಬಹಳ ಸುಸ್ಪಷ್ಟು. ಆದುದರಿಂದ ನಾನು ಈ ಮಸೂದೆಗೆ ತಿದ್ದುಪಡಿ ಸೂಚಿಸಿದ್ದೆ, ಅದರ ಪ್ರಕಾರ ಎನು ಹೇಳುತ್ತೇನೆ ಎಂದರೆ - ಬಹಳ ಸ್ಪಷ್ಟವಾಗಿ ಹೇಳಿದ್ದೇನೆ 2ನೇ ಪ್ರಕರಣವೂ ಮುಂದು ವರಿದುಕೊಂಡು ಬಂದಿಂದ ಇಂಗ್ಲೀಷ್ ಭಾಷೆಯ ಬಳಕೆಯನ್ನು 1965ನೇ ಇಸವಿಯಿಂದ ಆಚೆಗೆ ಮುಂದುವರಿಸಿಕೊಂಡು ಹೋಗದೇ ಇರುವುದಕ್ಕೆ ಮತ್ತು ಕನ್ನಡವನ್ನು ಆಡಳಿತ ಭಾಷೆಯನ್ನಾಗಿ ಮಾಡುವುದಕ್ಕೆ ತಂದಿರತಕ್ಕ ಮಸೂದೆ ಇದು ಎಂದು ಹೇಳಿ ಇದನ್ನು ಕಾರ್ಯಗತ ಮಾಡುವುದಕ್ಕೆ ಎನು

ವಿ.ಸಿ. ನಡವಳಿಗೆಳು : ದಿನಾಂಕ 5.9.1963



ಕ್ರಮಗಳನ್ನು ಎಲ್ಲೆಲ್ಲಿ ತೆಗೆದುಕೊಳ್ಳ ಬೇಕೋ ಆ ಕ್ರಮಗಳನ್ನು ತೆಗೆದುಕೊಳ್ಳಬೇಕು ಎನ್ನುವುದು ಈ ಮಸೂದೆಯ ಅಭಿಪ್ರಾಯವಾಗಿರಬೇಕು.

ಈ ದೃಷ್ಟಿಯಿಂದ ನಾನು ಹೇಳುತ್ತಿದ್ದೇನೆ. ಕನ್ನಡ ರಾಜ್ಯದಲ್ಲಿ ಕನ್ನಡ ಆಡಳಿತ ಭಾಷೆ ಮಾಡಬೇಕೆಂದು ಹೇಳುವ ಕಾಲದಲ್ಲೆ ಅದನ್ನು ಕಾರ್ಯಗತ ಮಾಡದೇ, ಈಗ ಮಸೂದೆಯನ್ನು ಅಂಗೀಕರಿಸಿ ಇಂಗ್ಲಿಷ್ ಭಾಷೆಯನ್ನು ಸಾರೋದ್ಧಾರವಾಗಿ ಮಂದುವರಿಸಕೊಂಡು ಹೋಗುವುದಕ್ಕೆ ಈ ಮಸೂದೆಯಿಂದ ಅವಕಾಶಕವಾಗುತ್ತದೆ. ಮುಖ್ಯಮಂತ್ರಿಗಳು ಈ ಮಾತನ್ನು ಗಮನಿಸಿ ಸೂಕ್ತ ತಿದ್ದುಪಡಿಯನ್ನು ಅಂಗೀಕರಿಸುವುದಕ್ಕೆ ಸರಕಾರ ಮನಸ್ಸು ಮಾಡಬೇಕೆಂದು ಈ ಮೂಲಕ ಕೇಳಿಕೊಳ್ಳುತ್ತೆನೆ.

ಕನ್ನಡದಲ್ಲಿ ಇನ್ನೂ ಆಗಬೇಕಾದ ಕೆಲಸ ಬಹಳ ಇದೆ. ಇದನ್ನು ಅನೇಕ ಮಾನ್ಯ ಸದಸ್ಯರು ಈಗಾಗಲೇ ಪ್ರಸ್ತಾಪ ಮಾಡಿದ್ದಾರೆ. ಒಂದು ವಿಷಯದ ಬಗ್ಗೆ ನಾನು ಒಂದೆರಡು ಮಾತುಗಳನ್ನು ಹೇಳುತ್ತೇನೆ ನಾವು ಎಲ್ಲಾದಕ್ಕೂ ಮೊದಲು ಮನಸ್ಸು ಮಾಡಬೇಕು. ಎಕೆಂದರೆ ಒಲ್ಲದ ಗಂಡನಿಗೆ ಮೊಸರಿನಲ್ಲಿ ಕಲ್ಲು ಸಿಕ್ಕುವುದು. ಕನ್ನಡದಲ್ಲಿ ಏನಾದರೂ ಹೇಳಿದರೆ ಅದಕ್ಕೆ ಅರ್ಥವೇ ಇಲ್ಲವೇನೋ ಎಂಬಂತೆ ಕೆಲರ ಭಾವನೆ ಇದೆ. ಅಂಥವರು ಇಂಗ್ಲಿಷ್ ಊಟಮಾಡಿ ಅದರಲ್ಲಿಯೇ ಮಲಗುತ್ತಿರುವುದು ಬಹಳ ವಿಚಿತ್ರ ಸನ್ನಿವೇಶ. ಇದು ಸನ್ನಿವೇಶದ ತಪ್ಪು ಅವರ ಮೇಲೆ ತಪ್ಪು ಆರೋಪಿಸುವದಿಲ್ಲ. ಕಾಲಕ್ಕೆ ತಕ್ಕಹಾಗೆ ಅಂಥವರುತಮ್ಮ ಮನೋಭಾವನೆ ಬದಲಾಯಿಸುವುದಿಲ್ಲವೇ ? ಅಂಥವರ ಬಗ್ಗೆ ನಾವು ಬಹಳ ವಿಷಾದಪಡಬೇಕಾಗಿದೆ. ಇವತ್ತು ಸರಕಾರದವರು ಯಾವುದೇ ಒಂದು ವಿಷಯ ಬಂದರೂ ತುರ್ತುಪರಿಸ್ಥಿತಿಯನ್ನು ಮುಂದೆ ತರುತ್ತಿದ್ದಾರೆ. ಆದರೆ ಮಂತ್ರಿಮಂಡಲವನ್ನು ಸಣ್ಣದು ಮಾಡಬೇಕೆಂಬ ವಿಷಯ ಬಂದಾಗ ಮಾತ್ರ ಈ ತುರ್ತು ಪರಿಸ್ಥಿತಿ ಅವರ ಮುದೆ- ಬರುವುದಿಲ್ಲ. ಕನ್ನಡದಲ್ಲಿ ಶಬ್ದಕೋಶ, ವಿಶ್ವಕೋಶ ಸಿದ್ದಮಾಡತಕ್ಕದು ಇದೆ. ಇದು ಸಂಪೂರ್ಣವಾಗಿನಿಂತಿದೆ. ಆ ರೀತಿ ಮಾಡದೆ, ಅದಕ್ಕೆ ಹಣ ಒದಗಿಸಬೇಕು. ತುರ್ತುಪರಿಸ್ಥಿತಿ ಮುಂದೆ ಕೆಲಸ ಕುಂಠಿತವಾಗಬಾರದು. ಟೈಪ್‌ರೈಟರ್ ವಿಷಯವೂ ಅಷ್ಟೇ. ಹೀಗೆ ಅನೇಕ ಸಾಧನೇಗಳನ್ನು ಸರಕಾರ ಸಿದ್ಧಮಾಡಬೇಕಾಗಿದೆ. ಟೆಕ್ಸ್ಟ್‌ಬುಕ್ ವಿಷಯವೂ ಇದೆ. ಇದರಲ್ಲಿ ವ್ಯಾಪಾರದ ದೃಷ್ಟಿಗೆ ಅವಕಾಶ ಕೊಡಬಾರದು, ನಮ್ಮ ಕನ್ನಡ ರಾಜ್ಯದಲ್ಲಿ ಪ್ರಾಥಮಿಕ ವಿದ್ಯಾಭ್ಯಾಸ ಪ್ರೌಢ ವಿದ್ಯಾಭ್ಯಾಸ ವಿಶ್ವವಿಧ್ಯಾನಿಲಯ ವಿದ್ಯಾಭ್ಯಾಸ ಕನ್ನಡ ಮಾಧ್ಯಮದ ಮೂಲಕವೇ ಆಗಿರಬೇಕು ಎಂಬುದು ನಮ್ಮ ಆಶಯ. ಈ ತತ್ವವನ್ನು ಎಲ್ಲ ಭಾಷೆ ತಜ್ಞರೂ ಒಪ್ಪುತ್ತಾರೆ. ಮಾತೃಭಾಷೆಯಲ್ಲಿ ಆಗುವಷ್ಟು ವಿಷಯ ಸಂಗ್ರಹಣೆ ಬೇರೆ ಭಾಷೆಯಲ್ಲಿ ಆಗುವುದ ಸಾದ್ಯವಿಲ್ಲ. ಆದುದರಿಂದ ಇದನ್ನು ಮೊದಲು ಕಾರ್ಯಗತ ಮಾಡಬೇಕಾಗಿದೆ. ಇದುವರೆಗೆ ಆಗದೇ ಇರುವುದು ನಮ್ಮ ದುರದೃಷ್ಟ. ಶ್ರೀ ಕೆ.ವಿ. ಪುಟ್ಟಪ್ಪನವರು ವಿಶ್ವವಿದ್ಯಾನಿಲಯದ ವೈಸ್‌ಚಾನ್ಸಲರ್ ಆಗಿದ್ದಾಗ್ಗೆ ಕನ್ನಡವು ಶಿಕ್ಷಣ ಮಾಧ್ಯಮವಾಗಬೇಕು ಎಂದು ಕೆಲವು ಕ್ರಮಗಳನ್ನು ತೆಗೆದುಕೊಂಡಿದ್ದರು. ಶ್ರೀಮತಿ ನಾಗರತ್ನಮ್ಮನವರು ಮೈಸೂರು ಮಹಾರಾಣಿ ಕಾಲೇಜ್ ಬಗ್ಗೆ ಒಂದು ಮಾತನ್ನು ಹೇಳಿದರು

. 12 ಜನ ವಿದ್ಯಾರ್ಥಿನಿಯರು ಕನ್ನಡ ಮಾಧ್ಯಮದ ಮೂಲಕ ಪರೀಕ್ಷೆಗೆ ಕುಳಿತು ಎಲ್ಲರು ಬಿ.ಎ. ಪಾಸ್ ಆಗಿದ್ದಾರೆ. ಕನ್ನಡ ಮಾಧ್ಯಮ ತೆಗೆದುಕೊಂಡವರಿಗೆ ಶಿಕ್ಷಣ ಮಂದುವರಿಸಲು ಅವಕಾಶ ಇಲ್ಲದ ಮೂಲಕ ಬೇರೆ ಕಡೆ ಕಳಿಸುವುದಕ್ಕೆ ಒತ್ತಾಯ ತಂದಿದ್ದಾರೆಂದು ಕೇಳಿದ್ದೇನೆ ಈ ರೀತಿ ಮಾಡುವುದರಿಂದ ಕನ್ನಡಕ್ಕೆ ದ್ರೋಹ ಮಾಡಿದಂತಾಗುತ್ತದೆ. ಕೆಲವು ಅಧಿಕಾರಿಗಳು ತಮ್ಮ ಅಧಿಕಾರವನ್ನು ದುರುಪಯೋಗಪಡಿಸುತ್ತಿದ್ದಾರೆ. ಇದು ಸರಿಯಲ್ಲ. ಈ ರೀತಿ ಆತಂಕ ಒಡ್ಡುವುದು ಸರಿಯಲ್ಲ, ಕನ್ನಡ ಭಾಷೆಗೆ ಕನ್ನಡ ಜನರಿಗೆ ದ್ರೋಹ ಬಗೆದು ಕೆಟ್ಟತನ ಮಾಡುತ್ತಿದ್ದಾರೆಂದು ಬಹಳ ವ್ಯಸನದಿಂದ ಈ ಸಂದರ್ಭದಲ್ಲ ಹೇಳಬೇಕಾಗಿದೆ. ಹೀಗಿರುವಾಗ ಸರಕಾರ ಕಣ್ಣು ಮುಚ್ಚು
ಕಳಿತಕೊಳ್ಳಬಾರದು.

ಇನ್ನು ಪಠ್ಯಪುಸ್ತಕಗಳ ವಿಚಾರವಾಗಿ ಅನೇಕರು ಹೇಳಿದರು. ಇಂತಹ ಪಠ್ಯಪುಸ್ತಕ ಗಳ ಬಗ್ಗೆ ನಾವು ಇನ್ನು ಅನೇಕ ವಿಷಯಗಳನ್ನು ವಿಚಾಮಾಡಬೇಕಾಗಿದೆ. ಯಾವ ತರಹದ ಪಠ್ಯಪುಸ್ತಕಗಳನ್ನಿಡಬೇಕು ಎನ್ನುವುದನ್ನು ನಾವು ಯೋಚನೆ ಮಾಡಬೇಕು. ಶ್ರೀಮಾನ್ ಮುಕ್ಕಣ್ಣಪ್ಪನವರು ಹಿಂದೆ ಒಂದು ಇಂಗ್ಲೀಷ್ ಚರಿತೆ ಪುಸ್ತಕವನ್ನು ತಂದು ಇಲ್ಲಿ ಓದಿದ್ದರು. ಇಂತಹ ಚರಿತ್ರೆಗಳೂ ಇರುತ್ತದೆ. ಈ ಸಂದರ್ಭದಲ್ಲ ಕನ್ನಡ ಶಿಕ್ಷಣ ಮಾಧ್ಯಮವಾಗಬೇಕಾದರೆ ನಮ್ಮ ಪ್ರೈಮರಿ ವಿದ್ಯಾಭ್ಯಾಸದಿಂದ ಪ್ರೌಢ ವಿದ್ಯಾಭ್ಯಾಸದಿಂದ ವಿಶ್ವವಿದ್ಯಾನಿಲಯದವರಿಗೆ ಕನ್ನಡ ಮಾಧ್ಯಮ ಇರಬೇಕಾದುದು ಅತ್ಯಾವಶ್ಯಕ, ಇದಕ್ಕೆ ಪೂರ್ಣ ಬೆಂಬಲವನ್ನು ಎಲ್ಲರೂ ಕೊಡಬೇಕು . ಹಾಗಿಲ್ಲದೇ ಹೋದರೆ ಈ ಉದ್ದೇಶವನ್ನು ಸಾಧನೆ ಮಾಡಿದಂತಗುವುದಿಲ್ಲ ಎಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ಇಷ್ಟು ಹೇಳಿ ಮಸೂದೆಯಲ್ಲಿ ಹೇಳಿರುವವಂತೆ ಕನ್ನಡವನ್ನು ಆಡಳಿತ ಭಾಷೆಯಾಗಿ ಮಾಡುವುದಕ್ಕೆ ಮತ್ತು ಕನ್ನಡದಲ್ಲಿಯೇ ನಮ್ಮ ರಾಜ್ಯದಲ್ಲಿ ಶಿಕ್ಷಣ ದೊರೆಯುವಂತೆ ಮಾಡುವುದಕ್ಕೆ ತಕ್ಕ ಕಾರ್ಯಕ್ರಮಗಳನ್ನು ತೆಗೆದುಕೊಳ್ಳು ಬೇಕೆಂದು ಹೇಳಿ ನನ್ನ ಈ ನಾಲ್ಕು ಮಾತುಗಳನ್ನು ಮುಗಿಸುತ್ತೆನೆ.

ಶ್ರೀಮತಿ ರತ್ನಮ್ಮ ಮಾಧವರಾವ್ (ಶಿವಮೊಗ್ಗ) - ಸನ್ಮಾನ್ಯ ಸಭಾಪತಿಗಳೇ, ಕನ್ನಡ ನಾಡಿನ ಮುಖ್ಯ ಮಂತ್ರಿಗಳು ನಮ್ಮ ಮುಂದೆ ಇಟ್ಟಿರುವ ಕನ್ನಡವನ್ನು ರಾಜ್ಯಭಾಷೆಯಾಗಿ ಮಾಡಬೇಕೆನ್ನುವ ಮಸೂದೆಯನ್ನು ನಾನು ಸಂತೋಷದಿಂದ ಸ್ವಾಗತಿಸುತ್ತೇನೆ. ಮತ್ತು ಹೃತ್ಪೂರ್ವಕವಾಗಿಯೂ ಸ್ವಾಗತಿಸುತ್ತೇನೆ. ಈ ಮಸೂದೆ ತಡವಾಗಿ ಬಂತು ಎನ್ನುವುದಕ್ಕೆ ಬದಲಾಗಿ ನಮ್ಮ ಮುಖ್ಯ ಮಂತ್ರಿಗಳು ಬಂದ ಅಲ್ಪ ಅವಧಿಯಲ್ಲೀ ಈ ಮಸೂದೆಯನ್ನು ತಂದದಕ್ಕಾಗಿ ನಾನು ಸಂತೋಷದಿಂದ ಅವರನ್ನು ಅಭಿನಂದಿಸುತ್ತೇನೆ.

ಈ ಮಸೂದೆಯಲ್ಲಿ ಹೇಳಿರುವಂತೆ ಹಂತ ಹಂತವಾಗಿ ಇದನ್ನು ಜಾರಿಗೆ ತರಬೇಕೆಂದು ಇಲ್ಲಿ ಸೇರಿಸುವುದು ಸರಿಯಾಗಿದೆ ಎಂದು ನನ್ನ ಅಭಿಪ್ರಾಯ. ಏಕೆಂದರೆ ಒಂದೇ ಸಲ ಜಾರಿಗೆ ಇದನ್ನು ತರಬೇಕೆಂದರೆ ಬಹಳ ಕಷ್ಟವಾಗುತ್ತದೆ. ಕನ್ನಡದ ಅಭಿಮಾನಕ್ಕಾಗಿ ಕನ್ನಡದಲ್ಲಿಯೇ ಎಲ್ಲ ಮಾತನಾಡಬೇಕು ಎಂದು ಮಾತನಾಡುವಾಗ



ಎಷ್ಟೋ ಸಂದರ್ಭಗಳಲ್ಲಿ ಆಂಗ್ಲಭಾಷೆಯೂ ತಾನೇ ತಾನಾಗಿ ಒಂದು ಸಲ ಬರುತ್ತದೆ. ಅದುದರಿಂದ ಒಂದೇ ಸಾರಿ ಇದನ್ನು ಜಾರಿಗೆ ತರುವುದಕ್ಕಿಂತ ಹಂತ ಹಂತವಾಗಿ ತರುವುದು ಒಳ್ಳೆಯದು.

ಇನ್ನು ಕನ್ನಡ ಟೈಪುರೈಟರುಗಳು ಬಂದಿದ್ದರೂ ಇನ್ನೂ ಅಷ್ಟಾಗಿ ಬಳಕೆಗೊ ಬಂದಿಲ್ಲ ಕನ್ನಡ ಟೈಪ್‌ರೈಟರುಗಳೇನ್ನೋ ಎಲ್ಲಕಡೆಗೂ ಬಂದಿದೆ. ಕೆಲವು ತಾಲ್ಲೂಕು ಬೋರ್ಡುಗಳಿಗೂ ಬಂದಿರುವುದನ್ನು ನೋಡಿದ್ದೇನೆ. ಆದರೆ ಅದರ ಉಪಯೋಗ ಸರಿಯಾಗಿ ಆಗುತ್ತಿಲ್ಲ. ಇದಕ್ಕೆ ಕಾರಣವೇನು ಎಂದರೆ ಕನ್ನಡ ಟೈಪ್‌ರೈತರನ್ನು ಕಲಿತ ಜನ ದೊರಕದೆ ಇರುವುದು ಇದಕ್ಕೋಸ್ಕರ ಕನ್ನಡ ಟೈಪ್‌ರೈಟರ್‌ನ್ನು ಕಲಿಸುವಂತ ತರಬೇತಿ ಕೇಂದ್ರವೊಂದನ್ನು ಸರಕಾರದವರೆ ತೆರೆದರೆ ಬಹಳ ಅನುಕೂಲವಾಗುತ್ತದೆ. ಇದರ ಬಗ್ಗೆ ನನ್ನ ಒಂದು ಸಲಹೆ ಇದೆ ಗಂಡಸರಿಗಿಂತ ಹೆಚ್ಚಾಗೀ ಎಸ್ ಎಸ ಎಲ್ ಸಿ ಆಗಿರತಕ್ಕಂತಹ ಎಷ್ಟೋ ಹೆಣ್ಣುಮಕ್ಕಳು ಕೆಲಸವಿಲ್ಲದೆ ತಿರುಗಾಡುತ್ತಿದ್ದಾರೆ . ಇಂತಹ ಕೇಂದ್ರವೊಂದನ್ನು ತೆರೆದು ಇಲ್ಲಿ ಕನ್ನಡ ಟೈಪ್‌ರೈಟರ್‌ಗಳನ್ನು ಬಗ್ಗೆ ತರಬೇತಿ ನೀಡಿದರೆ ಇಂತಹ ಹೆಣ್ಣು ಮಕ್ಕಳು ಕಲಿಯಲು ಸಹಾಯವಾಗುತ್ತದೆ. ಇಂತಹ ಒಂದು ಕೇಂದ್ರವನ್ನು ಸರ್ಕಾರ ತೆರೆಯಬೇಕೆಂದು ನನ್ನ ಸಲಹೆ.

ಕನ್ನಡ ಟೈಪ್‌ರೈಟರ್ ಯಂತ್ರವನ್ನು ಇನ್ನೂ ಎಷ್ಟೊ ಜನರು ತಯಾರಿಸಿದ್ದಾರೆ. ಅವೆಲ್ಲವನ್ನೂ ಪರಿಶೀಲಿಸಿ ಇಂತಹ ಕನ್ನಡ ಟೈಪ್‌ರೈಟರ್ ಯಂತ್ರಗಳನ್ನು ತಯಾರಿಸಿರುವಂತಹ ವರೆಲ್ಲರಿಗೂ ಪ್ರೋತ್ಸಾಹ ಕೋಡಬೇಕಾದುದು ಅತ್ಯವಶ್ಯಕ ಎಂದು ನನ್ನ ವಿನಂತೆ. ಒಟ್ಟಿನಲ್ಲಿ ಈ ಕನ್ನಡ ರಾಜ್ಯ ಭಾಷೆಯ ಮಸೂದೆಗೆ ಒಬ್ಬಬರು ಹೊರತಾಗಿ ಎಲ್ಲರೂ ಬೆಂಬಲ ನೀಡಿದ್ದಾರೆ. ಇದನ್ನು ಅನುಮೋದಿಸಿ ಎಲ್ಲರೂ ಒಮ್ಮತದಿಂದ ತಮ್ಮ ಅನುಮೋದನೆಯನ್ನು ಕೊಡಬೇಕೆಂದು ಹೇಳಿ ಮಾನ್ಯ ಅಧ್ಯಕ್ಷರು ಇಷ್ಟು ಮಾತನಾಡಲು ಆವಕಾಶ ಕೊಟ್ಟಿದ್ದಾಕ್ಕಾಗಿ ಅವರನ್ನು ವಂದಿಸುತ್ತೇನೆ.

## ಭೂಸುಧಾರಣೆ ಕುರಿತು, 1965

ಮಾನ್ಯ ಅಧ್ಯಕ್ಷರೇ, ಈ ಭೂಸುಧಾರಣಾ ತಿದ್ದುಪಡಿ ಮಸೂದೆ ಸ್ವಾತಂತ್ರ್ಯಾನಂತರ ಭಾರತದಲ್ಲಿ ನಮ್ಮ ದೇಶದ ಹೊಲ, ಗದ್ದೆ ಹಾಗೂ ತೋಟಗಳಿಗೆ ಅನ್ವಯವಾಗುವುದರಲ್ಲ ನಡೆದಿರುವ ಒಂದು ದೋಡ್ಡ ದುರಂತ ನಾಟಕದ ಚಿತ್ರ ಇದ್ದಂತೆ ಇದೆ. 1947ನೇ ಇಸವಿಯಲ್ಲಿ ಈ ದೇಶಕ್ಕೆ ಸ್ವಾತಂತ್ರ್ಯ ಬಂತು 17 ವರ್ಷಗಳು ಕಳೆದು ಹೋದವು ಆದಾಗ್ಯೂ ಉಳುಮೆ ಮಾಡತಕ್ಕ ರೈತನಿಗೆ ಸ್ವಾಂತಂತ್ರ್ಯ ದೊರೆಯುಲಿಲ್ಲ. ಅವನು ಬಂಧನದಿಂದ ಪಾರಾಗಲು ಸಾಧ್ಯವಾಗಿಲ್ಲ. ಹಾಗೂ ಹೀಗೂ ಭೂಸುಧಾರಣೆಯನ್ನು ತರುತ್ತೇವೆ.

ಅಗೋ ತೆಂದೆವು, ಇಗೋ ತಂದೆವು ಇನ್ನೇನು ಮಸೂದೆ ಬರುವುದರಲ್ಲಿದೆ, ರಾಷ್ಟ್ರಾಧ್ಯಕ್ಷರು ಒಪ್ಪಿಗೆಗೆ ಹೋಗಿ ವಾಪಸ್ಸು ಬರುವುದರಲ್ಲಿದೆ, ತಿದ್ದುಪಡಿ ತರುತ್ತೇವೆ ಎನ್ನುವ ಒಂದೇ ರಾಗವನ್ನು ಹಾಡುತ್ತಾ 17 ವರ್ಷಗಳನ್ನು ಕಳೆದಿದ್ದಾರೆ. ಮಾನ್ಯ ಸದಸ್ಯರಾದ ಶ್ರೀಮಾನ್ ಕಡಿದಾಳ್ ಮಂಜಪ್ಪನವರಿಗೂ ಗೋತ್ತಿರುವ ಹಾಗೆ ಅನೇಕ ಸಂಸಾರಗಳು ಅಥವಾ ಈ ಮಸೂದೆಯ ಸೂತ್ರವನ್ನು ಹೋತ್ತಿರುವ ನಾಟಕದ ನಾಯಕ ನಾಯಕಿಯರಗಳು ಮಸಣದ ಹಾದಿಯಲ್ಲಿ ಹೋಗಿದ್ದಾರೆ ಎಂದು ಹೇಳಲು ಬಹಳ ದುಃಖಪಡುತ್ತೇನೆ. ಆದಾಗ್ಯು ಇಂತಹ ಒಂದು ಸನ್ನಿವೇಶದಲ್ಲಿ ಯಾವ ರೃತರು ಹಗಲೂ ಇರುಳೂ ಹಂದಿ ಅಥವಾ ನಾಯಿ ಇಂತಹ ಪ್ರಾಣಿಗಳಿಗಿಂತ ಕೀಳಾಗಿ ತಮ್ಮ ಯೊಜನೆಗಳನ್ನು ಮಾಡುವುದರಲ್ಲಿ ದೇಶದಲ್ಲಿ ದುಡಿಯುತ್ತಿದ್ದಾರೆ. ಅವರಿಗೆ ರಕ್ಷಣೆ ಕೊಡುವುದಕ್ಕೆ ಈ ರಾಜ್ಯಕ್ಕೆ ಅಗಲಿಲ್ಲ. ಅಂತಹ ಒಂದು ಸನ್ನವೇಶ ಇವೊತ್ತು ಕೂಡ ಇದೆ. ಈಗಲು ಕಾಂಗ್ರೆಸ್ಸು ಪಕ್ಷದ್ವವರು ಉಳುಮೆ ಮಾಡ ತಕ್ಕ ರೈತನಿಗೆ ಅವನು ಉಳುಮೆ ಮಾಡತಕ್ಕ ಜಮಾನಿನ ಪಟ್ಟೆಕೊಡದಂತೆ ಮಾಡುತ್ತಿದ್ದಾರೆ. ಏನೋ ಒಂದು ದೊಡ್ಡ ಉಪಕಾರ ಮಾಡುತ್ತೇವೇನೋ ಎಂದು ಭಾವಿಸಿದ್ದಾರೆ. ಇದು ಬಹಳ ವಿಷಾದದ ಸಂಗತಿ. ಒಂದು ಕಡೆ ಆಹಾರದ ಉತ್ಪತ್ತಿಯನ್ನು ಹೆಚ್ಚುಮಾಡಬೇಕು ಎನ್ನುವ ಕೂಗು ಎದ್ದಿದೆ. ಲಕ್ಷಗಟ್ಟಲೆ ಹಣ ಸೊಸೈಟಿಗಳಲ್ಲಿ ಕೊಟ್ಟು ಹೆಚ್ಚು ಆಹಾರ ಬೆಳೆಯಬೇಕು ಎಂದು ಹಳ್ಳಿಗಳ ಕಡೆ ಹೇಳುತ್ತಿದ್ದಾರೆ. ಇದರ ಮೇಲೆ ಉಳುವವನೇ ಹೊಲದೊಡೆನಾಗಬೇಕು ಎನ್ನುವ ಮಾತನ್ನು ಕಾಂಗ್ರೆಸ್ಸಿನವರು ತತ್ವಶ : ಒಪ್ಪಿಕೊಂಡು ಆದನ್ನು ಕಾರ್ಯಗತಮಾಡಿಲ್ಲ. ಈ ವಿಳಂಬ ಹಾಗೂ ಅನಿಶ್ಚಿತತೆ ಕಳೆದ 17 ವರ್ಷಗಳಿಂದಲೂ ಈ ದೇಶದಲ್ಲಿ ಇದೆ ಇದರೊಳಗೆ ದೇಶದಲ್ಲಿ ಆಹಾರದ ಉತ್ಪಾದನೆ ಹೆಚ್ಚಾಗಿಲ್ಲ. ರೈತನ ಅರ್ಥಿಕ ಸ್ಥಿತಿ ಸುಧಾರಣೆಯಾಗಿಲ್ಲ. ಈ ದೇಶದಲ್ಲಿ ಮೂರು ಯೋಜನೆಗಳನ್ನು ಮಾಡಿದರೂ ಕೂಡ ಇವೊತ್ತಿನ ಸ್ಥಿತಿಯಲ್ಲಿ ಇನ್ನೂ ಆಹಾರದ ಅಭಾವದ ಪರಿಸ್ಥಿತಿಇದೆ. ಮತ್ತು ನಮ್ಮ ರೈತನ ಆದಾಯ, ಜೀವನ ಮಟ್ಟ ಹಿಂದಕ್ಕೆ ಹೇಗಿತ್ತೋ ಈ ಗಲೂ ಹಾಗೇ ಇದೆ. ಇದನ್ನು ನಾವು ನೋಡುತ್ತಿದ್ದೇವೆ. ಈ ಸುಧಾರಣೆಗಳಲ್ಲಿರುವ ಕಲಮುಗಳನ್ನು ಚರ್ಚಿಸವುದರಲ್ಲೇ ಆನಂದವಾಗುತ್ತಿದೆ.

---

ವಿ. ಸ. ನಡವಳಿಕೆಗಳು, ದಿನಾಂಕ 19.04.1965



ಸ್ವಾಮೀ, ಮಾನ್ಯ ಸದಸ್ಯರಾದ ಶ್ರೀಮಾನ್ ರಮೇಗೌಡ ಹೇಳಿದ ಹಾಗೆ ನಂಬಿದ ಕೋಣಕರು ಹಾಕುವ ಹೋತ್ತು ಬಂದಿದೆ. 1959ನೇ ಇಸವಿಯಲ್ಲಿ ನಡೆದಂತಹ ನಾಗಪುರದ ಆಧಿವೇಶನದಲ್ಲಿ ಆಳುವ ಪಕ್ಷವಾದ ಕಾಂಗ್ರೆಸ್ಸು ಈ ಭೊಮಿಗೆ ಸಂಬಂಧಪಟ್ಟ ಸಧಾರಣೆಯ ಬಗ್ಗೆ ಒಂದು ನಿರ್ಣಯವನ್ನು ಅಂಗೀಕರಿಸಿತು. ಆ ನಿರ್ಣಯದಲ್ಲಿ ಅವರು ಈ ರೀತಿ ಹೇಳಿದ್ದಾರೆ.

" The orgnisation of the Village should be based on the Village panchayats and village C0-opreatives, both of which shoudl have adeqate powers and rasorces to discharge the functions allotted to them."

" The furtre agrarian pattern should be that of C0-operative joint farming, in which the land will be pooled for joint, cultivation, the farmers continuing to retain their property rights and getteing a share from the net prduce in proporation to their land"

ಇದನ್ನು ಹೇಳುತ್ತಾ

" The ceiling should be fixed on existing and future holdings and ligistation to this effect as well as for the abolition of intermedaires shlould be completed in all Staes by the end of 1959".

ಈ ಎಲ್ಲ ಕಾರ್ಯಗಳನ್ನೂ ಮಾಡುವುದರ ಸಲುವಾಗಿ ಈ ಮಸೂದೆನ್ನು ತರಬೇಕು, ಉಳುಮೆ ಮಾಡತಕ್ಕ ಹಾಗೂ ಒಕ್ಕಲು ಮಾಡುವವರನ್ನು ಭೂಮಿಯಿಂದ ಎಬ್ಬಿಸಿದಂತೆ ನೋಡಿ ಕೊಳ್ಳಬೇಕು ಇತ್ಯಾದಿ ಇತ್ಯಾತದಿಗಳನ್ನು ಮಾಡಬೇಕೆಂದು ಇದರಲ್ಲಿ ಹೇಳಿದ್ದಾರೆ. ಆದರೆ 61ನೇ ಇಸವಿಯಲ್ಲಿ ಮಾನ್ಯ ಸದಸ್ಯರಾದ ಶ್ರೀಮಾನ್ ಕಡಿದಾಳ್ ಮಂಜಪ್ಪನವರು ಕೂಡ ಇಂತಹ ಒಂದು ಮಸೂದೆಯನ್ನು ತರುವುದಕ್ಕೆ ತಮ್ಮ ಕಾಂಗ್ರೇಸ್ಸು ಪಕ್ಷದವರುಗಳಿಂದಲೇ ಎಷ್ಟೋ ಅರೋಪಣೆಗಳನ್ನು ಕೇಳಬೇಕಾಯಿತು ಮತ್ತು ಯಾವ ಯಾವ ರೀತಿಯಲ್ಲಿ ಇದಕ್ಕೆ ಅಡಚಮೆಯಾಯಿತು ಎನ್ನವುದನ್ನು ಹೇಳಿಕೊಂಡಿದ್ದಾರೆ. ಇಂತಹ ಒಂದು ಕಾನೂನು ಕೂಡ ಕಾರ್ಯಗತವಾಗುವುದಕ್ಕೆ ಕಾಲ ಬರಲಿಲ್ಲ. ಭೂ ಮಾಲೀಕರು ನಮಗೆ ಅನ್ಯಾಯವಾಯಿತು ಎಂದು ಹೇಳುತ್ತಾ ಅವರುಗಳು ಕೋರ್ಟಿಗೆ ಹೋಗಿ ಇಂಜಂಕ್ಷನ್ನು ಆರ್ಡರು ತಂದು ತಡೆ

ಮಾಡಿದರು ಎಂದು ರಾಜ್ಯದ ಕಂದಾಯ ಮಂತ್ರಿಗಳು ಕೋರ್ಟಿಗೆ ಹೋಗಿರತಕ್ಕ ವಿವಾದಾಸ್ಪದವಾದ ವಿಧಿಗಳನ್ನು ಕೈಬಿಟ್ಟು ಎಲ್ಲಿ ಈ ವ್ಯವಸ್ಥೆ ಜಾರಿಯಲಿಲ್ಲವೋ ಅಲ್ಲಿ ಕೂಡ ಇದು ಜಾರಿಗೆ ಬರುವಂತೆ ಮಾಡಲಿಲ್ಲ, ಮತ್ತು ಇನ್ನೇನೋ ಕಷ್ಟಗಳು ಬಂದವು ಎಂದು ಇದನ್ನು ಮುಂದೂಡತ್ತಾ ಕಾಲಹರಣ ಮಾಡಿಕೊಂಡು ಬಂದರು.

ಬೊಂಬಾಯಿ ರಾಜ್ಯದಲ್ಲಿ ಇರತಕ್ಕ ರೈತರ ಬಗ್ಗೆ ಮಾನ್ಯ ಸದಸ್ಯರಾದ ಶ್ರೀಮಾನ್ ವಿ. ಎಸ್. ಪಾಟೀಲರವರು ಹೇಳಿದ್ದಾರೆ. 1956ನೇ ಇಸವಿಯಲ್ಲಿ ರಾಜ್ಯಕ್ಕೆ ಬೊಂಬಾಯಿ ಕರ್ನಾಟತ ಪ್ರದೇಶ ಬಂದ ಮೇಲೆ ಅಲ್ಲಿ ಮಹಾರಾಷ್ಟ್ರ ರಾಜ್ಯದಲ್ಲಿ ಈ ರಾಜ್ಯಕ್ಕೆ ಉಳಿದಿರತಕ್ಕಂಥ ಕಾನುನು ಆಧಾರದ ಮೇಲೆ ರೈತರು ಭೂಮಾಲೀಕರು ಆದರು. ಆಗ್ಗಿ ಶ್ರೀ ಎಂ. ಪಿ. ಪಿಟೀರಲು ರೈತರು ಹಿತ ದೃಷಿಯಿಂದ ಕಲಮುರದ್ದು ಮಾಡುತ್ತೇವೆ ಜಾರಿಗೆ ಕೊಡುವುದಿಲ್ಲ ಎಂದು ಹೇಳಿದರು 1956ನೇ ಇಸವಿಯಿಂದ ಕರ್ನಾಟಕ ಅದ ಮೇಲೆ ಆ ಭಾಗದ ರೈತರಿಗೆ ಇದರಿಂದ ಹಾನಿ ನಷ್ಟಆಯಿತು. ಇದಕ್ಕೆ ಒಂದು ಉದಾಹರಣೆ ಕೋಡುತ್ತೇನೆ. ಒಂದು ಪ್ರೋಜೆಕ್ಟಿನಲ್ಲಿ ಮಹಾರಾಷ್ಟ್ರ ಪ್ರದೇಶಕ್ಕೆ ಸೇರಿರತಕ್ಕಂಥ ಗೇಣಿದಾರರಿಗೆ ಭೂಮಿ ಮುಳುಗಡೆಯಾದ ಬಗ್ಗೆ ಪರಿಹಾರ ಕೊಡುವ ನೀತಿ ಇದೇ. ಆದರೆ ಕರ್ನಾಟಕ ಭಾಗದಲ್ಲಿ ಮಾತ್ರ ಪರಿಹಾರ ಸಿಕ್ಕುವುದಿಲ್ಲ ಇಂಥ ಏಕ ರೂಪತೆಯ ಕಾನುನು ತರುತ್ತಾರೆ. ಕರ್ನಾಟಕ ಏಕೀಕರಣವಾದ ಮೇಲೆ ಎಷ್ಟು ಕಾನೂನುಗಳನ್ನು ಜಾರಿಗೆ ಕೊಟ್ಟಿದ್ದೀರಿ ? ಏಕರೂಪತೆಯಾಗಲು ನಿಜವಾಗಿಯೂ ರೂಲ್ಸುಮಾಡಿ ಕಾರ್ಯಗತಮಾಡಿದ್ದೀರಾ ? ಈ ರೀತಿ ಸುಧಾರಮೆ ಮಾಡುವ ನಾಟಕವಾಡುತ್ತಿದ್ದೀರಿ. ಇದೊಂದು ದುರಂತ ನಾಟಕ ನಡೆಯುತ್ತಿದೆ ಎಂದು ಹೇಳಬಹುದು. ದುರದೃಷ್ಟವಶಾತ್ ಇಂದುಪ ರೈತರಲ್ಲಿ ಸಂಘಟನೆಯಲ್ಲಿ ಜಾಗ್ರತಿಯಿಲ್ಲ. ಸರಕಾರದ ವಿರೋಧವಾಗೀ ಹೋರಾಡಿ ಹಕ್ಕು ಸ್ಥಿರೀಕರಿಸುವ ಶಕ್ತಿ ಅವರಲ್ಲಿ ಇಲ್ಲ. ಇಂಥ ಸನ್ನಿವೇಶದಲ್ಲಿ ಈ ತಿದ್ದುಪಡಿಯನ್ನು ಮಾನ್ಯ. ಕಂದಾಯ ಸಚಿವರು ನಮ್ಮ ಮುಂದೆ ಇಟ್ಟಿದ್ದಾರೆ. 1974ನೇ ಇಸವಿಯಿಂದ ಈಚೀಗೆ ಭೂಮಾಲೀಕರಿಗೆ ಹೊರಲಾರದಷ್ಟು ಗೇಣಿ ತೆತ್ತಿದ್ದಾರೆ. ಅಂಥ ರೈತರನನ್ನು ಇಂದು ಮುಕ್ತ ಮಾಡಬೇಕು. ಸ್ವಾತಂತ್ರ್ಯ ಬಂದ ಮೇಲೆ ರಾಜಕೀಯ ಸಂತ್ರಸ್ಥರಿಗೆ ಐದು, ಎಕರೆ ಜಮೀನು ಕೊಟ್ಟಿದ್ದೀರಿ. ಇದಲ್ಲದೆ ಅನೇಕ ಲಕ್ಷ ಎಕರೆ ಜಮೀನು ಹಂಚಿದ್ದೀರಿ. ಜೀವನದಲ್ಲಿ ಬೇರೆ ಏನೂ ಮಾರ್ಗವಿಲ್ಲದೆ. ಬೇರೆ ಯಾವ ಕಸಬು ಗೋತ್ತು ಇಲ್ಲದೆ ಭುಮಿಯನ್ನೇ ನೆಚ್ಚಿಕೊಂಡು ಹೊಟ್ಟೆ ತುಂಬಿಕೊಳ್ಳುವುದಕ್ಕಾಗಿ ಕಾರಣಾಂತರದಿಂದ ಗೇಣೇದಾರನಾಗಿ ಭೂಮಿಯಲ್ಲಿ ಇರತಕ್ಕಂಥ ಮನ್ಷ್ಯನಿಗೆ ಸರಕಾದವರೇ ಖಾತೆ ಮಾಡಿಕೊಡುವುದಕ್ಕೆ ಸಾಧ್ಯವಿಲ್ಲವೇ ? ಇನ್ನೂ 20 ವರ್ಷ ಪ್ರೀಮಿಯಂ ಕೊಡಿ ಎಂದು ಹೇಳುತ್ತೀರಿ ? 48ನೇ ಕಲಮಿನ 4ನೇ ಸಬ್-ಕ್ಲಾಂಜನ್ನು ಹೊಡೆದು ಹಾಕಬೇಕು ಎಂದು ಮಾನ್ಯ ಕಂದಾಯ ಮಂತ್ರಿಗಳಿಗೆ ಕೇಳಿಕೊಳ್ಳುತ್ತೇನೆ. ಇದರಿಂದ ಸರಕಾರಕ್ಕೆ ಲುಕ್ಸಾನಾಗುವುದಿಲ್ಲ. ಸರಕಾರವೇನೂ ಮುಳುಗಿ ಹೋಗುವುದಿಲ್ಲ. ಸರಕಾರದ ಅರ್ಥಿಕ ವ್ಯವಸ್ಥೆ ಕುಸಿದು ಬೀಳುವುದಿಲ್ಲ. ರೈತನಿಗೆ ಪ್ರೀಮಿಯಂ ಭಾಧಕ ತಂದೊಡ್ಡಿದೆ.
" Where any tenant makes a statement That he is not willing t be registered as an occupant" ಭೂಮಿ ಬೇಡ ಎಂದು ಹೇಳುವವರು ಯಾರೋ



ಇರಬಹುದು . ಆದರೆ ಇವತ್ತಿನ ದಿವಸ ನಿಜವಾಗಿಯಾ ದುಡಿಯತಕ್ಕಂಥ, ರೈತಾಪಿ ಕೆಲಸ ಮಾಡತಕ್ಕಂಥ ಯಾವ ರೈತರೂ ತನಗೆ ಖಾತೆ ಹಾಕಿ ಕೊಡಬೇಡಿ ಎಂದು ಹೇಳುತ್ತಾನೇ ? ಅದನ್ನು ಊಹಿಸಿವುದಕ್ಕೂ ಸಾಧ್ಯವಿಲ್ಲ. ಕೆಲವು ಕಡೆ ಅಗದೇ ಇರಬಹುದು, ಇನ್ನಿತರ ಅನಾನುಕೂಲವಿಲಬಹುದು. ಇದನ್ನು ಟ್ರೆಬ್ಯುನಲ್ ವಿಚಾರ ಮಾಡಬೇಕು. ಅವನು ರಿಜಿಸ್ಟರ್ ಮಾಡಿಸಿ ಹೇಳಿಕೆ ಹೋಟ್ಟರೆ ಅವನ ಹೆಸರಿನಲ್ಲಿ ರಿಜಿಸ್ಟರ್ ಅಗತಕ್ಕದ್ದು ಎಂದು ಬರೆದು ಕೋಂಡಿದ್ದೀರಿ. ಇದು ಆಗಬಾರದು. All tenants entitled to be registrered as occupants shall be registered. Such lands shall be registrered in their names. ಹೀಗೆ ಸ್ಪಷ್ಟವಾಗಿ ಬರೆಯಬೇಕು ಯಾರು ಯಾರಿಗೆ ಸೆಕ್ಷನ್ 45ರ ಪ್ರಕಾರ ಪಟ್ಟಾಪಡೆಯತಕ್ಕ ಅಧಿಕಾರ ಬರುತ್ತದೆಯೇ ಅವರೇಲ್ಲರಿಗೂ ಪಟ್ಟಾ ಹಾಕಿ ಕೋಡತಕ್ಕದ್ದು, ಟ್ರೆಬ್ಯುನಲ್ ಪಟ್ಟಾ ಹಾಕಿಸಿ ಕೊಡಬೇಕು ಎಂದು ನಿರ್ದೇಶನ ಕೋಟ್ಟು ಹೈರೆಕ್ಟ್ ಮಾಡಬೇಕು. ಮಾಡಿ ಎಂದು ಬರೆದು ಅಂಥ ಲ್ಯಾಂಡ್ಸ ರಿಜಿಸ್ಟರ್ ಮಾಡಿ ಕೊಡಬೇಕು. ಪ್ರೀಮಿಯಂ ತೆಗೆದು ಕೊಳ್ಳಬಾರದು. ಮತ್ತೆ ಮತ್ತೆ ಈ ವಿಷಯವನ್ನು ಹೇಳುತ್ತಿದ್ದೇನೆ. ಇದನ್ನು ಪರಿಶೀಲನೆ ಮಾಡಬೇಕೆಂದು ಕೇಳಿ ಕೊಳ್ಳುತ್ತೇನೆ. ಕಳೆದ 17 ವರ್ಷಗಳಲ್ಲಿ ಅನೇಕ ಕಷ್ಟನಿಷ್ಠೂರಗಳನ್ನು ಅನುಭವಿಸಿ ಗೇಣಿ ವ್ಯವಸ್ಥೆಯಲ್ಲಿ ಸಿಕ್ಕುಬಿದ್ದು ಪಶುಗಿಂತ ಕಡೆಯಾಗಿ ಬದುಕಿದ್ದರೂ ಕೂಡ ಈ ಗೇಣಿ ಹೊಣೆಯಿಂದ ಅವನನ್ನು ಮುಕ್ತ ಮಾಡಿ, ಇನ್ನು ಪ್ರೀಮಿಯಂ ಹೊರೆ ಹೇರೇಬೇಡಿ ಎಂದು ಸರಕಾರಕ್ಕೆ ಕಳಕಳಿಯಿಂದ ವಿನಂತಿ ಮಾಡಿಕೊಳ್ಳುತ್ತೇನೆ.

ಸ್ವಾಮಿ, ಇನ್ನೊಂದು ಮಾತು ಕಾನೂನಿನಲ್ಲಿ ಇದೆ. ಸೆಕ್ಷನ್ 44ನೇ ವಿಧಿಯಲ್ಲಿ .................. ಡೆಪ್ಯೂಟಿ ಸ್ಪೀಕರ್-ಮಾದಲಿನ ಅಕ್ಟು ಈಗ ಚರ್ಚೆಗೆ ಇಲ್ಲ. ಈಗ ಸಭೆಯ ಮುಂದೆ ತಿದ್ದುಪಡಿ ಮಸೂದೆ ಎಷ್ಟು ಅಷ್ಟಕ್ಕೆ ಮಾತನಾಡಬೇಕು.

ಶ್ರೀ ಎಸ್. ಗೋಪಾಲ ಗೌಡ - ಅಕ್ಟನ್ನು ತಿದ್ದುಪಡಿ ಮಾಡಬೇಕು ಎಂದು ಸೂಚಿಸುತ್ತೇನೆ ಡೆಪ್ಯೂಟಿ ಸ್ಪೀಕರ್ಅದು ಇದರಲ್ಲಿ ಬರುವುದಿಲ್ಲ.

ಶ್ರೀ ಎಸ್. ಗೋಪಾಲ ಗೌಡ- 48ನೇ ತಿದ್ದುಪಡಿ ಯಲ್ಲಿ ಬರುತ್ತದೆ. 44ನೇ ಸೆಕ್ಷನ್‌ನಲ್ಲಿ " As soon as may be after the determinatioin of the non-resumable lands under sub-secion (4) of section 14, by each Tribunal, the State Government may by notification declare that with effect from such date as may be specified in such notification .............................. "

F-7

ಈ ಒಂದು ಮಾತು ಇದೆ. ಇದನ್ನು ಅನುಭವಿಸಿತದ್ದೇವೆ. ಸರ್ಕಾರ ನೋಟೀಫೈ ಮಾಡುವುದಿಲ್ಲ. ನನಗೆ ಒಂದು ಭಯ ಇದೆ. ಮಂಗಳೂರು ಜಿಲ್ಲೆಯನ್ನು ವಿನಾಯಿತಿ ಮಾಡಿ ಬಿಡಲಹುದು ಎಂದು. ಯಾತಕ್ಕೆಂದರೆ ಮಂಗಳೂರು ಜಿಲ್ಲೆಯೇ ಆಡಳಿತದಲ್ಲಿ ಇರುವುದು. ಆದುದರಿಂದ 5 ವರ್ಷ ಆದರೂ ನೋಟೀಫೈ ಮಾಡದಂತೆ ಅವರು ನೋಡಿಕೊಳ್ಳಬಹುದು. ಟ್ರೈಬ್ಯೂನಲ್ ಸೇರಬಹುದು ಬರವಣಿಗೆಯಲ್ಲಿ ಬರಬಹುದು. ಇದನ್ನು ಚೆಕ್ ಮಾಡುವುದು ಸರಿ. ಆದರೆ ಸರಕಾರವೇ ನೋಟೀಫೈ ಮಾಡದೇ ಹೋದರೆ ಇವರಿಗೆ ಪಟ್ಟಾ ಬರುವುದಿಲ್ಲ. ಪಟ್ಟಾ ಬರುವ ತನಕ ಇದೇ ರೀತಿ ಗೇಣಿದಾರರು ಮುಂದುವರಿಯುತ್ತಾರೆ ಆದ್ದರಿಂದ ಈ ಭಾಗ ತೆಗೆದು ಹಾಕಿದರೆ ಏನೂ ಅಪಾಯ ಇಲ್ಲ. ಟ್ರೈಬ್ಯೂನಲ್ ಆಯಾಯ ಗ್ರಾಮದಲ್ಲಿ. ವಿಚಾರಣೆ ಮಾಡಿ ರಿಕಾರ್ಡ್ ಆದ ತಕ್ಷಣ ಸರಕಾರ ಪಟ್ಟಾ ಕೊಡುವ ಏರ್ಪಾಟು ಮಾಡಬೇಕು. ಈ ವರ್ಷವೇ ಆದರೆ ಬಹಳ ಒಳ್ಳೆಯದು. ಸಾಕಷ್ಟು ನಿಮ್ಮ ಹತ್ತಿರ ಪಹಣಿ ಇದೆ ರಿಜಿಸ್ಟರ್ ಇದೆ ಎಲ್ಲಾ ಇದೆ. ತಂದಿರುವ ಕೆಲವು ತಿದ್ದುಪಡಿಗಳನ್ನು ಬಿಟ್ಟು ಬಿಡಬೇಕು ಎಂದು ಹೇಳುತ್ತೇನೆ. ನಿಜವಾಗಿಯೂ ಇನ್ನೂ ಕೆಲವು ತಿದ್ದುಪಡಿಗಳನ್ನು ತರಬೇಕಾಗಿತ್ತು ಕೇಂದ್ರ ಸರಕಾರದವರು ಪ್ಲಾನಿಂಗ್ ಕಮಿಷನ್ ಅವರು ಅದೇಶ ಕೊಟ್ಟಿದ್ದಾರೆ. ಏನೇನು ಆದೇಶ ಕೊಟ್ಟಿದ್ದಾರೆ ಎನ್ನುವು ದು ಕೂಡ ಸರಕಾರದ ಮುಂದೆ ಇದೆ. ಅದಕ್ಕೆ ಅನುಗುಣವಾಗಿ ಸರಕಾರದವರು ಸಮಗ್ರವಾದ ತಿದ್ದುಪಡಿ ತಂದಿಲ್ಲ. ಅದಕ್ಕಾಗಿ ಈ ಮಸೂದೆಯನ್ನು ತಾವು ಪುನ : ಸಾಕಷ್ಟು ವಿಮರ್ಶೆ ಮಾಡಬೇಕೆಂದು ನಾನು ಸರಕಾರದರನ್ನು ಕೇಳಿಕೊಳ್ಳುತ್ತೇನೆ. ಈ ವಿನಾಯಿತಿಗಳ ವಿಚಾರದಲ್ಲಿ ಶ್ರೈ ಕಡಿದಾಳರು ಹೇಳಿದ್ದಾರೆ. ಈ ವಿನಾಯಿತಿಗಳ ವಿಚತಾರವೂ ಎನ್ನತಕ್ಕ ಅನುಮಾನವೇ ಎಲ್ಲರಲ್ಲೂ ಇದ್ದುದರಿಂದ ಆ ಘಾರಂಗಳು ಯಾವುವೋ, ಅವೆಲ್ಲಿವೆಯೋ ಅದು ಒಬ್ಬರಿಗೂ ಗೋತ್ತಿಲ್ಲ. ಆದಾಗ್ಗೂ ಇಲ್ಲಿ ಇವರು ಯಾವುದೇ ಒಂದು ವರ್ಗವನ್ನು ತಮ್ಮ ದೃಷ್ಟಿಯಲ್ಲಿಟ್ಟುಕೊಂಡು ಇಲ್ಲಿ ಪದಗಳನ್ನು ಮಾತ್ರ ಬಹಳ ಎಚ್ಚರಿಕೆಯಿಂದ ಹಾಕಿಕೊಂಡು ಬಂದಿದ್ದಾರೆ. ಇಲ್ಲಿರತಕ್ಕ ಮುಖ್ಯ ಇಚಾರ ಅಂದರೆ, ಭೂಮಿಯನ್ನು ಉಳತಕ್ಕವನಿಗೂ ಮತ್ತು ಭುಮಿಯ ಮಧ್ಯೆ ಯಾರೂ ಇರಬಾರದು ಎಂಬುದು.ಬಹಳ ಮುಖ್ಯವಾದ ವಿಚಾರ, ಭೂಮಿಯ ಮಾಲೀಕತ್ವ ಯಾವತ್ತೂ ಸರ್ಕಾರದವರಲ್ಲಿರುತ್ತೆ. ಯಾವುದೋ ಒಂದು ಹಳ್ಳಿಯಲ್ಲಿ ಒಬ್ಬ ರೈತ ಕುಗ್ರಾಮಾವಸ್ಥೆಯಲ್ಲಿದ್ದುಕೊಂಡು ಅಲ್ಲಿ ಬೇರೆ ನಾಗರೀಕ ಪ್ರಪಂಚದ ಸಂಪರ್ಕ ಹೊಂದಲು ಯಾವ ಒಂದು ರಸ್ತೆ ಸಾರಿಗೆ ಅನುಕೂಲವೂ ಇಲ್ಲದೆ, ಅಂಥ ಕಡೆಯಲ್ಲಿದ್ದಕೊಂಡು ಉಳುಮೆ ಮಾಡುತ್ತದ್ದರೆ ನನ್ನ ದೃಷ್ಟಿಯಲ್ಲಿ ಅಂಥ ಮುನುಷ್ಯನಿಗೆ ತಿಂಗಳೊಂದಕ್ಕೆ 200 ರೂಪಾಯಿನ್ನಾದರೂ ಕೊಡಲೇಬೇಕು ಅಂತ ಹೇಳುತ್ತೇನೆ. ನಮಗೆ ಯಾವುದಾದರೊಂದು ಅಂಥ ಹೊಣೆಗಾರಿಕೆ ಇದ್ದರೆ ನಾವು ಅಷ್ಟು ದುಡ್ಡನ್ನು ಕೋಟ್ಟೇ ಕೋಬೇಕಾಗುವುದು. ಈ ಕಸುಬು ಅಂಥಾದ್ದು, ಈ ದಿವಸ ಇಲ್ಲಿ ಪೇಟೆಯಲ್ಲಿ ಫೋಕಿ ಮಾಡಿಕೊಂಡು ತಿರುಗುತ್ತಿರುವ ಒಬ್ಬ ಮನುಷ್ಯನಿಗೆ ಆ ಶೃಂಗೇರಿಯ ಹತ್ತಿರ ಎಲ್ಲಿಯೋ ಒಂದು ಕಡೆಯಲ್ಲಿ ಮಾಫಿಯಾಗಿ ಇಂತಿಷ್ಟು ಜಮೀನು ಕೊಡುತ್ತೇವೆಂದು ಹೇಳಿ ನೋಡಿ, ಆತನು ಅಲ್ಲಿಗೆ ಹೋಗುತ್ತಾನೇನೋ. ಅಂಥ ಕಡೆಗೆ ಹೋಗಿ ಕೆಲಸ ಮಾಡುವುದಕ್ಕೆ ತಯಾರಿಲ್ಲ. ಆಗ ತಮಗೇ ಗೊತ್ತಾಗುತ್ತದೆ



ಈ ಭೂಮಾಲೀಕತ್ವ ಯಾರಲ್ಲಿರಬೇಕು ಎಂಬುದು . ಆದರೆ ಇಲ್ಲಿ ಜಮೀನ್ದಾರನಿಗೆ ಯಾವ ರಕ್ಷಣೆ ಕೊಡಬೇಕು ಎನ್ನತಕ್ಕ ಪ್ರಶ್ನೆಯೇ ಉದ್ಭವಿಸುವುದಿಲ್ಲ. ಇಲ್ಲಿ ನಾವೆಲ್ಲರೂ ಮುಖ್ಯವಾಗಿ ಗಮನಿಸಬೇಕಾದ್ದು ಜಮೀನು ಉಳತಕ್ಕ ಮನುಷ್ಯನಿಗೆ ನಾವು ಯಾವ ಯಾವ ರಕ್ಷಣೆಗಳನ್ನು ಕೋಡಬೇಕು ಎಂಬುದೇ ಇಂದಿನ ಮುಖ್ಯ ಪ್ರಶ್ನೆ. ಅದನ್ನು ನಾವು ಈ ದಿವಸ ಕೈಬಿಟಲ್ಲಿ ಭೂಮಾಲೀಕ ಯಾರಿರಬೇಕು ಸರ್ಕಾರವೇ, ಸಾಹುಕಾರನೇ ಅಥವಾ ಸಕ್ಕರೆ ಕಂಪೆನಿಯವರೇ ಅಥವಾ ಮಠದವರೇ ಎಂಬುದನ್ನು ಅಲೋಚಿಸತಕ್ಕದ್ದು ಅನುಚಿತ. ಶ್ರೀಮಾನ್ ಎಂ.ವಿ,ಕೃಷ್ಣಪ್ಪನವರು ಹೇಳಿದರು ಎಲ್ಲಿಯೋ ಹಗ್ಗ ತಿನ್ನತಕ್ಕ ಹನುಮಂತರಾಯ ದೇವರಿದ್ದಾನೆ ಎಂದು. ಇನ್ನು ಶ್ರೀಮಾನ್ ಪಾಟೀಲ್‌ರವರು ಆ ಶ್ರೀರಂಗಪಟ್ಟಣದ ದೇವರ ವಿಚಾರವನ್ನೂ ಹೇಳಿದರು. ಆದರೆ ಈ ಒಂದು ನೆಪದಲ್ಲಿ ಯಾರೊಬ್ಬರಿಗೊ ತೊಂದರೆಯಾಗಬಾರದು. ಯಾವುದಕ್ಕೆ ಬೇಕಾದರೂ ಕೊಡೋಣ ಆದರೆ ಯೊವುದೋ ಒಂದು ವಿಚಾರವನ್ನು ಸರ್ಕಾರದವರು ತಮ್ಮ ದೃಷ್ಟಿಯಲ್ಲಿಕೊಂಡು ಇಡೀ ರಾಜ್ಯದಲ್ಲಿರತಕ್ಕ ದೇವಸ್ಥಾನಗಳನ್ನು .......................

ಶ್ರೀ ಎಂ.ವಿ. ಕೃಷ್ಣಪ್ಪ - ಈಗ ಅದಕ್ಕೂ ತಿದ್ದುಪಡಿಯನ್ನು ತರಲಾಗುವುದು.

ಶ್ರೀ ಎನ್. ಗೋಪಾಲಗೌಡ.- ಹಿಂದೆ ಒಂದಾನೊಂದು ಕಾಲದಲ್ಲಿ ದೇವರು ಗೋವು ಬ್ರಾಹ್ಮಣ ಎಂಬ ಭಾವನೆಯಿತ್ತು. ಜನರಲ್ಲಿ ಈದಿವಸ ಅದು ಹೋಗಿ ಮೊದಲೂ ಭೂಮಿ ಅನಂತರ ಬ್ರಾಹ್ಮಣ ಎಂಬ ಭಾವನೇಯಿದೆ ರೈತ ಇವರಿಬ್ಬರೂಆದ ಮೇಲೆ ಇನ್ನುಳಿದವರೆಲ್ಲರೂ ಬರುತ್ತಾರೆ. ರೈತನಿಗೆ ನಾವು ಈ ದಿನ ಸಾಕಷ್ಟು ಭೂಮಿಯನ್ನು ಉಳುವುದಕ್ಕೆ ಕಾಲ ಬಂದಿದೆ. ಆದ್ದರಿಂದ ಇಂಥ ರೈತರನಿಗೂ ಮತ್ತು ಭೂಮಿಗೂ ಮಧ್ಯೆ ಯಾರು ಬಂಧನಕಾರರು ಇರಬಾರದು. ಭೂಮಿಯನ್ನು ಉಳತಕ್ಕದ ಇದು ನನ್ನು ಭೂಮಿ, ನಾನು ಇದರ ಮಾಲೀಕ, ಎಂಬ ವಿಶ್ವಾಸ ಅವನಲ್ಲಿ ಬೆಳೆಯಬೇಕು ಆಗಲೇ ಅದರಲ್ಲಿ ಹೆಚ್ಚು ಉತ್ಪಾದನೆ ಮಾಡುವುದಕ್ಕೆ ಅವನಲ್ಲಿ ಶ್ರದ್ಧೆ ಹುಟ್ಟುತ್ತದೆ ಆದರೆ ಈ ಹಿಂದೆ ಮಾತನಾಡಿದ ಮಳೆಯನ್ನು ತರತಕ್ಕ ದೇವೇಂದ್ರಪ್ಪ ಯಾರಾದರೂ ಶಾಲೆಯನ್ನು ನಡೆಸುತ್ತಿದ್ದರೆ ಅಂಥವರ ಜಮೀನಿಗೇನು ಮಾಡುವುದು ಎಂದು ಕೇಳಿದರು ನಾವು ಈ ಹಿಂದೆ ಆ ಶೃಂಗೇರಿ ಇನಾಮನ್ನು ರದ್ದುಮಾಡತಕ್ಕ ಕಾಲದಲ್ಲಿ ಆ ದಿವಸ ಗೇಣೀ ಮೂಲಕ ಆ ಸಂಸ್ಥೆಗೇನು ಒಂದು ಉತ್ಪತ್ತಿ, ಬರುತ್ತಾ ಇತ್ತು ಅಷ್ಟನ್ನು ಆ ಇನ್‌ಸ್ಟಿಟ್ಯೂಷನ್ನಿಗೆ ಕೊಟ್ಟುಬಿಡಬೇಕೆಂದು ತೀರ್ಮಾನ ಮಾಡಿದ್ದೇವೆ. ಅದಕ್ಕೆ ಯಾರೂ ಈ ದಿವಸ ತಕ್ರಾರನ್ನು ಮಾಡುವ ಹಾಗಿಲ್ಲ, ಹಾಗೆ ಯೇ ಇಲ್ಲಿಯೂ ಒಪ್ಪಿಕೊಂಡರಾಯಿತು ಯಾವುದಾದರೂ ಇನ್‌ಸ್ಟಿಟ್ಯೂಷನ್ನು ಈ ದಿವಸ ಗೇಣೀರೂಪದಲ್ಲಿ ಏನಾದರೂ ವರಮಾನ ಪಡೆಯುತ್ತಿದ್ದಲ್ಲಿ ಆ ಜಮೀನನ್ನು ಹಿಂದಕ್ಕೆ ತೆಗೆದುಕೊಂಡು ಅದಕ್ಕೆ ಆ ವರಮಾನ ಕೊಡೋಣ. ಅಷ್ಟು ಉತ್ಪತ್ತಿ ಬಂದಮೇಲೆ ಅದನ್ನು ಬಿಟ್ಟು ಕೊಡಲು ತೊಂದರೆಯೇನಿದೆ ? ಎಂದಿದ್ದರೂ ಭೂಮಿ ಉಳತಕ್ಕ ರೈತನ ಕೈಲಿರಬೇಕು. ಆದರೆ ಒಂದು ಪಾರುಪತ್ಯ ಇತರರ ಕೈಲಿರುವುದು ಬೇಡ ಎಂದು ಹೇಳುತ್ತೇನೆ. ಇನ್ನು

ಕೆಲವು ದೊಡ್ಡ ದೊಡ್ಡ ಹಿಡುವಳಿಗಳ ವಿಚರದಲ್ಲಿ ಪ್ಲಾಂಟೇಷನ್‌ಗಳ ವಿಚಾರದಲ್ಲಿ ಬೇರೆ ಕಾನೂನುಗಳಿವೆ. ಅಲ್ಲಿ ಸಹಸ್ರಾರು ಜನರು ಕೂಲಿಮಾಡುತ್ತಿರುತ್ತಾರೆ ಅವುಗಳಿಗೆಲ್ಲಾ ಈ ಕಾನೂನನ್ನು ಅನ್ವಯಿಸುವುದು ಬೇಡ. ಆದರೆ ಇಲ್ಲೀಗ ಈ ಇನ್‌ಸ್ಟಿಟ್ಯೂಟುಗಳ ವಿಚಾರ ಬಂದಿರುವುದರಿಂದ ಇಂಥ ಒಂದು ವಿನಾಯಿತಿಯನ್ನು ಕೊಡಚಕ್ಕದ್ದು ರೈತನದೃಷ್ಟಿಯಿಂದಾಲೂ ಹಿತವಲ್ಲ, ಆ ಇನ್‌ಸ್ಟಿಟ್ಯೂಟ್‌ಗಳ ದೃಷ್ಟಿಯಲ್ಲೂ ಹಿತವಲ್ಲ ಎಂದು ಹೇಳುವುದಕ್ಕೆ ನಾನು ಇಷ್ಟಪಡುತ್ತೇನೆ.

ಇನ್ನು ಸೀಲಿಂಗಿನ ವಿಚಾರದಲ್ಲಿ ಕೆಲವರು ಇದು ಬಹಳ ಕಡಿಮೆಯಾಯಿತು ಎಂಬುದಾಗಿ ಒಂದು ಅನುಮಾನಪಡುತ್ತಿರುವಂತೆ ಕಾಣುತ್ತಿದೆ. ಭೂಮಿಯ ಬಗ್ಗೆ ಯಾರಿಗೆತಾನೆ ಆಳೆಯಿಲ್ಲ ? ಕೇವಲ 2 ಕುಂಟೆ ಜಮೀನಿಟ್ಟುಕೊಂಡಿರತಕ್ಕವನೂ ಸಹಾ ಲೆಟರ್‌ಹೆಡ್ಡಿನಲ್ಲಿ ತಾನೊಬ್ಬ ಲ್ಯಾಂಡ್‌ಲಾರ್ಡ್ ಎಂದು ಹಾಕಿಸಿಕೊಂಡಿರುತ್ತಾನೆ. ಅಷ್ಟು ಜಮೀನಿದ್ದರೂ ಅದರಲ್ಲೇ ತೃಪ್ತಿಪಟ್ಟು ಕೋಂಡಿರತಕ್ಕ ಜನರೂ ಇದ್ದಾರೆ. ಇನ್ನು ಕೆಲವರಲ್ಲಿ ಭೂಮಿ ವ್ಯಾಮೋಹ ಜಾಸ್ತಿ ಇರುತ್ತದೆ. ಕೆಲವರಿಗೆ 200 ಎಕರೆ ಇದ್ದಾರೂ ಸಾಲದು, ಇನ್ನು ಕೆಲವರಿಗೆ 2,000 ಎಕರೆಗಳಿದ್ದರೂ ಸಾಲದು. ಇದು ಅಂಥ ವಿಚಾರ ಸಾಲದ್ದಕ್ಕೆ ಈ ಭೂಮಾಲೀಕನಾಗತಕ್ಕ ವ್ಯಕ್ತಿ ಎಲ್ಲಿದ್ದರೂ ಇರಬಹುದು ಎಂಬುದಾಗಿ ಶ್ರೀ ಕಡಿದಾಳ್ ಮಂಜಪ್ಪವನವರು ಬೇರೆ ತೀರ್ಮಾನ ಮಾಡಿದ್ದಾರೆ. ಅಂದರೆ ಪರ್ಸನಲ್ಲಾಗಿ ಕಲ್ಟಿವೇಟ್ ಮಾಡಚಕ್ಕ ವ್ಯಕ್ತಿ. .................

ಶ್ರೀ ಕಡಿದಾಳ್ ಮಂಜಪ್ಪ.- ನಾನಲ್ಲ ಮಾಡಿದ್ದು, ಸಭೆಯವರು ಆ ರೀತಿ ತೀರ್ಮಾನ ಮಾಡಿದ್ದಾರೆ.

ಶ್ರೀ ಎಸ್. ಗೋಪಾಲಗೌಡ.- ಆ ಜಮೀನಿರತಕ್ಕ ಗ್ರಾಮದಲ್ಲೇ ನೆಲಸಿದ್ದರೂ ಆ ಕೆಲಸವನ್ನು ನಿರ್ವಹಿಸುವುದು ಬಹಳ ಕಷ್ಟ ಎನ್ನುತ್ತಿರುವಾಗ, ಈ ದಿವಸ ಮತ್ತೆ ಇದಕ್ಕೆ ಒಂದು ಅವಕಾಶ ಕೊಟ್ಟಲ್ಲಿ ಈ ಬೆಂಗಳೂರಿನಲ್ಲಿರತಕ್ಕವರೂ ಭೂಸ್ವಾಮಿಗಳಾಗಿ ಆ ಹಿಂದಿದ್ದ ಆ ಗೇಣೀದಾರರನ್ನೇ ಪುನಹ ತಿಂಗಳಿಗೆ 40 ರೂಪಾಯಿಗಳ ಪ್ರಕಾರ ಕೊಡುತ್ತ ಅವರನ್ನೆ ಕೂಲಿಯಾಳುಗಳೋಪಾದಿಯಲ್ಲಿ ಇಟ್ಟುಕೊಂಡು ಅವರಿಂದಲೇ ದುಡಿಸಿ ಅವರ ಹಕ್ಕಿಗೆ ಧಕ್ಕೆ ತರಲು ಇದರಿಂದ ಅವಕಾಶವಾಗುತ್ತದೆ. ಆದುದರಿಂದ ಇಂಥ ಕೆಕಲವಾರು ಲೋಪದೋಷಗಳನ್ನು ಜಾಗ್ರತೆ ಸುಧಾರಣೆ ಮಾಡಿ ಈ ಕಾನೂನನ್ನು ಬೇಗ ಚಾರಿಗೆ ತಂದು ಭೂರಹಿತರಾದ ರೈತರಿಗೆ ಭೂಮಿಯನ್ನು ಹಂಚಿ ತನ್ಮೂಲಕ ದೇಶದಲ್ಲಿ ಹೆಚ್ಚು ಆಹಾರ ಬೆಳೆಯುವುದಕ್ಕೆ ಸರ್ವ ಪ್ರಯತ್ನಗಳನ್ನು ಮಾಡಬೇಕೆಂದು ಹೇಳಿ ನನ್ನ ಮಾತುಗಳನ್ನು ಮುಗಿಸುತ್ತೇನೆ.



## ಲೋಕ ಸೇವಾ ಆಯೋಗ ಕುರಿತು (1966)

ಸ್ವಾಮಿ, ಈಗಾಗಲೇ ಅನೇಕ ಮಾನ್ಯ ಸದಸ್ಯರು ಮೈಸೂರು ರಾಜ್ಯದ ಲೋಕಸೇವಕ ಆಯೋಗದಮೇಲೆ, ಅಂದರೆ, 1963 ಮತ್ತು 1964-65 ನೇ ಸಾಲಿನ ವರದಿಗಳ ಬಗ್ಗೆ ಮಾತನಾಡಿದ್ದಾರೆ ಹಾಗೆ ಅವುರು ಮಾತನಾಡುವಾಗ ನಮ್ಮ ಪ್ರಾಂತ್ಯದ ಆಯೋಗದ ನೇಮಕ ಮತ್ತು ಅದು ಕೆಲಸ ನಡೆಸತಕ್ಕ ರೀತಿ ನೀತಿಗಳ ವಿಚಾರವಾಗಿ ಬಹಳ ಕಟುವಾದ ಟೀಕೆಗಳನ್ನು ಮಾಡಿದ್ದಾರೆ. ಈ ಹಿಂದೆಯೂ ಸಹ ಇದೇ ರೀತಿಯಾದ ಕಟುವಾದ ಟೀಕೆಗಳನ್ನು ಮಾಡಿದ್ದಾಗ್ಯೂ ಸರ್ಕಾರದವರಿಗೆ ಇಂಥ ಒಂದು ಅವ್ಯವಸ್ಥೆಯಾದ ಪರಿಸ್ಥಿತಿ ಅನುಕೂಲವಾಗಿರುವುದರಿಂದ ಯಾರು ಏನಾದರೂ ಹೇಳಿಕೊಂಡು ಹೋಗಲೆ, ವಿಧಾನ ಸಭೆ ಮತ್ತು ವಿಧಾನ ಪರಿಷತ್ ನವರು ಏನು ಬೇಕಾದರೂ ಹೇಳಿ ಕೊಂಡು ಹೋಗಲಿ ಸಾರ್ವಜನಿಕರು ಅವರಿಗೇನು ಬೇಕಾದರೆ ಹೇಳಿಕೊಂಡು ಹೋಗಲೆ ಒಟ್ಟಿನಲ್ಲಿ ಅವರಿಗೆ ಅನುಕೂಲವಾಗಿ ಕೆಲಸಗಳಾಗುತ್ತಿದ್ದರೆ ಸಾಕು ಇದನ್ನೆ ಮುಂದಿರುವಂತೆ ಈ ವರದಿಗಳಿಂದ ಸ್ಪಷ್ಟವಾಗಿ ಕಂಡುಬರುತ್ತಿದೆ. ಆದರೆ ಇದರಲ್ಲಿಯೂ ಬಹಳ ರಾಜಕೀಯ ಇದೆ.

ನಾವು ಹಿಂದೆಲ್ಲಾ ಹೇಳುತ್ತಿದ್ದ ಹಾಗೆ ಈ ಆಯೋಗ ಕೇವರ ಸರ್ಕಾರದವರೊಬ್ಬರ ಕೈಗೊಂಬೆಯಾಗಿರುವುದೇ ಅಲ್ಲ, ಇದು ಕಾಂಗೆಸ್ ಸಂಸ್ಥೆಯ ಕೈಗೊಂಬೆಯೂ ಆಗಿದೆ. ಆಯೋಗವನ್ನು ಈಗ ಹೀಗೆ ಪರಿವರ್ತನೆ ಮಾಡಲಾಗಿದೆ. ಆಯೋಗದರು ಕೊಡಟಕ್ಕ ಸಲಹೆಯನ್ನು ಸರ್ಕಾರದವರು ಪುರಸ್ಕರಿಸುತ್ತಿಲ್ಲ. ಎಂಬ ವಿಚಾರವನ್ನು ಈ ಸಭೆಯಲ್ಲಿ ಪದೇ ಪದೇ ಪ್ರಸ್ತಾಪ ಮಾಡಲಾಗಿದೆ. ಹಾಗೆ ಸದಸ್ಯರು ಅವುಗಳನ್ನು ಪ್ರಸ್ತಾಪಮಾಡಿದ್ದರೂ ಸರ್ಕಾರದವರು ಮಾಮೂಲಿನಂತೆ ಅಸಮಂಜಸವಾದ ಉತ್ತರಗಳನ್ನು ಕೊಡುತ್ತಾ ಅವರು ತಮ್ಮ ನಿಲುವನ್ನೇ ಸಮರ್ಥನೆ ಮಾಡಿಕೊಂಡಿದ್ದಾರೆ ; ಇದುಬಹಳ ವಿಷಾದಕರ ವಿಚಾರ ; ಇವತ್ತು ಬಹಳ ಖಂಡನಿಯವಾದ ನಿಷಯವೂ ಹೌದು. ಇದು ಹಿಗಾಗಬಾರದಿತ್ತು . ಇದರಿಂದ ದೇಶದಲ್ಲಿ ದೊಡ್ಡ ಅನ್ಯಾಯಗಳಾಗುತ್ತದೆ. ಮುಂದೆ ಯಾರೆ ಬರಲಿ ಆ ಅನ್ಯಾಯಗಳನ್ನು ಸರಿಪಡಿಸುವುದಕ್ಕೆ ಸಾಧ್ಯಾವಾಗುವುದಿಲ್ಲ. ನಾವು ಬಹಳ ಹಿಂದಿನಿಂದಲೂ ಇಲ್ಲಿ ಟೂರಿಜಂ, ವಿದ್ಯಾಭ್ಯಾಸ ಇತ್ಯಾದಿ ಏಳು ಇಲಾಖೆಗಳ ಕೇಡರ್ ಅಂಡ್ ರೆಕ್ರೂಟ್‌ಮೆಂಟು ರೂಲ್ಸ್‌ಗಳನ್ನು ತಯಾರಿಸಿಲ್ಲ, ಅವುಗಳನ್ನು ಕೂಡಲೇ ಮಾಡಿ ಇಂಟರಸ್ಟೇಟ್ ಸೀನಿಯಾರಿಟಿ ಪಟ್ಟಿಯನ್ನು ಸರಿಪಡಿಸಬೇಕೆಂದು ಕೇಳುತ್ತಿದ್ದೇವೆ, 1964-65ರಲ್ಲಿ ಕೂಡ ಈ ವಿಚಾರವನ್ನು ಕೇಳಿದ್ದೇವೆ. ಆದರೆ ಸರ್ಕಾರದವರು ಇಂಟರ್ ಸ್ಟೇಟ್ ಸೀನಿಯಾರಿಟ್ ಪಟ್ಟಿಯನ್ನು ತಯಾರು ಮಾಡುತ್ತಿದ್ದೇವೆ, ತಯಾರಿಸುತ್ತಿದ್ದೇವೆ ಎಂಬುದಾಗಿ 1956ರಲ್ಲಿ ರಾಜ್ಯಗಳ ಪುನರ್ವಿಂಗಡಣೆ ಯಾವಾಗ ಆಯಿತೋ ಆಗಿನಿಂದಲೂ ಮಾಡುತ್ತಿದ್ದೇವೆ ಎಂದು ಹೇಳುತ್ತಲೇ ಬರುತ್ತಿದ್ದಾರೆ, ಅವರೇನು ಮಾಡುತ್ತದ್ದಾರೆ ಎಂಬುದು ಆ ಇಲಾಖೆಗಳಲ್ಲಿ ಕೆಲಸ ಮಾಡತಕ್ಕ ನೌಕರಿಗೆ ಗೊತ್ತಾಗಬೇಕು. ಈ ವರದಿಯಲ್ಲಿ ಒಂದು ಕಡೆ ಹೀಗೆ ಹೇಳಿದ್ದಾರೆ :-

---

ವಿ.ಸ. ನಡವಳಿಗಳು : ದಿನಾಂಕ 19.11.1966.

" Inspite of reminders by the Commission, Cadre and Recruitment Rules in respct of the follwing Departments have not been issued ............. "

ಇನ್ನೊಂದು ವಿಚಾರ, ಸ್ವಾಮಿ, ನೌಕರಿಗೆ' ಪ್ರಮೋಷನ್ ಕೊಡತಕ್ಕ ವಿಚಾರದಲ್ಲಿ ಕಾನ್‌ಫಿಡ್‌ನಿಷಿಯಲ್ ರೆಕಾರ್ಡ್ ಎಂದು ಒಬ್ಬೊಬ್ಬ ನೌಕರನಿಗೂ ಒಂದೊಂದು ಕನ್‌ಫಿಟ್‌ನಿಷಿಯಲ್ ರೆಕಾರ್ಡಿರುತ್ತದೆ. ಅದನ್ನು ಮೂರು ನಾಲ್ಕು ವರ್ಷಗಳ ತನಕ ಹಾಗೇ ಖಾಲಿಯಾಗಿಟ್ಟಿದ್ದು ಆ ನೌಕರನಿಗೆ ಪ್ರಮೋಷನ್ ಕೋಡತಕ್ಕ ಸಂದರ್ಭವೊಂಗಿದಾಗ ಅವನು ಆ ಇಲಾಖೆಯ ಅಧಿಕಾರಿಗೆ ಬೇಡದವನಾಗಿದ್ದರೆ, ಆಗ ಮೂರು ವರ್ಷಗಳ ನಂತರ ಆ ಕಾನ್‌ಫಿಡೆನ್‌ಷಿಯಲ್ ವರದಿಯಲ್ಲಿ ಅವನು ಪ್ರಮೋಷನ್ನಿಗೆ ಅನರ್ಹನಾಗಿದ್ದಾನೆಂದು ಅದರಲ್ಲಿ ಬರೆಸುತ್ತಾರೆ. ಈ ಪ್ರಕಾರಣವಾಗಿ ತಮಗೆ ಬೇಡದವರಿಗೆ ಪ್ರಮೋಷನ್‌ಗಳನ್ನು ಕೊಡದಂತೆ ತಪ್ಪಿಸತಕ್ಕ ಅನ್ಯಾಯ ಅಪರಾಧಗಳನ್ನು ಮಾಡತಕ್ಕ ಮಟ್ಟಕ್ಕೆ ಇಲಾಖೆಯ ಅಧಿಕಾರಿಗಳೂ ಮತ್ತು ಮಂತ್ರಿಗಳೂ ಇಳಿದಿದ್ದಾರೆ ಅನ್ನುವುದನ್ನು ಈ ವರದಿ ಯಿಂದ ತಿಳಿದುಕೊಳ್ಳಬಹುದು.

" .................. In a few cases the confidential reports of the officials were prepared two or three years after the period of which they purported to relate."

ಈ ರೀತಿ ವರದಿಗಳನ್ನು ಬರೆಯಬಾರದೆಂದೂ, ಇದನ್ನು ಕೋಡಲೇ ಕೈಬಿಡಬೇಕೆಂದೂ ಇದನ್ನು ಹಾಗೆ ಮುಂದವರಿಸಿದರೆ ಅಂಥವರಿಗೆ, ಆ ಅಧಿಕಾರಿಗಳಿಗೆ ತಕ್ಕ ಶಿಕ್ಷೆನೀಡಬೇಕೆಂದು ಅವರು ಹೇಳಿದ್ದಾರೆ. ಅದನ್ನು ನಾನು ಏತಕ್ಕಾಗಿ ಹೇಳುತ್ತಿದ್ದೇನೆ ಎಂದರೆ : ಯಾರಾದರೊಬ್ಬ ನೌಕರನಿಗೆ ಪ್ರಮೋಷನ್ ಮಾಡಬಾರದೆಂಬ ಅಭಿಪ್ರಾವಿದ್ದರೆ, ಅಂಥ ನೌಕರನ ಕಾನ್‌ಫಿಡೆನಿಶಿಯಲ್ ರಿಪೋರ್ಟ್‌ನಲ್ಲಿ ಅಲ್ಲಸಲ್ಲದ್ದನ್ನು ಬರೆದು ಅವನಿಗೆ ದೊರೆಯಬೇಕಾದ ಪ್ರಮೋಷನ್ನನ್ನು ತಪ್ಪಿ ಸುಂವಥ ಅಯೋಗ್ಯ ಅಧಿಕಾರಿಗಳು ಇಲ್ಲಿದ್ದಾರೆ. ಇಂಥ ಅಯೋಗ್ಯ ಕಾರ್ಯವನ್ನು ಸ್ವತ : ತಾವಾಗೆ ಮಾಡತಕ್ಕಂಥ ಅಧಿಕಾರಿಗಳು ಇದ್ದಾರೆಂದು ಹೇಳುತ್ತಿರುವಾಗ ಅವರು ಏನೇನು ಕೆಲಸ ಮಾಡುತ್ತಿದ್ದಾರೆ ಎಂಬುದನ್ನು ನಾವು ಪ್ರತ್ಯೇಕವಾಗಿ ಹೇಳಬೇಕಾಗಿಲ್ಲ. ಅವರು ಏಕೆ ಹಾಗೆ ಬರೆಯುತ್ತಾರೆಂಬುದನ್ನು ನಾವಿಲ್ಲೆ ಚರ್ಚೆ ಮಾಡುವುದಕ್ಕೆ ಅವಕಾಶವಿಲ್ಲ.

ಸ್ವಾಮಿ, ಒಬ್ಬ ಸದಸ್ಯರು ಅಗಲೇ ಮಾತನಾಡುತ್ತಾ ಈ ಇಂಟರ್‌ವ್ಯೂವನ್ನು ಒಂದು " ಪಾರ್ಲ್ಸ್" ಅಂಥ ಕರೆದಿದ್ದಾರೆ ಆದರೆ ಈ ಆಡಳಿತ ಯಂತ ಸಾರ್ವಜನಿಕರ ಮೇಲೆ ಏನು ಪರಿಣಾಮವನ್ನು ಬೀರುತ್ತದೆಂದರೆ : ಸರ್ಕಾರಿ ನೌಕರಿಗೆ ಸೇರಬಯಸತಕ್ಕ



ಜನರೇನಿದ್ದಾರೆ ಅವರ ಮನಸ್ಸಿನಲ್ಲಿ ಸರ್ಕಾರಿ ನೌಕರಿಗೆ ಸೇರಿ ಅಲ್ಲೆ ಸರಿಯಾಗಿ ಕೆಲಸ ಕಾರ್ಯಗಳನ್ನು ಮಾಡಿಕೊಂಡು, ಪ್ರಮೋಷನ್‌ಗಳನ್ನು ಪಡೆದು ಸಾರ್ವಜನಿಕ ಕಾರ್ಯಗಳನ್ನು ಶ್ರದ್ದೇಯಿಂದ ಮುಗಿಸಿ ನೌಕರಿಯಿಂದ ಇಲ್ಲರಂತೆ ತಾನೂ ನಿವೃತ್ತಿಯಾಗಬಹುದು ಅನ್ನತಕ್ಕ ಆಶೆಯಿಂದ ಜನರು ನೌಕರಿಗೆ ಸೇರುತ್ತಾರೆ. ಆದರೆ ಈ ದಿವಸ ಇಲ್ಲೆ ನಡೆಯುತ್ತಿರುವ ಕೆಲಸ ಕಾರ್ಯವನ್ನು ನೋಡಿದರೆ ಇದು ಹೋಲಸೇದ್ದು, ದಿಕ್ಕೆಟ್ಟು ನಡೆಯುತ್ತಿತದೆ. ಆದರೆ ರಾಷ್ಟ್ರದ್ಯಂತವೂ ಒಂದೇ ಪಕ್ಷದ ಆಡಳಿತವಿರುವುದರಿಂದ ಎಲ್ಲಾ ಕಡೆಗಳಲ್ಲಿಯೂ ಹೀಗೆಲ್ಲ ಹೊಲಸಾದ ಆಡಳಿತ ಇದ್ದರೂ, ನಮ್ಮ ಮೈಸೂರು ರಾಜ್ಯದಲ್ಲಿ ಹೊಲಸು ದಿಕ್ಕೆಟ್ಟು ಹೋಗಿರುವಷ್ಟು ಆಡಳಿತ ಬೇರಿನ್ನಾವ ರಾಜ್ಯದಲ್ಲೂ ಆಗಿರುವುದಿಲ್ಲ. ಇದಕ್ಕೆ ಒಂದು ಸಾಮಾನ್ಯಾವಾದ ಕಾರಣ ಏನೆಂದರೆ, 1956 ರಲ್ಲಿ ರಾಜ್ಯಗಳ ಪುನರ್ವಿಗಡನೆಯಾದಾಗು ಈ ರಾಜ್ಯಕ್ಕೆ 4-5 ಭಾಗಗಳಿಂತ ನೌಕರರು ಬಂದು ಇದಕ್ಕೆ ಸೇರಿರುತ್ತಾರೆಂಬುದು ಒಂದು.

ಕೊಡಗಿನವರು, ಹೈದರಾಲಾದಿನವರು, ಮದ್ರಾಸಿನವರು, ಬೊಂಬಾಯಿನವರು ಬಂದರು. ಒಂದು ಕೆಲಸಕ್ಕೆ ಬೇರೆ ಬೇರೆ ರೀತಿಯ ಕ್ರಮಗಳನ್ನು ಅವರು ಅನುಸರಿಸಿದರು. ಆ ಸಮಯದಲ್ಲಿ ಎಲ್ಲವನ್ನೂ ಸರಿಪಡಿಸಬೇಕಾಗಿತ್ತು. ಆದರೆ ಆ ಕಡೆ ಗಮನವನ್ನೇ ಕೊಡಲಿಲ್ಲ. ನಮ್ಮ ಚೀಫ್‌ಸೆಕ್ರೆಟರಿಯವರು ಆ ಕಡೆ ಗಮನವನ್ನು ಕೊಡಲಿಲ್ಲ. ಕ್ಯಾಬಿನೆಟ್ ಅವರು ಸಹಾ ಗಮನ ಕೊಡಲಿಲ್ಲ. ಈ ವಿಳಂಬ ನೀತಿಯನ್ನೆ ಅನುಸರಿಸಿಕೊಂಡು ಬರುತ್ತಿದ್ದಾರೆ ಈ ಮಾತನ್ನು ಈ ಸಭೆಯ ಮುಂದೆ 6-7 ವರ್ಷದಿಂದ ಒಂದೇ ಸಮನೇ ಹೇಳುತ್ತಾ ಬಂದಿದ್ದೇನೆ. ಆಗೋ ಆಯಿತು, ಇಗೋ ಆಯಿತು ಎಂದು ಹೇಳುತ್ತಲೆ ಇದ್ದಾರೆ. ಈ ಅವಧಿಯಲ್ಲಿ ಸಹಸ್ರಾರು ಜನ ರಿಟ್ ಹೋಗಿದ್ದಾರೆ . ಪ್ರಮೋಷನ್ ಇಲ್ಲದೆ, ಸಂಬಳ ಇಲ್ಲದೆ ಮತ್ತಿತರ ಕಾರಣಗಳಿಂದ ಹೋಗಿದ್ದಾರೆ. ಇಲ್ಲಿರುವ ಸದಸ್ಯರುಗಳು ತಮ್ಮ ಸಮಯದ 75 ರಷ್ಟು ಭಾಗವನ್ನು ಈ ಒಂದು ವಿಚಾರಕ್ಕಾಗಿ ಉಪಯೋಗಿಸಿದ್ದಾರೆ. ಇಷ್ಟೊಂದು ಜನ ಹೈಕೋರ್ಟ್‌ಗೆ ರಿಟ್ ಹೋಗಿರುವುದನ್ನು ನೋಡಿದರೆ ನಮ್ಮ ರಾಜ್ಯದ ಆದಳಿತ ಯಾವರಿತಿ ನಡೆದಿದೆ ಎಂಬುದನ್ನು ಗೋತ್ತಾಗುತ್ತದೆ. ಅರ್ಡಿನೆನ್ಸ್ ವಿಚಾರ ಈ ಸಭೆಯಲ್ಲಿ ಬಂದಾಗ ಮಾನ್ಯ ಮುಖ್ಯ ಮಂತ್ರಿಗಳು ಕೆಲವರು ಅನ್ಯಾಯವಾಗಿದೆಯೆಂದು ರಿಟ್ ಹೋಗುತ್ತಾರೆ ಎಂದು ಹೇಳಿದರು 10-20 ವರ್ಷಗಳು ಸರ್ಕಾರದ ಸೇವೆ ಮಾಡಿರುವ ಒಬ್ಬ ಅಧಿಕಾರಿ ಸುಪ್ರೀಮ್ ಕೋರ್ಟ್‌ಗೆ ಹೋಗಬೇಕಾದರೆ ಏನು ಅನ್ಯಾಯವಾಗಿದೆ ಎಂಬುದನ್ನು ನೊಡಬೇಕು; ಹೋದ ವರ್ಷ ಒಬ್ಬ ಅಧಿಕಾರಿ ಸುಪ್ರೀಮ್ ಕೋರ್ಟ್‌ಗೆ ಹೋಗಿ, ಅವರಿಗೆ ಇಷ್ಟು ಸಂಬಳ ಕೊಟ್ಟಿಲ್ಲ. ಏಕೆಂದರೆ ಇವರದ್ದೇ ಒಂದು ಕಾನೂನು, ಇವರದೇ ಒಂದು ನೀತಿಯಾಗಿದೆ. ಗೌಡ ಹಾಕಿದ್ದೇ ಕೋಳ ಎಂದು ನೀತಿ ಇದೆ. ಅತರಂತೆ ಮನಸ್ಸಿಗೆ ಬಂದಂತೆ ಆಡಳಿತವನ್ನು ನಡೆಸುವುದು ಈ ರಾಜ್ಯದ ಆಡಳಿತದ ರೀತಿ ನೀತಿಯಾಗಿದೆ. ಗ್ರಾಮನೇಮಕರಾಗಿ ಕೆಲಸ ಮಾಡುತ್ತಿರುವವರು ಮುಂದೇ ಅಗ್ರಿಕಲ್‌ಚರ್ ಡೆಮಾನ್ಸ್‌ಟ್ರೇಟರ್ ಕೆಲಸಕ್ಕೆ ನೆಮೀಸಿದರು. ನಂತರ ಯೊರೋ ಒಬ್ಬ ಬಿ ಎಸ್ ಸಿ ಮಾಡಿಕೊಂಡು ಅಗ್ರಿ ಕಲ್ಚರಲ್ ಡೆಮಾನ್ಸ್‌ಟ್ರೇಟರ್ ಆಗಿದ್ದವರು ಕೋರ್ಟ್‌ಗೆ ರಿಟ್

ಹೋದರು. ಕೋರ್ಟ್‌ನವರು ಈ ರೀತಿ ಮಾಡುವುದು ಸರಿಯಲ್ಲವೆಂದು ನೇಮಕಗಳನ್ನು ವಜಾ ಮಾಡಿದರು. ನಂತರ ಇವನ್ನೆಲ್ಲಾ ಅವರು ಹಿಂದಿನ ಜಾಗಕ್ಕೆ ಹೋಗಿ ಎಂದು ಹೇಳಿದ್ದಾರೆ. ತಾಲ್ಲೋಕು ಕಛೇರಿಯಲ್ಲಿ ಕೆಲಸಮಾಡುತ್ತಿದ್ದವನು ಮುನಸಿಪ್ ಆಗಿದ್ದಾನೆ. ಕೇವಲ ಸಂಬಳದ ವಿಚಾರಕ್ಕಾಗಿ ಸುಪ್ರೀಮ್ ಕೋರ್ಟ್‌ಗೆ ಹೋಗಿರುವವರು ನಮ್ಮ ರಾಜ್ಯದಲ್ಲಿ ಬೇಕಾದಷ್ಟು ಮಂದಿ ಇದ್ದಾರೆ.

" proposal for continuing the services of 158 local condidates on the teaching staff in Government Medical and Dental clooeges ;"

ಸರ್ಕಾರ ಜೀವಂತವಿಲ್ಲ ಎನ್ನುವುದಕ್ಕೆ ಇದು ಒಂದು ಸಾಕ್ಷಿ.

ಲೋಕಲ್ ಕ್ಯಾಂಡಿಡೇಟ್ಸ್ ಎಂದು ಬೇರೆ ಇದೆ ಡಿಸ್ಟ್ರಿಕ್ಟ್ ಬೋರ್ಡ್ ಆಫೀಸಿನಲ್ಲಿ ಕೆಲಸ ಮಾಡುತ್ತಿದ್ದ ಒಬ್ಬನ್ನು ರಿಟೈರು ಆಗುವವರೆಗೂ ಲೋಕಲ್ ಕ್ಯಾಂಡಿಡೇಟ್ ಆಗಿಯೇ ಇದ್ದ ಚೀಫ್ ಸೆಕ್ರೆಟರಿ ಇದ್ದಾರೆ, ಕಂಬ ಕಂಬಕ್ಕೆ ಒಬ್ಬೊಬ್ಬ ಸೆಕ್ರೆಟರಿ ಇದ್ದಾರೆ. ಡ್ಯಪ್ಯುಟಿ ಸೆಕ್ರೆಟರಿಗಳಿದ್ದಾರೆ. ಅಂಡರ್ ಸೆಕ್ರೆಟಕರಿಗಳಿದ್ದಾರೆ, ಈ 18-20 ವರ್ಷಗಳಲ್ಲಿ 18 ಬಾಬುಗಳಿದ್ದುದು 69 ಬಾಬುಗಳಾಗಿದೆ. ಇವರು ಕೈಕೆಳಗೆ ಕೆಲಸ ಮಾಡುವವರು ಬೇಕಾದಷ್ಟು ಜನ ಇದ್ದಾರೆ. ತಮ್ಮ ತಮ್ಮ ಇಲಾಖೆಗಳು ಸುಸುತ್ರವಾಗಿ ನಡೆಯಬೇಕಾದರೆ ಯಾವ ರೀತಿ ಆಡಳಿತ ನಡೆಸಬೇಕೆಂಬುದು ಈ ಅಧಿಕಾರಿಗಳಿಗೆ ಗೊತ್ತರುವುದಿಲ್ಲ, ಪ್ರತಿಯೊಬ್ಬ ಅಧಿಕಾರಿಯೂ ಸಹ ಉಪ ಮಂತ್ರಿಗಳು ಕರೆದರೂ ಸಹ ಹೋಗತ್ತಾರೆಂದು ಕಾಣುತ್ತದೆ. ಸಣ್ಣ ನೀರಾವರಿ ಮಂತ್ರಿಗಳು ಎಲ್ಲಾ ಅಧಿಕಾರಿಗಳನ್ನು ಕರೆಸಿ, ಅದು ಯಾರಾದರು ಈ ಸೆಕ್ರಟರಿಗಳನ್ನು ನೋಡುವುದಕ್ಕೆ ಹೋದರೆ ಅವರು ಮೀಟಿಂಗ್‌ನಲ್ಲಿದ್ದಾರೆ ಏನಾಯಿತು ಇದು ಏನಾಯಿತು ಎಂದು ಕೇಳಿ ಕೊನೆಗೆ ಅನೆಗಲ್ಲಿನ ರಿಮೋರ್ಟ್ ಸರಿಮಾಡಿ ಎಂದು ಹೇಳುತ್ತಾರೆ. ನಾವುಗಳು ಎಂದು ಹೇಳುತ್ತಾರೆ. ಯಾವಾಗಲೂ ಮೀಟಿಂಗ್‌ನಲ್ಲಿಯೇ ಇರುತ್ತಾರೆ. ಆ ಮೀಟ್‌ಂಗ್‌ನಲ್ಲಿ ಏನಾಯಿತು ಎನ್ನುವುದು ಯಾರಿಗು ಗೊತ್ತಿಲ್ಲ. ಒಂದು ಸರ್ಕ್ಯುಲರ್ ಹೊರಡಿಸುವುದು, ಅದು ತಪ್ಪಾದರೆ ಇನ್ನೊಂದು ಸರ್ಕ್ಯುಲರ್ ಹೊರಡಿಸುವುದು, ಇದು ಅಠಾರ ಕಛೇರಿಯಲ್ಲಿ ನಡೆಯುತ್ತಿರುವ ಕೆಲಸ. ಇದನ್ನೆಲ್ಲಾ ಸರಿಪಡಿಸುವುದಕ್ಕೆ ಇದುವರೆಗೂ ಯಾರಿಗೂ ಸಾಮರ್ಥ್ಯವಾಗಿಲ್ಲ. ಸರ್ಕಾರ ಎಂದರೆನು ? ಈ ಪ್ರಶ್ನೆಯನ್ನು ನಾವು ಕೇಳಬೇಕಾಗುತ್ತದೆ. ಬೇರೆ ಏನು ಕೆಲಸ ಮಾಡಿದಿದ್ದರೆ ಈ ಅಧಿಕಾರಿಗಳು ಇಲ್ಲಿ ಏತಕ್ಕೆ ಇದ್ದಾರೆ ಎಂದು ಕೇಳುತ್ತೇನೆ. 158 ಜನ ಲೋಕಲ್ ಕ್ಯಾಂಡಿಡೇಟ್ಸ್ :

" The commissioner regretted theit inability to give their concurrence in the absence of any rules enabling either the



Commission to give such concurrence or the Government to appoint local coandidates on clear vacancies earmaked for dirct recruitment. "

ಎಂದು ಈ ವರದಿ ಕೊಡುವುದು. ಇವರು ಹೀಗೆ, ಅವರು ಹಾಗೆ ಎಂದು, ಇವರಿಬ್ಬರ ಜಗಳದಲ್ಲಿ ಕೂಸು ಬಡವಾಯಿತು ಎನ್ನುವ ಹಾಗೆ, ಸರ್ಕಾರಿ ಸೇವೆಗೆ ಸೇರುವವರು ಭವಿಷ್ಯವನ್ನು ನಿರ್ನಾಮ ಮಾಡುತ್ತಾರೆ.

ಇನ್ನೂ ಒಂದು ಉದಾಹರಣೆ ಇದೆ, ಡೈರಿ ಪ್ರಾಜೆಕ್ಟ್‌ಗೆ ಒಬ್ಬ ಅಧಿಕಾರಿಯನ್ನು ನೇಮಕ ಮಾಡಿದರು. ಮನಸಿಗೆ ಬಂದರೆ ಯಾರನ್ನು ಬೇಕಾದರೂ ನೇಮಕ ಮಾಡಬಹುದು. ಅವರನ್ನು ನೇಮಕ ಮಾಡಿದ್ದು ತಪ್ಪು ಎಂದು ಹೇಳಿದರೂ ಕೂಡ ಸರ್ಕಾರದವರು ಏನೂ ಮಾಡಲಿಲ್ಲ. ಆವರು ಎರಡು ವರ್ಷದಿಂದ ಮುಂದುವರೆಯುತ್ತಿದ್ದಾರೆ. ಈ ವರದಿಗಳೆನ್ನೆಲ್ಲಾ ಚರ್ಚೆ ಮಾಡಿ ನಮ್ಮ ಸಲಹೆಗಳನ್ನು ಕೊಟ್ಟರೆ ಅದನ್ನು ಯಾರು ಕೇಳುವುದಿಲ್ಲ ಎನ್ನುವುದು ಸ್ಪಷ್ಟವಾಗಿದೆ. ಶಾನುಭೋಗರು ಪಟೇಲರ ಜಾಗಕ್ಕೆ ಹೊಸದಾಗಿ ನೇಮಕಮಾಡಿರುವವರಿಗೆ 3-4 ತಿಂಗಳಿನಿಂದ ಸಂಬಳ ಕೊಟ್ಟಿಲ್ಲ. ಹಳೆಯ ಶಾನುಭೋಗರು ಹೊಸಬರಿಗೆ ಅವರ ದಪ್ತಗಳನ್ನು ಕೋಟ್ಟಿಲ್ಲ. ಸರ್ಕಾರ ಇದೇಯೆ ಎನ್ನುವುದು ಅರ್ಥವಾಗುತ್ತಿಲ್ಲ. ತಾಲ್ಲೂಕು ಬೋರ್ಡ್ ಮತ್ತು ಪಂಚಾಯತಿಗಳ ಚುನಾವಣೆಗಳಿಂದ ಸರ್ಕಾರಕದವರಿಗೆ ಅನುಕಾಲವಾಗಿಲ್ಲವೆಂದು ಅದನ್ನು ನಿಲ್ಲಿಸಿದರು : ಇನ್ನು ಈ ಪಂಚಾಯತಿಗಳಿಗೆ ಬೇಕಾದ ಕಾರ್ಯದರ್ಶಿಗಳನ್ನು ಟ್ರೈನ್ ಮಾಡುತ್ತೇವೆ. ಅದಕ್ಕೆ 5 ಸಾವಿರ ಜನ ಬೇಕು ಎಂದು ಹೆಳಿದರು. ಆದರೆ ಅವರಿಗೆ ಕೊಡುವ ಸಂಬಳ ಕೇವಲ 80 ರೂಪಾಯಿಗಳನ್ನು ಕೂಡ ಕೊಡುವುದಕ್ಕೆ ಇವರಿಗೆ ಅಗಿಲ್ಲ.

ಇನ್ನು ವಿದ್ಯಾಭ್ಯಾಸ ಇಲಾಖೆಯಲ್ಲಿ ಎರಡು ಮೂರು ತರಹ ಅಕ್ರಮ, ಅನ್ಯಾಯದ ಆರ್ಡರ್‌ಗಳನ್ನು ಮಾಡಿದ್ದಾರೆ. ಈ ಆಕ್ರಮಗಳನ್ನು ಮುಚ್ಚುವುದಕ್ಕೆ ಮತ್ತೊಂದು ಆಕ್ರಮದ ಆರ್ಡರ್ ಆಮೇಲೆ ಮತ್ತೋಂದು ಸ್ಪಷ್ಠ ಆರ್ಡರ್‌ನ್ನು ಹೊರ ಪಡಿಸಿದ್ದಾರೆ ಒಬ್ಬರನ್ನು ಅಕ್ರಮವಾಗಿ ಳಿತವಾಗಿ ಮೇಲಕ್ಕೇರಿಸುವುದು, ಗಮಸ್ತನಾಗಿರುವವನ್ನು ಸೂಪರಿಂಟೆಂಡ್‌ಂಟರನ್ನಾಗಿಯೋ ಅಥವಾ ಪ್ರೊಫೆಸರನನ್ನಾಗಿಯೋ ಹೀಗೆ ಎನಾದರೂ ಮಾಡುವುದು, ಅಮೇಲೆ ಯಾರಾದರೂ ಅದು ತಪ್ಪಾಯಿತು ಎಂದು ಕೋರ್ಟಿಗೆ ಹೋದಾಗ ಇನ್ನೊಂದು ಸ್ಪೆಷಲ್ ಆರ್ಡರ್ ಹೊರಡಿಸುವುದು. ಇವರು ಇರುವುದು ಇಂತಹ ಆರ್ಡರ್ ಹೊಡಿಸುವುದಕ್ಕೆ ಎಂದು ಕಾಣುತದೆ. ವರದಿಯ 10ನೇ ಪುಟದಲ್ಲಿ ಒಂದುಮಾತನ್ನು ಹೇಳಿದ್ದಾರೆ ಅದು ಹೀಗಿದೆ :

" The commission were therefore of the opinion that the Government had, in the present case, exercised the powers

under Article 309 of the Constitution of India that vest only in the Governor and had passed orders aontrary to the rules of recruitment and for this reason the order in question was not legal or constitutional and informed the Government accordingly."

ಇವರ ಕಡೆಯವರಿಗೆ ಪೆಟ್ರೋಲ್ ಬಂಕ್ ಕೊಡಬೇಕು, ಇವರ ಕಡೆಯವರಿಗೆ ಚುನಾವಣೆಗೆ ಟಿಕೇಟ್ ಬೇಕು ಮತ್ತು ಇನ್ನೊಂದು ಟರ್ಮ್ ಮುಂದುವರಿಯಬೇಕು ಎಂದು ಮಾಡುತ್ತಿದ್ದಾರೆ. ಇದನ್ನು ಹೇಳುವವರಿಗೆ ಅಸಹ್ಯ. ಆದರೂ ಇವೆಲ್ಲಾ ಸಾರ್ವಜನಿಕರ ಗಮನಕ್ಕೆ ಬರುತ್ತದೆ. ಇಂತಹ ಅಸಹ್ಯ ಪರಿಸ್ಥಿತಿಯಲ್ಲಿ ನಾವು ಇದ್ದೇವೆ. ಪಬ್ಲಿಕ್ ಸರ್ವಿಸ್ ಕಮಿಷನ್ನಿನವರಿಗೆ ಎಲ್ಲವೂ ಬೇಕು. ಇಂತಹ ಪರಂಪರೆಯನ್ನು ಇವರು ಈ 20 ವರ್ಷಗಳಲ್ಲಿ ಈ ದೇಶದಲ್ಲಿ ಬೆಳೆಸಿಕೊಂಡು ಬಂದಿದ್ದಾರೆ. ತಮಗೊಂಡು ಅವಸಾನ ಕಾಲ ಸತ್ತಿರ ಬರುತ್ತಿದೆ. ಆದರೆ ದೇಶಕೆ ಅವಸಾನ ಕಾಲ ಬರುವಂತೆ ಮಾಡಿದ್ದಾರೆಂದು ನನಗೆ ದುಃಖ ಎಲ್ಲಿ. ವಿಶ್ವಾಸ ಉಳಿಯಬೇಕೋ ಅಲ್ಲಿ ಅದು ಉಳಿಯದಿದ್ದರೆ ಆದರಿಂದ ದೇಶಕೆ ಒಳ್ಳೆಯದಾಗುವುದಿಲ್ಲ. ಆದ್ದರಿಂದ ಪಬ್ಲಿಕ್ ಸರ್ವೀಸ್ ಕಮೀಷನರ್ ಬಗ್ಗೆ ಏಕೆ ಸುಮ್ಮನೆ ಹೇಳಬೇಕು? ನಮಗೆ ಹೇಳಿ ಆದರಿಂದ ಏನು ಸಿಗುತ್ತದೆ.

ಶ್ರೀ ರಾಮಕೃಷ್ಣ ಹೆಗ್ಗಡೆ- ಅವರ ಹತ್ತಿರ ಇನ್‌ಫ್ಲುಯನ್ಸ್ ನಡೆಯುವುದಿಲ್ಲ.

ಶ್ರೀ ಗೋಪಾಲಗೌಡ . -ನಮ್ಮ ಇನ್‌ಫ್ಲುಯನ್ಸ್ ನಡೆಯುವುದಿಲ್ಲವೆಂಬುದು ನಮಗೆ ಗೊತ್ತು. ಪ್ರಭಾವಶಾಲಿಗಳಾಗಿಲ್ಲದೇ ಇದ್ದರೆ ಏನೂ ಸಿರುವುದಿಲ್ಲವೆಂಬ ನಿರಾಶೆಗೆ ನಿಮ್ಮ ಕಾರ್ಯ ನೀತಿಯೇ ಕಾರಣ. ಈಗ ಸಮಯ ಹೆಚ್ಚಿಗೆ ಇಲ್ಲದೇ ಇರುವುದರಿಂದ ನಾನು ಹೆಚ್ಚಾಗಿ ಹೇಳುವುದಿಲ್ಲ. ಇದರಲ್ಲಿರತಕ್ಕ ಅನೇಕ ಇರೆಗ್ಯುಲಾರಿಟೀಸನ್ನು ನನ್ನ ಸ್ನೇಹಿತರು ಹೇಳಿದ್ದಾರೆ. ದೇಶದ ಹಿತದೃಷ್ಟಿಯಿಂದ ಒಂದು ಮನವಿ ಮಾಡುತ್ತೇನೆ. ತಮಗೆ ಇರತಕ್ಕ ಅತ್ಯಲ್ಪಕಾಲದಲ್ಲಿ ಏನಾದರೂ ಮಾಡುವುದಾದರೆ ಇಂಟರ್ ಸ್ಟೇಟ್ ಸಿನಿಯಾರಿಟಿ ಲಿಸ್ಟ್ ಮತ್ತು ಕೇಡರ್ ಅಂಡ್ ರೆಕೂಟ್‌ಮೆಂಟ್ ರೂಲ್ಸನ್ನು ಕೆಲವು ಇಲಾಖೆಗಳಲ್ಲಿ ಇನ್ನೂ ಮಾಡಿಲ್ಲ. ಅದನ್ನು ಮಾಡಬೇಕು ಪ್ರಾಂತ್ಯ ಮತ್ತು ಜಿಲ್ಲಾ ಮಟ್ಟದಲ್ಲಿ ರೆಕ್ರೂಟ್‌ಮೆಂಟ್ ಆಗಿರುವವರಿಗೆ ಖಾಯಂ ಮಾಡದೇ ಅವರನ್ನು ಅತಂತ್ರಮಾಡಿ ಒಂದು ದೊಡ್ಡ ಅನ್ಯಾಯಕ್ಕೆ ಗುರಿ ಮಾಡಿದ್ದಿರಿ, ಅನಾಕರಿಗೆ ಇಲ್ಲ. ಈಗಾಗಲೇ 27 ಮುಗಿದು 28 ವರ್ಷಗಳಾಗಿರುತ್ತದೆ. ಅವರು ಮುಂದೆ ಹೋಗುವ ಹಾಗೆಯೇ ಇಲ್ಲ. ಸಹಸ್ರಾರು ಬಡ ಜನರು ಭವಿಷ್ಯವನ್ನು ಹಾಳು ಮಾಡಿದ್ದಿರಿ. ನೀವು ಮಾಡಿರದಂತಹ ತಪ್ಪುಗಳನ್ನು ಸರಿಪಡಿಸಿ ಜಾಗ ತೆರವು ಮಾಡುವುದಕ್ಕೆ ಅವಕಾಶ ಮಾಡಿಕೊಡುವುದು ಎಂದು ಮಾನ್ಯ ಮಂತ್ರಿಗಳನ್ನು ಕೇಳಿಕೊಂಡು ನನ್ನ ಮಾತನ್ನು ಮುಗಿಸುತ್ತೇನೆ.



## ರಾಜ್ಯಪಾಲರ ಭಾಷಣಕ್ಕೆ ವಂದನಾ ನಿರ್ಣಯ ಕುರಿತು, 1966.

ಮಾನ್ಯ ಅಧ್ಯಕ್ಷರೇ, ರಾಜ್ಯಪಾಲರ ಭಾಷಣವನ್ನು ತಯಾರು ಮಾಡಿರತಕ್ಕಂಥ ಸರ್ಕಾರದವರು, ಸರ್ಕಾರ ದೋರಣೆಯಲ್ಲಿ ಮಾಡಿರಬಹುದಾದಂತಹ ಅಥವಾ ಮಾಡಬೇಕಾದಂತಹ ಯಾವ ಬದಲಾವಣೆಗಳನ್ನೂ ಸೂಚಿಸಿಲ್ಲ. ಬಹುಶಃ ಆಯವ್ಯಯ ಅಧಿವೇಶನಕ್ಕೆ ಸೆಕ್ರೆಟರಿಗಳು ತಯಾರು ಮಾಡತಕ್ಕ ಭಾಷಣದ ಕೆಲವೊಂದು ಅಂಶಗಳನ್ನು ಇದರಲ್ಲಿ ಸೇರಿಸಿ ಒಂದು ಭಾಷಣವನ್ನು ರಾಜ್ಯಪಾಲರ ಮೂಲಕ ಈ ಸಭೆಯ ಮುಂದೆ ಇಟ್ಟಿರತಕ್ಕದ್ದು ಸರ್ಕಾರದ ಒಂದು ಅಧ್ಯಕ್ಷತೆ ಮತ್ತು ಹೊಣೆಗೇಡಿತನವನ್ನು ಸೂಚಿಸುತ್ತದೆ. ಸರ್ಕಾರದವರು ತಮ್ಮ ಕೆಲಸದ ಕಡೆ ಗಮನ ಕೊಡುವುದಕ್ಕೆ ಆಗದೆ ಬರೀ ರಾಜಕೀಯವೇ ಅವರನ್ನು ಕಾಡುತ್ತಿದೆ. ಅದಕ್ಕೆ ಈ ಒಂದು ರಾಜ್ಯಪಾಲರ ಭಾಷಣವೇ ಸಾಕ್ಷಿಯಾಗಿದೆ. ಈಗ ಉದಾಹರಣೆಗೆ ಹೇಳುವುದಾದರೆ ರಾಜ್ಯಪಾಲರ ಭಾಷಣದಲ್ಲಿ ಬೆಂಗಳೂರಿನ ಸರ್ಕಾರಿ ಸಾಬೂನು ಕಾರ್ಖಾನೆಗೆ ತನ್ನ ವಾರ್ಷಿಕ ಉತ್ಪಾದನಾ ಸಾಮರ್ಥ್ಯವನ್ನು 1,5000 ಟನ್ನುಗಳಿಂದ 6,000 ಟನ್ನುಗಳಿಗೆ ಹೆಚ್ಚಿಸಲು ಉದ್ಯಮ ಲೈಸನ್ಸು ಕೊಟ್ಟಿದೆ ಎಂದು ಹೇಳಿದ್ದಾರೆ. ಇದು ಯಾವ ಒಂದು ದೊಡ್ಡ ಸರ್ಕಾರದ ಪಾಲಿಸಿಯನ್ನು ಹೇಳತಕ್ಕಂಥ ಮಾತೆಂದು ನನಗೆ ಕಂಡುಬರಲಿಲ್ಲ.

ಇನ್ನೊಂದು ವಿಷಯವನ್ನು ಹೇಳುತ್ತೇನೆ. ಅದೇನೆಂದರೆ, ತಮಗೆ ಇದ್ದಂತಹ ಹುದ್ದೆಯನ್ನು ಕಳೆದುಕೊಂಡು ಬರೀ ಆಹಾರ ಖಾತೆಯನ್ನೇಹಿಡಿದುಕೊಂಡು ಕುಳಿತು ಕೊಂಡಿರತಕ್ಕಂಥ ಶ್ರೀಮಾನ್ ಜತ್ತಿಯವರು ಸೆಪ್ಟಂಬರ್ ತಿಂಗಳಿನಿಂದ ಮನಾಪಲಿ ಪ್ರೊಕ್ಯೂರಮೆಂಟ್ ಮಾಡುತ್ತೇವೆಂದು ಹೇಳಿದ್ದಾರೆ. ಆ ವಿಷಯ ರಾಜ್ಯಪಾಲರ ಭಾಷಣದಲ್ಲಿ ಇಲ್ಲ. ಆದರೆ ಅಕ್ಕಿಯ ಲೆಕ್ಕವನ್ನು ಕೊಟ್ಟಿದ್ದಾರೆ. ಇದು ರಾಜ್ಯಪಾಲರ ಭಾಷಣ . ನಾನು ವಿಷಾದದಿಂದ ಹೇಳಿತ್ತೇನೆ. ಈ ಮಂತ್ರಿಮಂಡಲವನ್ನು ದೇವರೇ ಕಾಪಾಡಬೇಕು. ಶ್ರೀಮಾನ್ ಶಿವಪ್ಪನವರು ರಾಜ್ಯಪಾಲರ ಭಾಷಣದ ಮೇಲೆ ಮಾತನಾಡುವಾಗ ಮಾನ್ಯ ಅಧ್ಯಕ್ಷರು ಅವರನ್ನು ನೀವು ಪಾರ್ಲಿಮೆಂಟಿಗೆ ಹೋಗಿ ಎಂದು ತಿಳಿಸಿದರು.

ಅಧ್ಯಕ್ಷರು- ಯಾವ ಸಂದರ್ಭದಲ್ಲಿ?

ಶ್ರೀ ಎಸ್. ಗೋಪಾಲಗೌಡ- ತಾಷೆಂಟ್ ವಿಷಯವನ್ನು ಪ್ರಸ್ತಾಪ ಮಾಡುವಾಗ ನೆಹರೂರವರ ನಿಧನದ ಅನಂತರ ನಮ್ಮ ದೇಶದ ಪ್ರಧಾನಿಗಳಾಗಿ ಶ್ರೀ ಶಾಸ್ತ್ರಿಗಳವರು ಬಂದರು. ಆದರೂ ಇದೇ ಕಷ್ಟಕಾಲದಲ್ಲಿ ಈ ದೇಶದ ಪ್ರಧಾನಿಗಳಾದರು. ತಮ್ಮ ಜವಾಬುದಾರಿಗಳನ್ನು ನಿರ್ವಹಿಸುತ್ತಿದ್ದಾಗ ಅವರು ನಿಧನರಾದರು. ಇವತ್ತೂ ಭಾರತ ಮತ್ತು ಪಾಕೀಸ್ಥಾನಗಳ ಮಧ್ಯೆ ಇದ್ದಂತಹ ಘರ್ಷಣೆಯನ್ನು ಕಡಿಮೆ ಮಾಡುವುದಕ್ಕಾಗಿ, ಶಾಂತಿಯನ್ನು ಈ ದೇಶದಲ್ಲಿ ಕುದುರಿಸುವುದಕ್ಕಾಗಿ ದಿವಂಗತ ಲಾಲಾಬಹದ್ದೂರ್

ಶಾಸ್ತ್ರಿಗಳವರು ರಷ್ಯಾದ ಮುಖಂಡರುಗಳ ನೇತೃತ್ವದಲ್ಲಿ ಪಾಕೀಸ್ಥಾನದ ಅಧ್ಯಕ್ಷರಾದ ಶ್ರೀ ಅಯೂಬ್ ಖಾನರವರನ್ನೂ ಉಪಯೋಗಿಸಿಕೊಂಡು ಒಂದು ಒಪ್ಪಂದವನ್ನು ಮಾಡಿಕೊಂಡರು. ಅದನ್ನು ಈಗ ಕೇಂದ್ರ ಸರಕಾವದವರು ಕಾರ್ಯಗತ ಮಾಡುವುದರಲ್ಲಿದ್ದಾರೆ. ಇದರ ಬಗ್ಗೆ ನಾವು ಹೆಚ್ಚಾಗಿ ಇಲ್ಲಿ ಹೇಳಬೇಕಾದ್ದೇನೂ ಇಲ್ಲ. ಆದರೆ ಇವತ್ತೂ ಕಾರಗಲ್ ಹಾಗೂ ಹಾಜೀ ಪೀರ್ ಕಣಿವೆಯಿಂದ ನಮ್ಮ ಸೈನ್ಯಗಳನ್ನು ನಾವು ವಾಪಸ್ಸು ಪಡೆಯಬೇಕೆ ಅದು ಹೇಗೆ ಮಾಡಬೇಕು ಎನ್ನುವುದನ್ನು ಯೋಜನೆಮಾಡುವಾಗ ನಾವು ನಮ್ಮ ಭೂಮಿಯನ್ನು ಬಿಟ್ಟುಕೊಟ್ಟಂತಾಗಲಿಲ್ಲವೇ ಪ್ರಶ್ನೆ ನಮ್ಮ ಮುಂದಿದೆ. ಈ ಸಂದರ್ಭದಲ್ಲಿ ಇವತ್ತೂ ಪ್ರಧಾನಿ ಶಾಸ್ತ್ರಿಗಳವರು ಪಾಕೀಸ್ಥಾನ ಆಕ್ರಮಣ ಮಾಡಿದಾಗ ಧೈರ್ಯದಿಂದ, ಸಾಹಸದಿಂದ ಸೈನ್ಯರ ಕಾರ್ಯಚರಣೆಯನ್ನು ಮಾಡಿ ಅಕ್ರಮಣಕಾರರನ್ನು ಹಿಂದಕ್ಕೆ ಅಟ್ಟಿದರು. ಅನಂತರದಲ್ಲಿ ಶಾಂತಿಗೆ ಕರೆ ಬಂದಾಗ ಬೇರೆ ಪ್ರಾಂತ್ಯಕ್ಕೆ ಹೋಗಿದ್ದಂತಹ ಒಂದು ಪರಿಸ್ಥಿತಿಯಲ್ಲಿ ಅವರು ಹುತಾತ್ಮರಾಗಿದ್ದಾರೆ. ಈ ಒಂದು ಪ್ಯಾರಾ ಇದರಲ್ಲಿ ಬಹಳ ಅಪ್ರಕೃತವಾಗಿತ್ತು. ಮತ್ತು ಇದರಲ್ಲಿ ಚುನಾವಣಾ ಕಾಲದಲ್ಲಿ ಪ್ರಚಾರ ಮಾಡುವ ಪ್ರಣಾಲಿಕೆ ಎಂದು ಮ್ಯಾನಿಫೆಸ್ಟೋ ಎಂದು ಏನು ಹೇಳುತ್ತಾರೆ ಅದರಲ್ಲಿಯೂ ಬರೆಯದೆ ಇರತಕ್ಕಂತಹ ಒಂದು ಮಾತನ್ನು ಇದರಲ್ಲಿ ಪ್ರಸ್ತಾಪ ಮಾಡಿದ್ದಾರೆ. ಅದು ಹೊಸ ಪ್ರಧಾನಿಗಳ ಬಗ್ಗೆ ಮಾಡಿರತಕ್ಕಂತಹುದು. ಈ ಸಂದರ್ಭದಲ್ಲಿ ಹೊಸ ಪ್ರಧಾನಿಗಳನ್ನು ಆಯ್ಕೆ ಮಾಡುವ ಚುನಾವಣೆ ಬಗ್ಗೆ ಪ್ರಸ್ತಾಪ ಮಾಡುವುದು ಒಂದು ಅನುಚಿತವಾದ ವಿಷಯ. ಅಂತಹ ಒಂದು ವಿಚಾರವನ್ನು ತಮ್ಮ ಮಾನ್ಯ ವಿ.ವಿ.ಗಿರಿಯವರು ಹೇಗೆ ಓದಿದರೂ ಮತ್ತು ಅದನ್ನು ಅಧಿಕಾರಿ ವರ್ಗದವರು ಇದರಲ್ಲೇಕೆ ಉಲ್ಲೇಖಿಸಿದರೂ ನನಗೆ ತಿಳಿಯದು. ಇದರ ಬಗ್ಗೆ ಪ್ರಸ್ತಾಪ ಮಾಡುತ್ತ ಈಗಾಗಲೇ ಶ್ರೀ ಸಂತಾನಂರವರು ಬರೆದಿದ್ದಾರೆ. ಹೈಕಮ್ಯಾಂಡಿನಲ್ಲಿರುವ ಸಿಂಡಿಕೇಟ್‌ನ ಒಬ್ಬ ಅಧ್ಯಕ್ಷರು ಒಂದು ರಾಜ್ಯದ ಮುಖ್ಯಮಂತ್ರಿಗಳು ಒಪ್ಪಿದಂತಹ ಒಬ್ಬರನ್ನು ಪಾರ್ಲಿಮೆಂಟರಿ ಬೋರ್ಡಿನವರು ಆರಿಸಬೇಕಾಯಿತು ಇದು ಅನುಚಿತವಾದ ಮಾರ್ಗ ಎಂದು. ಇದರ ಬಗ್ಗೆ ಎಷ್ಟೂ ಜನಗಳು ಈಗಾಗಲೇ ಹೇಳಿದ್ದಾರೆ. ರಾಜ್ಯದ ಮುಖ್ಯ ಮಂತ್ರಿಗಳ ಕೈಗೊಂಬೆಯಾಗಿರುವಂತಹವರು ಇಂದು ಭಾರತದ ಪ್ರಧಾನಿಗಳು. ಅದರಲ್ಲೂ ಭಾರತ ಕಾಂಗ್ರೆಸ್ಸಿನ ಹೈಕಮ್ಯಾಂಡು ಸಿಂಡಿಕೇಟು ಎಂದು ಏನಿದೆ ಆದರೆ ಒಂದು ಕೈಗೊಂಬೆಯಾಗಿರುವಂತಹವರು ಇಂದಿನ ಪ್ರಧಾನಿಯಾಗಿರಬೇಕು ಎಂದು ಹೇಳುವುದು ಇಲ್ಲಿ ಅಪ್ರಸಂಗಿಕವಾದ ವಿಚಾರ. ಈ ದೇಶದ ಪ್ರಧಾನಿಗಳಾಗಿ ಯಾರನ್ನು ಆರಿಸಬೇಕು ಎಂದು ಇಲ್ಲಿ ರಾಜ್ಯಪಾಲರ ಭಾಷಣದಲ್ಲಿ ಹೇಳಿದ್ದಾರೆ. ಇವೆಲ್ಲ ಇಲ್ಲಿ ಬೇಕಾಗಿರಲಿಲ್ಲ.

ಸ್ವಾಮಿ, ಈ ಭಾಷಣದ ಬಗ್ಗೆ ನಾನು ಹೆಚ್ಚಾಗಿ ಹೇಳುವುದಕ್ಕೆ ಇಷ್ಟಪಡುವುದಿಲ್ಲ ಆದರೆ ಇದರಲ್ಲಿ ಸರಕಾರದ ಯಾವ ನೀತಿಗಳನ್ನೂ ಕೊಟ್ಟಿಲ್ಲ. ಈ ವರ್ಷ ಮುಂಗಾರು ಮಳೆ ಹೋದುದರಿಂದ ಬೆಳೆಗಳಿಗೆ ನಷ್ಟವಾಗಿದೆ. ಈ ಪರಿಸ್ಥಿತಿ ಇಡೀ ದೇಶದಲ್ಲಿ ಇವೂತ್ತು ಇದೆ. ನಾವು ಸ್ವಾತಂತ್ರ್ಯಾ ನಂತರದಲ್ಲಿ ಮೂರು ಪಂಚವಾರ್ಷಿಕ ಫಲವಾಗಿ ಆಹಾರದಲ್ಲಿ



ಇನ್ನೂ ಸ್ವಯಂಪೂರ್ಣತೆ ಸಾಧಿಸುವುದಕ್ಕೆ ಆಗಲಿಲ್ಲ. ಇದಕ್ಕೆ ಅನೇಕ ಕಾರಣಗಳಿವೆ. ಈಗ ತಾನೇ ಶ್ರೀ ತಿಮ್ಮಪ್ಪ ಗೌಡರು ಹೇಳಿದ ಹಾಗೆ. ದೇಶದಲ್ಲಿ ಮಳೆ ಒಂದು ಕಾಲಕಾಲಕ್ಕೆ ಬೆಳೆ ಸಮೃದ್ಧಿಯಾಗಿ ಇಲ್ಲಿಯೂ ಆಹಾರದ ಹಾಹಾಕಾರ ಇಲ್ಲದೇ ಇರುವಾಗ ಇವೆಲ್ಲ ನಾವು ಮಾಡಿದಂತಹ ಪಂಚವಾರ್ಷಿಕ ಯೋಜನೆಗಳ ಫಲ ಎಂದು ಇಲ್ಲಿ ಹೇಳುತ್ತಾರೆ. ಯಾವುದಾದರೂ ಒಂದು ವರ್ಷದಲ್ಲಿ ಮಳೆ ಕಡಿಮೆಯಾಗಿ ದೇಶದಲ್ಲಿ ಆಹಾರದ ಅಭಾವ ಬಂದರೆ ಆಗ ನಾವೇನು ಮಾಡುವುದು ನಾವು ಯೋಜನೆಗಳನ್ನೆಲ್ಲಾ ಚೆನ್ನಾಗಿ ಮಾಡಿದ್ದೇವೆ. ದುರ್ದೈವವಶಾತ್ ಈ ಜನಕ್ಕೆ ತೊಂದರೆಯಾಗಿದೆ ಎಂದು ಹೇಳುತ್ತಾರೆ. ಆಹಾರದ ಅಭಾವದಲ್ಲಿ ಸುಮಾರು 1.20 ಲಕ್ಷ ಟನ್ನುಗಳಶ್ಟು ಆಹಾರಧಾನ್ಯದ ಕೊರತೆ ನಮ್ಮ ದೇಶದಲ್ಲಿದೆ ಎಂದು ಅಂದಾಜು ಮಾಡಿದ್ದಾರೆ. ನಮ್ಮ ರಾಜ್ಯದವರು ಇಲ್ಲಿ ಸುಮಾರು 8.9 ಲಕ್ಷ ಟನ್ನುಗಳಷ್ಟು ಕೊರತೆ ಇದೆ ಎಂದು ಹೇಳುತ್ತಾರೆ. ಅವರು ಯೋಚನೆ ಮಾಡಿರುವುದನ್ನು ನೋಡಿದರೆ ಸುಮಾರು 50 ಲಕ್ಷ ಜನ ಪಟ್ಟಣಗಳಲ್ಲಿ ವಾಸ ಮಾಡುವ ಅರ್ಬನ್ ಪಾಪ್ಯುಲೇಷನ್‌ನನ್ನು ದೃಷ್ಟಿಯಲ್ಲಿ ಇಟ್ಟುಕೊಂಡು ಅವರು ಪ್ರತಿವರ್ಷವೂ ಸುಮಾರು ನಾಲ್ಕೈದು ಲಕ್ಷಗಳಷ್ಟು ದರವನ್ನು ಹೊರಗಡೆಯಿಂದ ತರಿಸಬೇಕೆಂದು ಅಂದಾಜು ಇಟ್ಟುಕೊಂಡಿದ್ದಾರೆ. ನಮ್ಮ ರಾಜ್ಯದಲ್ಲಿ ಸಾಮಾನ್ಯವಾಗಿ ಉತ್ಪಾದನೆ ಸುಮಾರು 45 ಲಕ್ಷ ಟನ್ನುಗಳು ಎಂದು ಅಂದಾಜು ಮಾಡಿದ್ದಾರೆಂದು ಈ ಭಾಷಣದಲ್ಲಿದೆ. ನನ್ನ ಅನುಭವದಲ್ಲಿ ಹೇಳುವುದಾದರೆ ಸುಮಾರು 35 ಲಕ್ಷ ಟನ್ನುಗಳಷ್ಟು ಬರುತ್ತೊ ಇಲ್ಲವೋ ಎಂದು ಅದೆ. ನಾನು ಅಂದಾಜು ಮಾಡಿರುವಂತೆ ಖರಿಫ್ ಬೆಳೆಯಲ್ಲಿ ಶೇ 50 ರಷ್ಟು ಬೆಳೆ ಬಂದಿದೆ. ರಾಗಿ ಶೇ 75 ರಷ್ಟು ನಷ್ಟವಾಗಿದೆ. ಭತ್ತದಲ್ಲಿ ಶೇ 60 ರಷ್ಟು ನಷ್ಟವಾಗಿದೆ. ಈ ನಷ್ಟವನೆಲ್ಲಾ ನಾವು ಗಣನೆಗೆ ತೆಗೆದುಕೊಂಡರೆ ನಮ್ಮ ರಾಜ್ಯದಲ್ಲಿ ಕನಿಷ್ಟ ಪಕ್ಷ 15-20 ಲಕ್ಷಟನ್ನುಗಳಷ್ಟು ಆಹಾರ ಧಾನ್ಯದ ಕೊರತೆ ಇದೆ ಎಂದು ನಾನು ಭಾವಿಸುತ್ತೇನೆ. ಇದರ ಬಗ್ಗೆ ನಮ್ಮ ಆಹಾರ ಮಂತ್ರಿಗಳು ತಮ್ಮ ಉತ್ತರದಲ್ಲಿ ಹೇಳಬಹುದು. ಅವರು ಯಾವ ಅಂಕೆ ಸಂಖ್ಯೆಗಳ ಆಧಾರದ ಮೇಲೆ 9 ಲಕ್ಷ ಟನ್ನುಗಳಷ್ಟು ನಷ್ಟ ಎಂದು ಹೇಳಿದ್ದಾರೆ ಎನ್ನುವುದು ತಿಳಿಯಬೇಕೆಂದು ಕೇಳುತ್ತೇನೆ. ಸ್ವಾಮೀ ನಮ್ಮ ಮಾನ್ಯ ಆಹಾರ ಸಚಿವರು ಮುಂದಿನ ಸೆಪ್ಟಂಬರ್ ತಿಂಗಳಿನಿಂದ ಮನಾಪಲಿ ಪ್ರೊಕ್ಯೂರ್‌ಮೆಂಟು ಮಾಡುತ್ತೇವೆಂದು ಮೇಲ್ಮನೆಯಲ್ಲಿ ತಿಳಿಸಿದ್ದಾರೆ. ಆದರೆ ಸೆಪ್ಟಂಬರು ತಿಂಗಳಲ್ಲಿ ಯಾವ ಬೆಳೆ ಬರುತ್ತದೋ ನನಗೆ ಗೊತ್ತಿಲ್ಲ. ಬಹುಶಃ ಮುಂದಿನ ಸುಗ್ಗಿಯನ್ನು ದೃಷ್ಟಿಯಲ್ಲಿಟ್ಟುಕೊಂಡು ಅದಕ್ಕಾಗಿ ತಕ್ಕ ಕ್ರಮಗಳನ್ನು ತೆಗೆದುಕೊಳ್ಳಬೇಕೆನ್ನುವ ಅರ್ಥದಲ್ಲಿ ಹೇಳಿರಬಹುದು. ನನ್ನ ತಿದ್ದುಪಡಿಯಲ್ಲಿ ತೆಗೆದುಕೊಳ್ಳಬೇಕೆನ್ನುವ ಅರ್ಥದಲ್ಲಿ ಹೇಳಿರಬಹುದು. ನನ್ನ ತಿದ್ದುಪಡಿಯಲ್ಲಿ ತಂದಿರುವ ನಿರ್ಣಯದಲ್ಲಿ ಹೀಗಿದೆ. ನಾನು ಯಾವಾಗಲೂ ಕನ್ನಡದಲ್ಲೇ ಶಾಸನ ಸಭೆಯ ಕಛೇರಿಗೆ ಬರೆದುಕೊಡುವುದು, ಆದರೆ ಲೆಜಿಸ್ಲೇಚರು ಸೆಕ್ರಟೆರಿಯಟ್ಟಿನಲ್ಲಿ ಕನ್ನಡ ಟೈಪರೈಟರ್ ಇಲ್ಲವೂ ಏನೋ ಕನ್ನಡದಿಂದ ಇಂಗ್ಲೀಷ್ ತರ್ಜುಮೆ ಮಾಡಿವವರು ಸರಿಯಾಗಿ ಮಾಡಿಲ್ಲವೋ ಅದು ನನಗೆ ಗೊತ್ತಾಗಿತ್ತಿಲ್ಲ. ನಾನು ರಾಷ್ಟ್ರ ಎಂದು

Mr. SPEAKER- If the member had stated it before, the chief would have looked into it earlier.

ಶ್ರೀ ಎಸ್. ಗೋಪಾಲಗೌಡ- ರಾಷ್ಟ್ರ ಎಂದು ನಾನು ಬರೆಡುಕೊಟ್ಟಂತೆ ನೆನಪಿದೆ. ಆದರೆ ಇದರಲ್ಲಿ ಸ್ಟೇಟ್ ಎಂದಿದೆ. ರಾಷ್ಟ್ರವನ್ನು ಒಂದು ಘಟಕವಾಗಿ ಮಾಡಿಕೊಂಡು ಸರಕಾರ ಇಡೀ ದೇಶದಲ್ಲಿ ಆಹಾರದ ಸಗಟು ವ್ಯಾಪಾರವನ್ನು ಹಾಗೂ ಹಂಚುವ ವ್ಯವಸ್ಥೆಯನ್ನು ಕೈಗೊಳ್ಳಬೇಕೆಂದು ನಾನು ಹೇಳಿರುವುದು. ರಾಜ್ಯ ಸರಕಾರದವರು ಕೇಂದ್ರ ಸರಕಾರದವರು ಹೇಗೆ ಸಲಹೆ ಕೊಡುತ್ತಾರೋ ಅದನ್ನು ನೋಡಿಕೊಂಡು ಸ್ಟಾಟುಟರಿ ರೇಷನಿಂಗ್ ಜಾರಿಯಲ್ಲಿ ತರುತ್ತೇವೆಂದು ಹೇಳಿ ಅದನ್ನು ಜನವರಿ ಒಂದನೇ ತಾರೀಖಿನಿಂದ ತರುತ್ತೇವೆಂದು ಹೇಳುತ್ತಿದ್ದರು. ಅದು ಈಗ ಹೋಗಿ ಬೆಂಗಳೂರು ಹಾಗೂ ಕೆ.ಜಿ .ಎಫ್. ನಲ್ಲಿ ತರುತ್ತೇವೆಂದು ಇತ್ತು. ಅದು ಹೋಯಿತು. ಕೆಲವು ನಗರದಲ್ಲಿ ಇನ್ಫಾರ್ಮಲ್ ರೇಶನಿಂಗ್ ಇದ್ದದ್ದೂ ಕೈಬೆಡುತ್ತೇವೆಂದು ಹೇಳುತ್ತಾರೆ. ಮಾನ್ಯ ಆಹಾರ ಮಂತ್ರಿಗಳು ಒಂದು ಹೇಳಿಕೆಯನ್ನು ಕೊಡುತ್ತಾ, ಧಾನ್ಯಗಳ ಬೆಲೆಯ ಏರುತ್ತಾ ಇದೆ ಎಂದು ಹೇಳಿದರು. ಅದಕ್ಕೆ ಕಾರಣ ಕೂಡಾ ಕೊಡುವುದಕ್ಕೆ ಪ್ರಯತ್ನ ಮಾಡಿದ್ದಾರೆ ಮತ್ತು ಧಾನ್ಯಗಳ ಬೆಲೆ ಎಷ್ಟು ಮಟ್ಟಿಗೆ ಇದೆ ಎಂಬುದನ್ನು ಸರ್ಕಾರದ ಅಂಕಿ ಅಂಶಗಳನ್ನು ತೆಗೆದುಕೊಂಡು ನೋಡಿದರೆ ಗೊತ್ತಾಗುತ್ತದೆ. ಇಲ್ಲಿಯವರೆಗೆ ಎಷ್ಟರಮಟ್ಟಿಗೆ ಇತ್ತು ಮತ್ತು ಯಾವ ಕಾರಣದಿಂದ ಆ ತರಹ ಇದೆ ಒಂಬುದು ನಮಗೆ ಗೊತ್ತಾಗುತ್ತದೆ. ಇಂದು ಹಂಚಿಕೆಯನ್ನು ಸರ್ಕಾರ ತೆಗೆದುಕೊಳ್ಳಬೇಕೆಂದು ನಾನು ಹೇಳುತ್ತೇನೆ. ಆದರೆ ಸರ್ಕಾರಕ್ಕೂ ಈ ಖಾಸಗೀ ವ್ಯಾಪಾರಿಗಳಿಗೂ ಇರತಕ್ಕಂಥ ಒಂದು ಪವಿತ್ರವಾದ ಮೈತ್ರಿ ಮತ್ತು ಸಂಬಂಧ ಎನಿದೆ ಅದು ಸರ್ಕಾರವನ್ನು ಇಂದು ಒಂದು ಹೆಜ್ಜೆ ಹಾಕುವುದಕ್ಕೆ ಬಂಡುತ್ತಾ ಇಲ್ಲ ಎಂದು ಸ್ಪಷ್ಟವಾಗಿ ಗೊತ್ತಾಗುತ್ತದೆ. ಹಿಂದೆ ಸರ್ಕಾರದವರು ಸೇಳಿದರು, ನಾವೇ ನಡೌಸಕರ್ರ ಮಿಲ್ಲುಗಳನ್ನು ಸಂಸ್ಥಾಪನೆ ಮಾಡುತ್ತೇವೆ, ಬ್ರೆಡ್ ಮಾಡತಕ್ಕ ಅಂಗಡಿಗಳನ್ನು ಸ್ಥಾಪನೆ ಮಾಡಿತ್ತೇವೆ ಎಂದು . ಇಂತಹ ಅನೇಕ ಎಷ್ಟೂ ಸಾಧ್ಯವಿಲ್ಲದ ಭರವಸೆಗಳನ್ನು ಕೊಟ್ಟುಕೊಂಡು ಬಂದಿದ್ದಾರೆ. ಈ ಸಂದರ್ಭದಲ್ಲಿ ಆಹಾರ ಕಾರ್ಪೊರೇಶನ್ ನನ್ನು ಎನೋ ಒಂದನ್ನು ಸ್ಥಾಪನೆ ಮಾಡಿದ್ದಾರೆ. ಅದರ ಅಧ್ಯಕ್ಷರಾಗಿದ್ದಂತಹವರು ಈಚಿಗೆ ರಾಜೀನಾಮೆ ಕೊಟ್ಟಮೇಲೆ ಕೆಲವು ಸಲಹೆಗಳನ್ನು ಮಾಡಿದ್ದಾರೆ. ಆ ಸಲಹೆಗಳನ್ನು ಸರ್ಕಾರದವರು ಗಮನಿಸಿದ್ದಾರೆಯೇ ಎಂದರೆ, ಆಸಲಹೆಗಳನ್ನೆ ಕೂಡಾ ಇವತ್ತು ಗಮನಿಸಿಲ್ಲ ಎಂದು ನನ್ನ ಅನುಭವದಿಂದ ಹೇಳಬೇಕಾಗುತ್ತದೆ.

ಸ್ವಾಮಿ, ಈ ಲೆವಿ ಆಜ್ಞೆಯ ಬಗ್ಗೆ ಎಂದು ಮಾತನ್ನು ಹೇಳುತ್ತೇನೆ ಸುಮಾರು ಆಗಸ್ಟ ತಿಂಗಳಲ್ಲಿ ಮಳೆ ಚೆನ್ನಾಗಿ ಆಗುತ್ತದೆ ಎನ್ನುವ ಕಾಲದಲ್ಲಿ ನೀರಾವರಿ ಸೌಲಭ್ಯ ಇರುವ ಕಡೆ ಪ್ರತಿಯೊಬ್ಬನೂ ಎಷ್ಟು ಕೊಡಬೇಕು, ಮಳೆ ನೀರಿನ ಸೌಲಭ್ಯ ಇರುವ ಕಡೆ ಎಷ್ಟು ಕೋಡಬೇಕೆಂಬುದು ತೀರ್ಮಾನಿವಾಗಿತ್ತು. ಸೆಪ್ಟಂಬರ್, ಅಕ್ಟೋಬರ್ ತಿಂಗಳಲ್ಲಿ ಮಳೆ ಬೆಳೆ ಎಲ್ಲವೂ ಹಾಳಾಯ್ತು. ನಮ್ಮ ಜಿಲ್ಲೆಯ ಮಾತು ಹೇಳುವುದಾದರೆ, ಶಿವಮೊಗ್ಗ ಜಿಲ್ಲಾಧಿಕಾರಿಗಳು ಒಂದು ವರದಿಯನ್ನು ಶ್ರೀಮಾನ್ ನಾರಾಯಣಗೌಡರು ಅಲ್ಲಿಗೆ ಹೋದಾಗ ಒಪ್ಪಿದರು. ವರದಿಯಲ್ಲಿ ಸುಮಾರು ಒಂದು ಸಾವಿರ ಎಕರೆ ಜಮೀನು ಮಳೆ ಇಲ್ಲದೆ ಜಮೀನಿನಲ್ಲಿ ಬೆಳೆ ನಾಲ್ಕು ಆಣೆಗೆ ಕಡಿಮೆಯಾಗಿದೆ. ಬಾಕಿ ಕಡೆ ಬೆಳೆ 8-10 ಆಣೆ



ಯಷ್ಟು ಆಗಬಹುದು ಎಂದು ವರದಿ ಕೊಟ್ಟರು. ಇದರ ಡಿ.ಐ.ಆರ್. ರೂಲ್ಸ ಪ್ರಕಾರ ಲೆವಿ ಮಾಡಿದರೂ ಇವತ್ತು ಶಿವಮೊಗ್ಗ ಜಿಲ್ಲೆಯ 4 ಲಕ್ಷ ಕ್ವಿಂಟಾಲ್ ಭತ್ತವನ್ನು ಕೊಡಬೇಕು. ತೀರ್ಥಹಳ್ಳಿ 40 ಸಾವಿರ ಕೊಡಬೇಕು. ಹೊಸನಗರ 40 ಸಾವಿರ ಕೊಡಬೇಕು ಎಂದು ಇರುವುದರಿಂದ ಆಫೀಸರುಗಳು ಪ್ರತಿಯೊಬ್ಬ ರೈತನ ಮನೆಗೂ ನುಗ್ಗಿ ವಸೂಲು ಮಾಡಿವುದಕ್ಕೆ ಹೊರಟಿದ್ದಾರೆ. ಪುನಃ ನಾರಾಯಣಗೌಡರು ಹೋದಾಗ ನಾಲ್ಕು ಸಾವಿರದ ಗುರಿಯನ್ನು ಮುಟ್ಟಬೇಕೆಂದು ಹೇಳುತ್ತಾಮಾತೆತ್ತಿದರೆ ಡಿಐಆರ್ ಎಂದು ಹೇಳುತ್ತಾರೆ. ಯಾವ ಗಾಡಿಯನ್ನು ರೈತ ಎಲ್ಲಿ ಸಾಗಿಸಿದರೂ ಹಿಡಿಯುತ್ತಾರೆ. ಇಂತಹ ಕಿರುಕುಳಗಳನ್ನು ಕೊಡುತ್ತಿದ್ದಾರೆ. ಎತ್ತುವಳಿಯನ್ನು ಅವರು ಪರಿಶೀಲನೆ ಮಾಡಿಲ್ಲ. ಬೆಳೆ ಹೋದಕಾಲಕ್ಕೆ ಇಂತಿಷ್ಟೆ ಕೊಡಬೇಕೆಂದು ಮಾಡಿದ್ದಾರೆ. ಆದರೆ ಅದನ್ನು ಪುನರ್ವಿಮರ್ಶೆಮಾಡಲಿಲ್ಲ. ಪೂರ್ತಿಯಾಗಿ ಬೆಳೆ ಹೋದವನಿಗೆ, ಮಕ್ಕಿ ಗದ್ದೆಯಲ್ಲಿ ಬೆಳೆ ಎತ್ತಿದವನಿಗೆ ನಷ್ಟವಾದಾಗ, ಯಾರು ಯಾರು ಎಷ್ಟು ಭತ್ತ ಸರ್ಕಾರಕ್ಕೆ ಕೊಡಬೇಕೆಂದು ಪುನರ್ ವಿವರ್ಶೆ ಮಾಡಿಲ್ಲ. ಸರ್ಕಾರ ಆದನ್ನು ಗಮನಕ್ಕೆ ತೆಗೆದುಕೊಂಡಿಲ್ಲ.

ಇನ್ನೊಂದು ಮಾತು ಹೇಳುತ್ತೇನೆ. ಹಿಂದೆ 1964 ನೇ ಇಸವಿಯಲ್ಲಿ ದರದ ವಿಷಯದಲ್ಲಿ ವಾಲಂಟರಿಯಾಗಿ ಯಾರಾದರೂ ಕೊಟ್ಟರೆ, ನಾವು ಇಂತಿಷ್ಟು ಕೊಡುತ್ತೇವೆ. ಎಂದು ಒಂದು ಸರ್ಪೋರ್ಟ್ರ್ ಪ್ರೆಸ್ ಮಾಡಿದ್ದರು. ಅದು ಎರಡೂ ದರ ಹೆಚ್ಚು ಕಡಿಮೆ ದರ ಇದೆ. ಇವತ್ತು ಮಾರ್ಕೆಟ್‌ನಲ್ಲಿ 70-75-80 ರೂಪಾಯಿ ಕ್ವಿಂಟಾಲಿಗೆ ಮಾರಾಟವಾಗುತ್ತಿರುವಾಗ ಸರ್ಕಾರದವರು ಮನಾಪಲಿ ಪ್ರಾಕ್ಯೂರ್‌ಮೆಂಟ್ ಹಾಕದಿರುವಾಗ ರೈತರು ತಾನು ಬೆಳೆದಂತಹ ಭತ್ತವನ್ನು 45 ರೂಪಾಯಿಗಳಿಗೆ ಯಾತಕ್ಕೆ ಕೊಡಬೇಕು? ಈ ಭತ್ತವನ್ನು ಡಿಐಆರ್ ಮೂಲಕ ವಸೂಲು ಮಾಡುವುದಕ್ಕೆ ಯಾವ ನೈತಿಕ ಹಕ್ಕು ಇದೆ ಎಂದು ನಾನು ಇಲ್ಲಿ ಪ್ರಶ್ನೆ ಮಾಡುತ್ತೇನೆ. ಒಂದು ಕ್ವಿಂಟಾಲ್ ಆದರೂ ಸರ್ಕಾರಕ್ಕೆ ಏತಕ್ಕೆ ಕೊಡಬೇಕು? ಇನ್ನು ಕೊಂಡು ತಿನ್ನತಕ್ಕಂತಹವರಿಗೆ ಇವರು ಗೊತ್ತು ಮಾಡಿರತಕ್ಕ ದರಕ್ಕೆ ಅಕ್ಕಿಯನ್ನು ಒದಗಿಸುತ್ತಿಲ್ಲ.

ಇನ್ನೊಂದು ವಿಷಯ ಹೇಳಿದರು. ಗ್ರಾಮಂತರ ಪ್ರದೇಶಗಳಲ್ಲಿ ಈ ವ್ಯವಸ್ಥೆ ಮಾಡುವ ಅಭಿಪ್ರಾಯವಿಲ್ಲ ಎಂದು ಕಾಣುತ್ತದೆ. ನಮ್ಮಲ್ಲಿ ದೊಡ್ಡವರು ಹೇಳುತ್ತಾರೆ ನಮ್ಮ ಆಹಾರದ ಪದ್ಧತಿಯನ್ನು ಬದಲಾವಣೆ ಮಾಡಿಕೊಳ್ಳಿ ಎಂದು ಇವತ್ತು ರೈತರು ಭತ್ತ, ರಾಗಿ, ಜೋಳ ಇವನೆಲ್ಲಾ ಬೀಜ ಹಾಕಿ, ಅವನಿಗೆ ಅದು ಕೈಗೆ ಬರದಿದ್ದಾಗೆ, ಅವನು ಅವನ ಜಾನುವಾರುಗಳನ್ನು ಹಿಡಿದುಕೊಂಡು ನೀರು ಎಲ್ಲಿ ಇದೆ. ತಿನ್ನುವುದಕ್ಕೆ ಗಂಜಿ ಎಲ್ಲಿ ಇದೆ, ಎಂದು ಹುಡುಕುತ್ತಾ ಅಲೆದಾಡುತ್ತಿರುವಾಗ ಯಥೇಷ್ಟವಾಗಿ ಗೋಧಿ ತಿನ್ನಿ ಎಂದು ಹೇಳಿದರೆ ಹೇಗೆ? ಇಂತಹ ಒಂದು ಅವಾಸ್ತವಿಕವಾಗಿ ಜನರ ಜೀವನ ಇದೆ. ಈ ಸಮಯದಲ್ಲಿ ಒಂದು ಮಾತನ್ನು ನೆನಪಿಗೆ ಬರುತ್ತದೆ, ಫ್ರಾನ್ಸಿನ ರಾಣಿ, ಜನ ಬ್ರೆಡ್ ಬ್ರೆಡ್ ಎಂದು ಕೂಗುತ್ತಿರುವಾಗ ನಿವು ಕೇಕ್ ತಿನ್ನಿ ಎಂದು ಹೇಳಿದಳಂತೆ ನಮ್ಮ ರೈತರ ಬೆಳೆ

ಎಲ್ಲವೂ ಹೋದಾಗ ಅವರು ಬೇರೆ ಕಡೆಗೆ ಹೋಗಿ ಕೊಂಡು ತಿನ್ನುವ ಬಗೆ ಹೇಗೆ? ಸರ್ಕಾರದವರು ಇಂತಹ ಮಾತುಗಳನ್ನು ಆಡುವಾಗ ಅದು ನನಗೆ ಬಹಳ ದುಃಖವನ್ನುಂಟುಮಾಡುತ್ತದೆ.

ಇನ್ನೊಂದು ಮಾತು ಗಡ್ಡಕ್ಕೆ ಬೆಂಕಿ ಹತ್ತಿದಾಗ ಭಾವಿ ತೆಗೆದ ಗಾದೆಯಂತೆ ಪ್ರತಿಯೊಂದು ವಿಷಯದಲ್ಲೂ ನಮ್ಮ ಸರ್ಕಾರ ಇದೇ ರೀತಿಯಲ್ಲಿ ಕೆಲಸಮಾಡುತ್ತಿದೆ ಬರೀ ಮಳೆ ಬಂದು ಪ್ರವಾಹ ಶುರುವಾದಾಗ ಸಾಲುವಾರು ರಿಲೀಫ್ ವರ್ಕ್ಸ್ ಪ್ರಾರಂಭಮಾಡುತ್ತಾರೆ. ಅವರ ಸಂಬಂಧವಾಗಿ ಕೊಟ್ಟ ಜಿಂಕ್ ಪೀಟ್ಸ್ ಎಲ್ಲಿ ಹೊಯ್ತು ಎಂಬುದು ಗೊತ್ತಿಲ್ಲ. ಅನಾವೃಷ್ಟಿ ಇದ್ದು ದೊಡ್ಡ ದೊಡ್ಡ ಬಾವಿ ಬೇಕೆಂದು ಗಲಾಟೆ ಮಾಡಿ ಶಿವಮೊಗ್ಗದಲ್ಲಿ 10 ವಿದ್ಯುಚ್ಛಕ್ತಿಯ ಪಂಪ್‌ಸೆಟ್ ಮತ್ತು ವಿದ್ಯಚ್ಛಕ್ತಿ ಕೊಡುವುದಕ್ಕಾಗಿ ಡಿಪಾರ್ಟ್‌ಮೆಂಟನ್ನು ಕೇಳಿದರೆ ನಮ್ಮಲ್ಲಿ ತಂತಿ ಇಲ್ಲ. ಬಂದ ಮೇಲೆ ಕೊಡುತ್ತೇವೆಂದು ಹೇಳುತ್ತಾರೆ. ವಿದ್ಯುಚ್ಛಕ್ತಿ ಇಲಾಖೆ, ಆಹಾರದ ಇಲಾಖೆ, ಯಾವುದಾರಲ್ಲೂ ಒಂದು ಹೊಂದಾಣಿಕೆ ಇಲ್ಲ. ಇಷ್ಟು ವರ್ಷಗಳ ಸರ್ಕಾರದವರ ಯೋಜನೆಗಳ ಫಲವಾಗಿ ಹೈಬ್ರಿಡ್, ಮೆಜ್, ಜೋವರ್ ಯಾವುದನ್ನೂ ಸರ್ಕಾರದವರು ಒದಗಿಸುವ ಸ್ಥಿತಿಯಲಿಲ್ಲ. ಕೊಯಂಬತ್ತೂರಿಗೆ ಹೋಗಿ ತೆಗೆದುಕೊಂಡು ಬಂದು ಬಿತ್ತಿರಿ ಎಂದು ಹೇಳುತ್ತಾರೆ. ಹಾಗೆ ತೆಗೆದುಕೊಂಡು ಬಂದು ಬಿತ್ತಿದರೆ, ಅದು ಎಲ್ಲಿಯಾದರೂ ಹಾಳಾಗಿ ಹೋದರೆ, ಅದಕ್ಕೆ ಏನಾದರೂ ಪರಿಹಾರ ಇದೆಯೇ ಎಂದು ಕೇಳಿದರೆ ಅದು ಪ್ರಯೋಗಕರವಾಗಿ ಮಾಡಿದಂತಾಗುತ್ತದೆ ಎಂದು ಹೇಳುತ್ತಾರೆ. ಇಂತಹ ಒಂದು ಬೇಜವಾಬ್ದಾರಿಯುತ ಯೋಜನೆಯಿಂದ ದೇಶದಲ್ಲಿ ಒಂದು ಚಳುವಳಿಯೇ ನಡೆಯಿತು. ಇದರಿಂದ ಅದು ರೈತನನ್ನು ಕೆರಳಿಸಿತು.

ಸ್ವಾಮೀ, ನಮ್ಮ ದೇಶದಲ್ಲಿ ಆಹಾರದ ಕೊರತೆ ಬಹಳ ವರ್ಷಗಳಿಂದಲೂ ಇದೆ, ನಮ್ಮ ರೈತ ಬಡವ, ಅವನಿಗೆ ಜಮೀನು ಇದ್ದರೆ ಜಮೀನಿಗೆ ಬೇಕಾಗದಂತಹ ನೀರು ಇಲ್ಲ ಜಮೀನು ನೀರು ಎರಡು ಇದ್ದರೆ ಬೀಜ ಇರುವುದಿಲ್ಲ. ಮತ್ತು ಬೇಕಾದಷ್ಟು ಗೊಬ್ಬರ ಇರುವುದಿಲ್ಲ. ಅವನು ಬಹಳ ಬಡವನಾಗಿದ್ದಾನೆ. ಇವತ್ತು ದೇಶದಲ್ಲಿ ಉತ್ಪಾದನೆ ಹೆಚ್ಚಿಸಬೇಕಾದರೆ ಕನಿಷ್ಟ ಪಕ್ಷ ಅವನ ಕೈಗೆ ಒಂದು ಸಾವಿರ ರೂಪಾಯಿ ಯಾದರೂ ಬರಬೇಕು ಆದುದರಿಂದ ಅವನು ಬೆಳೆ ಹೆಚ್ಚಿಸುವುದಕ್ಕೆ ಸಾಧ್ಯವಾಗುತ್ತದೆ. ಇಂಥ ಸಂದರ್ಭದಲ್ಲಿ ಭೂಸುಧಾರಣೆ ಬಗ್ಗೆ ರಾಜ್ಯಪಾಲರು ಭಾಷಣದಲ್ಲಿ ಒಂದು ಮಾತೂ ಇಲ್ಲ. ಅದನ್ನು ನೋಡಿ ನನಗೆ ಬಹಳ ವ್ಯಥೆಯಾಯ್ತು. ಶ್ರೀಮಾನ್ ಕೃಷ್ಣಪ್ಪನವರು ಏನೋ ದೊಡ್ಡ ಉಪಕಾರ ಮಾಡುತ್ತೇವೆಂದು ಹೇಳಿ ಕೊನೆಯ ಕಾಲದಲ್ಲಿ ಮುಜುರಾಯಿ ಮತ್ತು ದೇವಸ್ಥಾನಗಳ ಜನೀನುಗಳನ್ನೆಲ್ಲಾ ಕಾನೂನಿಂದ ಹೊರತುಪಡಿಸಿದರು. ಇವತ್ತು ಆ ವಿಷಯದಲ್ಲಿ ಅವರು ಏನೂ ಹೇಳುತ್ತಾ ಇಲ್ಲ. ಮುಂಬೈ ಪ್ರಾಂತ್ಯದಿಂದ ಯಾವ ಮೊರಾರ್ಜಿ ದೇಸಾಯಿಯವರು ಬಲ ಪಕ್ಷದಲ್ಲಿ ಬಂಡವಾಳ ಶಾಹಿ ಸ್ನೇಹಿತರು ಎಂದು ದೇಶದಲ್ಲಿ ಪ್ರಚಾರ ನಡೆದಿತ್ತೂ, ಅವರೇ ಈ ಭೂಸುಧಾರಣೆ ಕಾನೂನನ್ನು ಜಾರಿಗೆ ತಂದಿದ್ದರೂ,



ಅಲ್ಲಿ ಭೂಸುಧಾರಣಾ ಕಾನೂನನ್ನು ರೂಡಿಸಿದರೂ ಈ ಭೂಸುಧಾರಣಾ ಕಾನೂನು ಮುಂಬೈ ಪ್ರಾಂತ್ಯದಲ್ಲಿಯೇ ಜಾರಿಗೆ ತರದೆ ಕಾಂಗ್ರೆಸ್ ಉಳಿದಿದೆ. ನಮ್ಮ ರಾಜ್ಯದ ತೀರ್ಥಹಳ್ಳಿ, ಹೊಸನಗರ ಮೊಡಲಾದ ಕಡೆಗಳಲ್ಲಿ ನೋಡಿದರೆ, ನೂರಾರು ಜನ ಪ್ರತಿ ದಿವಸವೂ ತಹಸೀಲ್ದಾರರವರ ಕಛೇರಿಯ ಮುಂದೆ ಬಂದು ತಮ್ಮ ಹಳೆಯ ಡಿಸ್ಪ್ಯೂಟ್ ಗಳಿಗೋಸ್ಕರ ನಿಂತಿರುವುದು ನೋಡಿದರೆ ಗೊತ್ತಾಗುತ್ತದೆ. ಇವತ್ತು ಕಾಯಿದೆ ಪ್ರಕಾರ ಎಷ್ಟು ಟ್ರಿಬ್ಯೂನಲ್‌ಗಳನ್ನು ನೇಮಕಮಾಡಿದ್ದಾರೆ, ಹೊಸಕಾಯಿದೆಯನ್ನು ಜಾರಿಗೆ ತರುವುದಕ್ಕೆ ಸರ್ಕಾರ ಏನು ಕ್ರಮ ತೆಗೆದುಕೊಂಡಿದ್ದಾರೆ ಎನ್ನುವುದು ಗೊತ್ತಿಲ್ಲ. ಇದನ್ನು ಜಾರಿಗೆ ತರುವುದರಿಂದ 30 ಕೋಟಿ ರುಪಾಯಿ ಪರಿಹಾರ ಕೊಡಬೇಕು, ಕೇಂದ್ರದವರು ನಾಲ್ಕು ಕೋಟಿ ರೂಪಾಯಿಗಳನ್ನು ಕೊಟ್ಟರೆ ಈ ವರ್ಷದಿಂದ ಜಾರಿಗೆ ತರುತ್ತೇವೆ ಎನ್ನುವ ಮಾತನ್ನು ಸರ್ಕಾರದವರು ಆಡುತ್ತಾರೆ. ಭೂಸುಧಾರಣೆಯನ್ನು ಜಾರಿಗೆ ತರುವ ವಿಷಯದಲ್ಲಿ ನಂಬಿಕೆ ಇಲ್ಲ ಎನ್ನುವ ಮಾತು ಜತ್ತಿ ಸಮಿತಿ ವರದಿ ಬಂದ ಲಾಗಾಯಿತು ಭೂಸುಧಾರಣೆ ಮಾಡುವ ಕಾರ್ಯ ಎಷ್ಟು ತೀವ್ರಗತಿಯಿಂದ ನಡೆಯುತ್ತಿದೆ ಎನ್ನುವುದರಿಂದಲೇ ಗೊತ್ತಾಗುತ್ತದೆ. ಭೂಮಿಯಲ್ಲಿ ಹೆಚ್ಚು ಉತ್ಪಾದನೆಯಾಗಬೇಕಾದರೆ ಭೂ ಸುಧಾರಣೆ ತ್ವರಿತವಾಗಿ ಜಾರಿಗೆ ಬರಬೇಕು.

Mr. SPEAKER. The Hon'ble Member wanted his amendment on the Motion of Thanks and I am just passing it on to him. The member may please read it and tell me what he wants.

ಶ್ರೀ ಎಸ್. ಗೋಪಾಲಗೌಡ- 1965ರ ನಂತರ ಹಿಂದಿ, ರಾಷ್ಟ್ರದ ಭಾಷೆಯಾಗಬೇಕು, ರಾಜ್ಯದಲ್ಲಿ ಪ್ರಾಂತೀಯ ಭಾಷೆಯನ್ನು ಉಪಯೋಗಿಸಬೇಕು, ಇಂಗ್ಲೀಷಿನ ಬಳಕೆಯನ್ನು ವ್ಯವಹಾರದಲ್ಲಿ ಕಡಿಮೆ ಮಾಡಬೇಕು ಎಂದು ಈ ಸಭೆಯಲ್ಲಿ ಕೂಡ ಒಪ್ಪಿಕೊಂಡಿದ್ದೇವೆ. ಆದರೆ ಈ ಸಭೆಯಲ್ಲಿ ತಮ್ಮ ನೇತೃತ್ವದಲ್ಲಿ ಅದನ್ನು ನಾವು ಜಾರಿಗೆ ತರುವುದಕ್ಕೆ ಆಗಿಲ್ಲ. ಶ್ರೀಮಾನ್ ವೈ ನಂಜುಡಯ್ಯಶೆಟ್ಟರು ಇಂಗ್ಲೀಷನಲ್ಲಿಯೇ ಭಾಷಣವನ್ನು ಬರೆದುಕೊಂಡು ಓದಿದ್ದು ಬಹಳ ಸಂತೋಷದ ವಿಷಯ ಎಂದು ಭಾವಿಸುತ್ತೇನೆ.

ಶ್ರೀ ಎಸ್. ಗೋಪಾಲ ಗೌಡ- ಇವತ್ತು ಕನ್ನಡವನ್ನು ಜಾರಿಗೆ ತರುವುದರ ಬಗ್ಗೆ ಮೈಸೂರು ಸರ್ಕಾರದವರು ಎಷ್ಟು ಕಳಕಳಿಯಿಂದ ಕೆಲಸಮಾಡಿದ್ದಾರೆ ಎನ್ನುವುದನ್ನು ನಾವು ವಿಚಾರ ಮಾಡಿದಾಗ್ಗೆ ಅವರು ಆ ದಿಕ್ಕಿನಲ್ಲಿ ಏನೂ ಕೆಲಸ ಮಾಡುತ್ತಿಲ್ಲ ಎಂದು ಬಹಳ ವಿಷಾದದಿಂದ ಹೇಳಬೇಕಾಗಿದೆ. ಕನ್ನಡ ಟೈಪರೈಟರ್‌ನ ಬಗ್ಗೆ ಅದರ ನಿರ್ಮಾಪಕರು ಒಂದು ಕತೆಯನ್ನು ನಮಗೆಲ್ಲಾ ಕಳಿಸಿದ್ದಾರೆ. ಶ್ರೀ ಅನಂತಸುಬ್ಬರಾಯರು 30 ವರ್ಷಗಳ ಕಾಲ ಕೆಲಸ ಮಾಡಿ ಕನ್ನಡದಲ್ಲಿ ಎಂದು ಟೈಪರೈಚರ್‌ನ್ನು ತಯಾರಿಸಿದಂತೆಯೂ, ಅದನ್ನು ,ಸರ್ಕಾರದವರು ಆರು ರೂಪಾಯಿ ಕೊಟ್ಟು ತೆಗೆದುಕೊಂಡಂತೆಯೂ ಅವರು ಬರದಿರತಕ್ಕ

ಕರುಣಾಜನಕ ಕಥೆಯನ್ನು ತಮ್ಮ ಗಮನಕ್ಕೆ ತರುತ್ತೇನೆ. ಟೈಪರೈಟರ್ ವಿಷಯದಲ್ಲಿ ಕೂಡ ಸರ್ಕಾರದವರು ದೊಡ್ಡ ಅನ್ಯಾಯವನ್ನು ಶ್ರೀ ಅನಂತಸುಬ್ಬರಾಯರಿಗೆ ಮಾಡಿದ್ದಲ್ಲದೆ ಕನ್ನಡಕ್ಕೂ ದೊಡ್ಡ ಅಪಚಾರವನ್ನು ಎಸಗಿದ್ದಾರೆ. ಇನ್ನು ಶಾಲಾ ಕಾಲೇಜುಗಳಲ್ಲಿ ನೋಡಿದರೆ ನಮಗೆ ದಿಗ್ಭ್ರಾಂತಿಯಾಗುತ್ತಿದೆ. ಬೆಂಗಳೂರಿನಂತಹ ನಗರದಲ್ಲಿ ಆಕ್ಸಫರ್ಡ್ ಪ್ರಾಥಮಿಕ ಶಾಲೆಗಳು ಎನ್ನುವ ಬೋರ್ಡುಗಳು ಬರುತ್ತಿವೆ. ಪ್ರಾಥಮಿಕ ವಿದ್ಯಾಭ್ಯಾಸ ಕಡ್ಡಾಯವಾಗಿ ಉಚಿತವಾಗಿರಬೇಕು, ತಮ್ಮ ಮಕ್ಕಳ ಮಾತೃ ಭಾಷೆಯಲ್ಲಿಯೇ ಅದು ನಡೆಯಬೇಕು ಎಂದು ಎಲ್ಲಾ ವಿದ್ಯಾ ಪಂಡಿತರೂ ಒಪ್ಪಿರುವಾಗ ನಮ್ಮ ದೇಶದಲ್ಲಿ ಇಂಗ್ಲೀಷ್ ಶಾಲೆಗಳಿಗೆ ನಮ್ಮ ಹುಡುಗರನ್ನು ಕಳಿಸುತ್ತಿದ್ದೇವೆ. ಇದರಿಂದ ನಾವು ಯಾವ ದಿಕ್ಕಿನಲ್ಲಿ ಹೋಗುತ್ತಿದ್ದೇವೆ ಎನ್ನುವುದು ಅರ್ಥವಾಗುತ್ತಿಲ್ಲ. ಪ್ರಾಥಮಿಕ ಶಾಲೆಗಳು ಖಾಸಗಿಯಾಗಿ ನಡೆಯುತ್ತಿವೆ. ಅಲ್ಲಿ ಸಹಸ್ರಾರು ರೂಪಾಯಿ ಕೊಟ್ಟು ಮಕ್ಕಳನ್ನು ಓದಿಸುತ್ತಿದ್ದಾರೆ. ಈ ಒಂದು ಬೇರೆ ವರ್ಗ ಸೃಷ್ಟಿಯಾಗುತ್ತಿದೆ. ಇವತ್ತು ವಿದ್ಯಾಭ್ಯಾಸದ ಶಾಲೆಗಳನ್ನು ನಡೆಸುವ ಅನೇಕ ಕಡೆಗಳಲ್ಲಿ ವ್ಯಾಪಾರ ನಡೆಯುತ್ತಿದೆ. ನೂರು ರೂಪಾಯಿಗಳ ಸಂಬಳ ಕೊಡುತ್ತೇವೆಂದು ರುಜು ಹಾಕಿಸಿಕೊಂಡು 40 ರೂಪಾಯಿ ಮಾತ್ರ ಕೊಡತಕ್ಕ ಸಹಸ್ರಾರು ಖಾಸಗಿ ಸಂಸ್ಥೆಗಳನ್ನು ನಾವು ನೋಡುತ್ತಿದ್ದೇವೆ. ಆದುದರಿಂದ ಸರ್ಕಾರದವರು ತಮ್ಮ ಧೋರಣೆಮಾಡಬೇಕು. ಮಾನ್ಯ ಎಸ್. ಆರ್. ಕಂಠಿಯವರು ಯಾವುದಾದರೂ ಹೊಸ ವಿಷಯವನ್ನು ನಮ್ಮ ಮುಂದೆ ತರುತ್ತಾರೆ ಆದರೆ ಅದನ್ನು ದಕ್ಷತೆ ಮತ್ತು ಪ್ರಾಮಾಣಿಕತೆಯಿಂದ ಕಾರ್ಯಗತ ಮಾಡುವುದಿಲ್ಲ.

ನಮ್ಮ ರಾಜ್ಯದಲ್ಲಿ ಕನ್ನಡ ಮಾಧ್ಯಮವನ್ನು ಕಾಲೇಜುಗಳಲ್ಲಿ ಮತ್ತು ಇತರ ಕಡೆಗಳಲ್ಲಿ ಜಾರಿಗೆ ತರಬೇಕು ಎಂದು ಶ್ರೀ ಕೆ. ವಿ. ಪುಟ್ಟಪ್ಪನವರು ವೈಸ್ ಛಾನ್ಸಲರ್ ಆಗಿದ್ದಾಗ ಪ್ರಯತ್ನ ಮಾಡಿದರು. ಈಗ ಮೈಸೂರು ವಿಶ್ವವಿದ್ಯಾನಿಲಯದ ವೈಸ್‌ಛಾನ್ಸಲರ್ ಆಗಿರುವ ಶ್ರೀ ಶ್ರೀಮಾಲಿ ಅವರೂ ಕೂಡ ಶಿಕ್ಷಣ ಮಾಧ್ಯಮ ಮಾತೃ ಭಾಷೆಯೇ ಆಗಬೇಕು ಎನ್ನುವುದನ್ನು ತಾತ್ವಿಕವಾಗಿ ಒಪ್ಪಿದ್ದಾರೆ. ಯಾವ ಕಾರಣದಿಂದಲೋ ಏನೋ ಆ ದಿಸೆಯಲ್ಲ ಏನೂ ಪ್ರಗತಿಯಾಗದೇ ಇರತಕ್ಕ ಸನ್ನಿವೇಶವನ್ನು ನಾವು ಸೃಷ್ಟಿ ಮಾಡಿ ಕುಳಿತಿದ್ದೇವೆ. ಇದನ್ನು ಬಗೆಹರಿಸಬೇಕು. ಕನ್ನಡವನ್ನು ಸಾಧ್ಯವಾದಮಟ್ಟಿಗೂ ಎಲ್ಲಕಡೆಗೂ ನಿತ್ಯ ವ್ಯವಹಾರದಲ್ಲಿ ಬಳಸಬೇಕು ಎಂದು ತಮ್ಮಲ್ಲಿ ಕಳಕಳಿಯಿಂದ ಒತ್ತಾಯ ಪೂರ್ವಕವಾಗಿ ಹೇಳಬಯಸುತ್ತೇನೆಯ.

ರಾಜ್ಯಪಾಲರ ಭಾಷಣದಲ್ಲಿ ಮುಖ್ಯವಾಗಿ ನಿರೂಪಣೆಯಾಗಬೇಕಾಗಿರತಕ್ಕ ದೊರಣೆಗಳ ಬಗ್ಗೆ ಯಾವ ಮಾತೂ ಇಲ್ಲದೇ ಇರುವುದು ಬಹಳ ವಿಷಾದಕರ ಇವತ್ತು ಈ ಭಾಷಣಕ್ಕೆ ನಾನು ಅತ್ಯಂತ ವಿಷಾದದಿಂದ ನನ್ನ ವಿರೋಧವನ್ನು ವ್ಯಕ್ತಪಡಿಸುತ್ತಾ ಸರ್ಕಾರದವರು ಇವತ್ತು ಏನು ಜವಾಬ್ದಾರಿಯನ್ನು ಹೊತ್ತಿದ್ದಾರೆ ಅದನ್ನು ನಿರ್ವಹಿಸುವುದಕ್ಕೆ ತಮ್ಮ ನೀತಿಗಳನ್ನು ತಿದ್ದಿಕೊಳ್ಳಬೇಕು. ಇಲ್ಲದೇ ಹೋದರೆ ದೇಶದಲ್ಲಿ 1966 ನೇ ಇಸವಿಯಲ್ಲಿ ಉಂಟಾಗತಕ್ಕ ಕ್ಷೋಭೆಯನ್ನು ಇವರು ಎದುರಿಸುವುದಕ್ಕೆ ಸಮರ್ಥರಾಗುವುದಿಲ್ಲ ಎಂದು ಹೇಳಿ ನನ್ನ ಮಾತನ್ನು ಮುಗಿಸುತ್ತೇನೆ ಸ್ವಾಮಿ.

(ದಿನಾಂಕ 1 ಫೆಬ್ರವರಿ , 1966)



## ಮಂತ್ರಿ ಮಂಡಲದ ವಿರುದ್ಧ ಅವಿಶ್ವಾಸ ನಿರ್ಣಯ ಕುರಿತು (1966)

ಶ್ರೀ. ಎಸ್. ಗೋಪಾಲಗೌಡ- ಸತ್ಯಕ್ಕೆ ದೂರವಾದ ಮಾತು ಅಂದರೆ, ಆದು ಬೇರೆ, ಫಾರ್ ಪ್ರಮ್ ಟ್ರೂತ್ ಎನ್ನುವುದರಲ್ಲಿ ಸುಳ್ಳು ಎನ್ನುವುದೇ ಒಂದು ಶಬ್ದ. ಅದು ಇವರಿಗೆ ಸರಿಹೊಂದುತ್ತದೆ. ಇವರ ಬಗ್ಗೆ ಬೇರೆ ಇನ್ನೊಂದು ಶಬ್ದವೇನೂ ಹೇಳುವುದಕ್ಕಾಗುವುದಿಲ್ಲ.

ಇನ್ನೂ ನೀರಾವರಿಯಲ್ಲಿ ಎಂತಹ ಒಂದು ದಾರುಣವಾದ ದೃಶ್ಯವನ್ನು ಸೃಷ್ಟಿಸಿದ್ದಾರೆ ಎಂಬುದು ಗೊತ್ತಾಗುತ್ತದೆ. ಈ ದೇಶದಲ್ಲಿ ಇಪ್ಪತ್ತು ವರ್ಷಗಳಲ್ಲಿ ಇವರ ಒಂದು ವಿವೇಕರಹಿತವಾದ ದುರಾಡಳಿತವನ್ನು ನೋಡಿದರೆ ಎಂತಹ ಭಾರತೀಯನ ಸಹೃದಯವನ್ನೂ ಕಲಕಿಸುವುದಾಗಿದೆ. ಇನ್ನೂ ಹೆಚ್ಚು ದುರಾಡಳಿತವನ್ನು ನೋಡಿದರೆ ಎಂತಹ ಭಾರತೀಯನ ಹೃದಯವನ್ನೂ ಕಲಕಿಸುವುದಾಗಿದೆ. ಇನ್ನು ಹೆಚ್ಚು ಹೇಳುತ್ತಾ ಹೋದರೆ ನನ್ನನ್ನು ಶ್ರೀ ರಾಮಕೃಷ್ಣ ಹೆಗಡೆಯವರು ಪುಸ್ತಕದಲ್ಲಿರತಕ್ಕ ಕಥೆಗಳನ್ನು ಹೇಳಲು ಶುರು ಮಾಡುತ್ತಾರೆಂದು ಹೇಳುತ್ತಾರೆ. ಇದು ವಿಶ್ವೇಶ್ವರಯ್ಯನವರು ಹುಟ್ಟಿದ ದೇಶ. ತಮ್ಮ ಕಾಲದಲ್ಲಿ ಅವರು ಲೆಜಂಡರಿ ಫಿಗರ್ ಆಗಿದ್ದರು. ವಿಶ್ವೇಶ್ವರಯ್ಯನವರ ಬುದ್ಧಿ, ಪ್ರಾಮಾಣಿಕತೆ, ಸರಳತೆ, ಸೌಮ್ಯ- ಇಂತಹ ಕೆಲವು ಮಾನವೀಯ ಗುಣಗಳಿಗೆ ಸಾಂಕೇತಿಕವಾಗಿ 100 ವರ್ಷಗಳು ಬದುಕಿದರು. ಅದು ನಮ್ಮ ಪುಣ್ಯವೋ ಅಥವಾ ಅವರ ದೌರ್ಭಾಗ್ಯವೋ ಗೊತ್ತಿಲ್ಲ. ಆಗಿನ ಕಾಲದಲ್ಲಿ ಜನ ಲ್ಯಾಂಟರ್ನ್ ಇಟ್ಟುಕೊಂಡಿದ್ದರು; ಲ್ಯಾಂಟರ್ನ್ ಇಟ್ಟುಕೊಂಡು ಚಿಮಿಣಿ ಹಚ್ಚುತ್ತಿದ್ದರು. ಸರ್. ಎಂ. ವಿಶ್ವೇಶ್ವರಯ್ಯನವರು ಬಂದ ಮೇಲಿಯೇ ಈ ರಾಜ್ಯದಲ್ಲಿ ವಿದ್ಯುಚ್ಛಕ್ತಿ ಬಂದುದು. ಅವರು ಪುಸ್ಕಕಗಳನ್ನು ಓದುವುದಕ್ಕೆ ಒಂದು ಲ್ಯಾಂಟರ್ನ್, ಆಫೀಸು ಕೆಲಸಮಾಡುವುದಕ್ಕೆ ಇನ್ನೊಂದು ಲ್ಯಾಂಟರ್ನ್ ಇಟ್ಟುಕೊಳ್ಳುತ್ತಿದ್ದರು. ಇನ್ನೂ ಅವರ ಅದ್ಭುತವಾದ ಕೆಲಸಗಳನ್ನೆಲ್ಲಾ ಹೇಳಿದರೆ ಅಂಥಾದ್ದನ್ನೆಲ್ಲಾ ಕೇಳಿದರೆ ಮಂತ್ರಿಗಳಿಗೆ ಆಶ್ಚರ್ಯವಾಗಿ ಕಾಣುತ್ತದೆ. ಇದೇನೂ ಕಥೆಯಲ್ಲ. ಇದು ಅವರು ಪ್ರಾಮಾಣಿಕವಾಗಿ ಬದುಕಿನ ಜೀವನದ ಕೃತಿ. ಅದನ್ನು ಇವರೂ ಸಹ ಮಾಡಿದರೆ ಒಳ್ಳೆಯದಲ್ಲವೇ?

Mr. Speaker Power was generated in 1902 long oefore Sir. M.V. become Dewan.

ಎಸ್. ಗೋಪಾಲಗೌಡ Thank You Sir. ಅಧ್ಯಕ್ಷರಾಗಿ ಇವರು ಒಂದೊಂದು ಸಾರಿ ನನಗೆ ಬಹಳ ಸಹಾಯ ಮಾಡುತ್ತಾರೆ. ನನಗೆ ಅದನ್ನು ನೋಡಿ ಬಹಳ ಆಶ್ಕರ್ಯವಾಗುತ್ತದೆ. ತಮ್ಮ ವಿಷಯ ನಾನು ಮಾತನಾಡುವುದಿಲ್ಲವೆಂದು ನಾನು ಭರವಸೆ ಕೊಡುತ್ತೇನೆ.

ಇವತ್ತಿನ ದಿವಸ ಸ್ಥಿತಿ ತಾವು ನೋಡಿರಬಹುದು. ವಿಶ್ವೇಶ್ವರಯ್ಯನವರದು ಆಯಿತು. ಅದೇ ನೋಡಿರಿ, 1966ನೇ ಇಸವಿಯಲ್ಲಿ ನಾವು ಇಂತಹ ಚಿತ್ರವನ್ನು

ವಿಧಾನ ಸಭೆ ನಡವಳಿಕೆ: ದಿನಾಂಕ 25.11.1966

ನೋಡುತ್ತಿದ್ದೇವೆ. ಮಹಾತ್ಮ ಗಾಂಧಿಯವರ ಹೆಸರಿನಲ್ಲಿ ಓಟು ಪಡೆದವವರು ತಾವು. ಅದನ್ನು ಯಾರೂ ಇಲ್ಲವೆನ್ನುವುದಿಲ್ಲ. ತಾವು ಉತ್ತಾರಧಿಕಾರಿಗಳಾಗಿ ಅವರ ಹಾಗೆ ಸತ್ಯಕ್ಕೆ, ಧಮಕ್ಕೆ, ಸರಳತೆಗೆ ಪ್ರಾಮಾಣಿಕತೆಗೆ ಬದ್ಧರಾಗಿರುವವರಲ್ಲ. ಅದು ನಿಮಗೆ ಎಷ್ಟರಮಟ್ಟಿಗೆ ಇದೆಯೇ ನನಗೆ ಗೊತ್ತಿಲ್ಲ. ನೀವು ಒಂದು ಅಂದರೆ ಮೂರು ಎಂದು ಹೇಳುತ್ತೇವೆ.

ಇನ್ನು ಲೋಕೋಪಯೋಗಿ ಸಚಿವರು ಇಲ್ಲಿ ಹಾಜರು ಇದ್ದಾರೆ. ಅವರು ಶರಾವತಿಯಲ್ಲಿ ಏನು ದುರ್ವ್ಯಯಯ ನಡೆಯಲಿಲ್ಲ. ಕೆಲಸವೆಲ್ಲ ಚೆನ್ನಾಗಿ ನಡೆದಿದೆ ಎಂದು ಹೇಳಿದರು. ಈ ರೀತಿ ಶ್ರೀ ಶ್ರೀನಿವಾಸ ನಾಯಕ ಅವರು, ಮತ್ತು ಅವರ ಹಿಂದೆ ಅದನ್ನು ಬೆಂಬಲಿಸಿ ಕೆಲವರು ಮಾತನಾಡಿದರು. ನಾನು ಹೇಳುವುದಿಷ್ಟೆ ಅಲ್ಲಿ ದುರ್ವ್ಯಯ ನಡೆದಿದೆ. ಇನ್ನು 20 ವರ್ಷಗಳ ಮೇಲೆ ಅದರ ಬಗ್ಗೆ ವಿಚಾರಣೆಯಾದರೂ ಆಗ ಅಲ್ಲಿ ಯಾವ ರೀತಿಯಲ್ಲಿ ದುರ್ವ್ಯಯ ನಡೆದಿದೆ ಎಂಬುದು ಗೊತ್ತಾಗುತ್ತದೆ. ಈಗಿನ ಟೆಂಡರು ಬಗ್ಗೆ ಇವರದು ಏನು ಮೌನ. ಈ ಸಂಧರ್ಭದಲ್ಲಿ ಕೆಲವು ಪ್ರಶ್ನೆಗಳನ್ನು ನಾನು ಕಳುಹಿಸಿದ್ದೆ. ನನ್ನ ಸ್ನೇಹಿತರೂ ಸಹ ಕಳುಹಿಸಿದ್ದಾರೆ. ಇನ್ನೂ ಅವು ಬೆಳಕು ಕಾಣಲಿಲ್ಲ ಹೋಗಲಿ. ಕಂಟ್ರಾಕ್ಟುದಾರರಿಗೆ ಮತ್ತು ಲೋಕೋಪಯೋಗಿ ಜಾತೆ ಸಚಿವರಿಗೆ ಯಾವ ರೀತಿ ಸಂಬಂಧವಿರಬೇಕು? ಈ ದೇಶದಲ್ಲಿ ಏನಾದರೂ ಒಂದು ಒಳ್ಳೆಯ ಕಂಟ್ರಾಕ್ಟು ಇದೆಯ್? ಅವರ ತಮ್ಮನಾಗರಲೀ ಅಥವಾ ಯಾರೇ ಇರಲಿ, ಶ್ರಿಮಾನ್ ನಿಜಲಿಂಗಪ್ಪನವರ ಮನೆಯವರೇನೋ ಒಂದು ಕಂಪನಿ ಮಾಡಿಕೊಂಡಿದ್ದಾರೆ. ಆದರೆ ಅವರ ಮನೆಯವರು ಯಾರೂ ಅದರೊಳಗೆ ಸೇರಿರಲಾರರು. ಬೇರೆಯವರು ಅವರ ಸಂಬಂಧಿಕರೊಡನೆ ಸೇರಿದ್ದಾರೆ. ಇದರಲ್ಲಿ ಕಂಟ್ರಾಕ್ಟುದಾರರಿಗೆ ಸರ್ಕಾರದ ಸಂಬಂಧ ಯಾವ ರೀತಿ ಇರಬೇಕೆಂಬುದು ಮುಖ್ಯ. ಆದಕ್ಕೊಂದು ವಿಚಾರಣಾ ಸಮಿತಿಯನ್ನು ನೇಮಕ ಮಾಡಿ ವಿಚಾರಣೆ ಮಾಡಲಿ. ನಾನು ಆ ಬಗ್ಗೆ ಹೆಚ್ಚು ವಿವರಣೆಗೆ ಹೋಗುವುದಿಲ್ಲ. ಕಂಟ್ರಾಕ್ಟದಾರರಿಗೆ ಮಂತ್ರಿಗಳಿಗೆ, ಸೆಕ್ರಟೇರಿಯಟ್ ಅಧಿಕಾರಿಗಳಿಗೆ ಎಷ್ಟು ಸಂಬಂಧವಿರಬೇಕೋ ಅದು ಈಗ ಸರಿಯಾದ ರೀತಿ ಇದೆಯೇ ಅದನ್ನು ಮಾತ್ರ ಹೇಳಿದರೆ ಸಾಕು. ನಾನು ಈಗ ಹೆಸರುಗಳನ್ನು ಹೇಳುವುದಿಲ್ಲ. ನಾನು ನಾಲ್ಕಾರು ಕಂಟ್ರಾಕ್ಟದಾರರ ಹೆಸರುಗಳನ್ನು ಹೇಳಬಲ್ಲೆ, ಈಗ ಬೇಡ.

ಮತ್ತೊಂದು ವಿಷಯ. ನಮ್ಮ ಯೋಜನೆಗಳು ಯಾವ ರೀತಿ ನಡೆಯುತ್ತವೆ ಎನ್ನುವುದಕ್ಕೆ ಪಬ್ಲಿಕ್ ಅಂಕೌಂಟ್ಸ್ ಕಮಿಟಿಯವರು ಹೇಳಿದ್ದಾರೆ. ಕಪಿಸಿ ರಿಜರ್‌ವಾಯರ್ ಪ್ರಾಜೆಕ್ಟ್ ಒಂದು ವಿಷಯವನ್ನು ಮಾತ್ರ ಇಲ್ಲಿ ಹೇಳುತ್ತೇನೆ. 10 ವರ್ಷಗಳ ಪ್ರಗತಿಯನ್ನು ಸರ್ಕಾರದವರು ಹೇಳುತ್ತಾರೆ. ಏನೇನೋ ಪುಸ್ತಕಗಳನ್ನು ಬರೆದಿದ್ದಾರೆ. ಅವುಗಳಲ್ಲಿ ಎಲ್ಲವೂ ಅರ್ಥವಾಗುತ್ತದೆ. ಹಿಂದೆ ಭದ್ರಾ ಪ್ರಾಜಕ್ಟ ಬಗ್ಗೆ ಸಂತಾನಂ ಅವರು ಒಂದು ಮಾತನ್ನು ಹೇಳಿದ್ದಾರೆ ಅದು ಈ ರೀತಿ ಇದೆ.



ಇದು ಒಂದು ಸಣ್ಣ ಕಾರಣ ಅಲ್ಲಿ ಹೆಚ್ಚು ಆಳ ತೋಡಬೇಕಾಗಿತ್ತು. ಅದರ ಕೆಪಾಸಿಟಿಯನ್ನು ಜಾಸ್ತಿ ಮಾಡಿದ್ದೇವೆ. ಅದಕ್ಕೋಸ್ಕರ ಕೆಲವು ಲಕ್ಷ ರೂಪಾಯಿಗಳು ಖರ್ಚಾಗಿವೆಯೆಂದು ಹೇಳಿದ್ದಾರೆ. ಈ ಒಂದು ಸಣ್ಣ ಉದಾಹರಣೆ ಒಂದು ಸಣ್ಣ ನೊಣವಿದ್ದ ಹಾಗೆ. ಈಗ ಇನ್ನೊಂದು ನನಗೆ ಸಿಗಲಿಲ್ಲ. ಇದನ್ನು ಮಾತ್ರ ಹೇಳುತ್ತಿದ್ದೇನೆ. ವಾಸ್ತವವಾಗಿ ಮೊದಲನೆಯ ಯೋಜನೆಯಲ್ಲಿ ಆರಂಭವಾದ ಕಾರ್ಯಗಳನ್ನೇ ಮಾಡದೆ, ಅವು ಪುನಃ ಎರಡನೇ ಯೋಜನೆಗೆ ಹೋಗಿವೆ. ಎರಡನೇ ಯೋಜನೆಯಲ್ಲಿ ಆರಂಭವಾದ ಕಾರ್ಯಗಳು ಮೋರನೆಯ ಯೋಜನೆಗೆ ಹೋಗಿವೆ. ಹಾಗೆಯೇ ಮೂರನೆಯ ಯೋಜನೆಯಲ್ಲಿ ಆರಂಭವಾದ ಕಾರ್ಯಗಳು ನಾಲ್ಕನೆಯ ಯೋಜನೆಗೆ ಹೋಗಿವೆ. ಅವನ್ನು ನಾಲ್ಕನೇಯ ಯೋಜನೆಯಲ್ಲಿ ಮಾಡುವಂತಹವರಾಗಿದ್ದಾರೆ. ಆದ್ದರಿಂದ ಏತಕ್ಕಾಗಿ ಇವರಿಗೆ ಸ್ಟಿಲ್ಲೋವರ್ ವರ್ಕ್ಸ್‌ಗೆ 250 ಕೋಟಿ ರೂಪಾಯಿಗಳು ಬೇಕಾಗಿವೆ? ಮಾಡಿದ್ದನ್ನೇ ಮಾಡುತ್ತಿದ್ದಾರೆ. ಒಂದು ಸಾರಿ ಸೇತುವೆ ಕಟ್ಟಿದರೆ ಫೈನಲ್ ಬಿಲ್ ಆಯಿತು. ಪುನಃ ಅದೇನಾದರೂ ಬಿದ್ದುಹೋಯಿತು. ಅಂದರೆ, ಮತ್ತೆ ಅದನ್ನು ಕಟ್ಟಬೇಕು, ಅದಕ್ಕೆ ಇನ್ನೊಂದು ಬಿಲ್ ಮಾಡಬೇಕು. ಹೀಗೆ ಇಂತಹ ಒಂದು ಲಕ್ಷ ದೃಷ್ಟಾಂತಗಳಿವೆ, ನಮ್ಮ ಊರಿನಲ್ಲಿಯೇ ಇಂತಹ ಉದಾಹರಣೆಗಳು ಬೇಕಾದಷ್ಟಿವೆ. ದೇಶದ ಹಣ ಸಾರ್ವಜನಿಕರು ಕೊಟ್ಟಹಣ. ನಮ್ಮದು ಬಹಳ ಗರೀಬರ ದೇಶ. ಬಹಳ ಕಷ್ಟದಿಂದ ಜನ ಸರ್ಕಾರಕ್ಕೆ ದುಡ್ಡು ಕಟ್ಟುತ್ತಾರೆ. ಇದರಿಂದ ವರ್ಷಕ್ಕೆ ಸುಮಾರು 100 ಕೋಟಿ ರೂಪಾಯಿಗಳಷ್ಟು ಸರ್ಕಾರಕ್ಕೆ ಬೊಕ್ಕಸಕ್ಕೆ ಜಮಾ ಆಗುತ್ತದೆ. ಈಗ ಆ ನೂರು ಕೋಟಿ ರೂಪಾಯಿಗಳನ್ನು ನಮ್ಮ ಸ್ನೇಹಿತರು ಇವರು ದುರ್ವ್ಯಯ ಮಾಡುತ್ತಿರುವುದನ್ನು ಯಾರಾದರೂ ನೋಡಿದರೆ ಎಂತಹ ಪ್ರಾಮಾಣಿಕನಾದ ಮನುಷ್ಯನಾದರೂ ಕೂಡ ತಲೆ ತಗ್ಗಿಸುತ್ತಾನೇ. ಶ್ರೀ ಶ್ರೀನಿವಾಸ್ ನಾಯಕ್ ಅವರು ಹೇಳಲಿ ಅಮೇರಿಕಾದವರು ನಮಗೆ ಗೋಧಿಯನ್ನು ಕೊಡುವುದನ್ನೂ ಮತ್ತು ಕೇರ್ ಸಂಸ್ಥೆಯವರು ಹಾಲಿನ ಪುಡಿ ಕೊಡುವುದನ್ನೂ ಏತಕ್ಕೆ ನಿಲ್ಲಿಸಿದರೆಂಬುದನ್ನು.

ಇನ್ನು ಶರಾವತಿ ಬಗ್ಗೆ ಅವರ ರಾಯಭಾರಿಯೇ ಹೇಳಿದ್ದಾರೆ.

ಶರಾವತಿ ಯೋಜನೆಯ ಕೆಲಸ ಆರಂಭವಾದಾಗ ಅಲ್ಲಿ ಕೆಲಸ ಮಾಡುವುದಕ್ಕೆ ಚಿಂದಿ ಬಟ್ಟೆಯಲ್ಲಿ ಬಂದಂಥ ಒಬ್ಬ ಮನುಷ್ಯ ಇವತ್ತಿನ ದಿವಸ ಲಕ್ಷಾಧೀತ್ವರನಾಗಿದ್ದಾನೆ. ಈ ವಿಷಯ ಒಂದು ವಾರ್ತಾಪತ್ರಿಕೆಯಲ್ಲಿ ಬಂದಿದೆ. ಇವರು ಹಣವನ್ನು ಖರ್ಚುಮಾಡತಕ್ಕ ಕ್ರಮ ಯಾವ ರೀತಿ ಇದೆಯೆಂಬುದನ್ನು ಪಬ್ಲಿಕ್ ಅಕೌಂಟ್ಸ್ ಕಮಿಟಿ ಮತ್ತು ಎಸ್ಟಿಮೇಟ್ಸ್ ಕಮಿಟಿಗಳ ವರದಿಯಲ್ಲಿ ಕೊಟ್ಟಿದೆ, ಪಬ್ಲಿಕ್ ಅಕೌಂಟ್ಸ್ ಕಮಿಟಿಯ ವರದಿಗಳನ್ನು ಈ ಸಭೆಯಲ್ಲಿ ಚರ್ಚೆ ಮಾಡುವುದಕ್ಕೆ ಎಷ್ಟು ಸಾರಿ ತಾವು ಅವಕಾಶವನ್ನು ಮಾಡಿಕೊಟ್ಟಿದ್ದೀರಿ ಎಂದು ಮಾನು ಮಾನ್ಯ ಅಧ್ಯಕ್ಷರನ್ನು ಕೇಳಬೇಕಾಗಿದೆ.

ಶ್ರೀ ಎಸ್. ಗೋಪಾಲಗೌಡ- ಇಂಥಾ ಸತ್ಸಂಪ್ರದಾಯಗಳು ನಮ್ಮಲ್ಲಿ ಇವೆ. ಆ ಸಮಿತಿಗಳ ವರದಿಗಳನ್ನು ತಯಾರು ಮಾಡಬೇಕು, ಅವುಗಳನ್ನು ಸುಮ್ಮನೆ ಒಂದು ಕಡೆ ಹಾಕಬೇಕು, ಈ ರೀತಿಯಾಗಿದೆ. ಈ ಸಭೆಯವರು ಆ ಸಮಿತಿಯವರು ಮಾಡಿದಂರಹ ವರದಿಗಳನ್ನು ಚರ್ಚೆ ಮಾಡಿದ್ದರೆ ವರದಿಯಲ್ಲಿ, ಇಲಾಖೆಗಳ ಆಡಳಿತದಲ್ಲಿರತಕ್ಕ ಲೋಪದೊಷಗಳನ್ನು ಮತ್ತು ಆಪಾದನೆಗಳನ್ನು ಯಾರ ಮೇಲೆ ಬರೆದಿದ್ದಾರೋ ಅವರು ಆ ಲೋಪದೋಷಗಳನ್ನು ಈಗಾಗಲೇ ತಿದ್ದಿಕೊಳ್ಳುವುದಕ್ಕೆ ಪ್ರಯತ್ನ ಪಟ್ಟಿದ್ದಾರೆಯೆ ಹೇಗೆ ಎಂಬುದನ್ನು ನಾವು ತಿಳಿದುಕೊಳ್ಳಬಹುದಾಗಿತ್ತು. ಸರ್ಕಾರದ ಮೇಲೆ ಅನೇಕ ಅಪಾದನೆಗಳನ್ನು ಸಾರ್ವಜನಿಕರು ಹೇಳುತ್ತಾರೆ, ಮತ್ತು ಬರವಣಿಗೆಯ ಮೂಲಕವೂ ತಿಳಿಸುತ್ತಾರೆ. ಹೀಗಿದ್ದರೂ ಕೂಡ ನಿಮ್ಮ ಕಿವಿಗಳು ಕೇಳಲಾರದಷ್ಟು ಕಿವುಡಾಗಿದ್ದರೆ ನಿಮ್ಮ ಕಣ್ಣುಗಳು ನೋಡಲಾರದಷ್ಟು ಕುರುಡಾಗಿದ್ದರೆ, ಇದಕ್ಕೆ ನಾವೇನು ಮಾಡುವುದಕ್ಕಾಗುತ್ತದೆ? ಮೊನ್ನೆ ಶ್ರೀಮಾನ್ ಕೃಷ್ಣಪ್ಪನವರು ಹೇಳಿದರು, ವಿರೋಧ ಪಕ್ಷದವರಿಗೆ ಶಂಖ ಕೊಟ್ಟಿದ್ದೇವೆ. ನಾವು ಚಕ್ರ ತೆಗೆದುಕೊಂಡಿದ್ದೇವೆ ಎಂದು. ಚಕ್ರ ಹಾಕಿ, ಹಾಕಿ ಎಷ್ಟು ದಿವಸ ಚಕ್ರ ಹಾಕುತ್ತೀರಿ ನೋಡೋಣ. ಮಲಗಿರತಕ್ಕ ಜನ ಎದ್ದರೆ ಕೃಷ್ಣಪ್ಪನವರನ್ನು ನುಂಗಿಬಿಡುತ್ತಾರೆ. ಆಗ ನೀವು ತೊಂದರೆಯನ್ನು ಅನುಭವಿಸಬೇಕಾಗುತ್ತದೆ. ಎಚ್ಚರಿಕೆ, ಈ 18 ವರ್ಷಗಳ ಕಾಂಗ್ರೆಸ್ಸಿನವರ ಆಡಳಿತದ ಅವಧಿಯಲ್ಲಿ ಒಂದು ಹೊತ್ತು ಊಟಕ್ಕೆ ಇಲ್ಲದ ಒಬ್ಬ ಕಾಂಗ್ರೆಸ್ಸಿನವ ಇಲ್ಲಿ ಬಂದು ಇವತ್ತು ಎಷ್ಟೊ ಸಂಪಾದನೆ ಮಾಡಿದ್ದಾನೆ. ಒಂದು ಸಣ್ಣ ಸೊಸೈಟಿಯಲ್ಲಿ ಗೊಬ್ಬರದ ವ್ಯಾಪಾರದಿಂದ ಹಿಡಿದು ಅನೇಕ ದೊಡ್ಡ ವ್ಯಾಪಾರಗಳನ್ನು ಮಾಡತಕ್ಕ ಲೈಸೆನ್ಸಗಳನ್ನು ಇವರು ಪಡೆದುಕೊಂಡು ಸಂಪಾದನೆ ಮಾಡಿದ್ದಾರೆ. ಇನ್ನೂ ಏನೇನೂ ವಿಚಾರಗಳಿವೆ. ಅವುಗಳನ್ನು ಹೇಳಿದರೆ ನಾಚಿಕೆಯಾಗುತ್ತದೆ. ಎಷ್ಟೊ ಸಲ ಎಷ್ಟೊ ಜನಗಳು ಕಾಂಗ್ರೆಸ್ಸಿನವರ ಹತ್ತಿರ ಬಂದು ಕೆಲಸ ಕೊಡಿಸಿ ಎಂದು ಕೇಳುತ್ತಾರೆ. ಸರ್ಕಾರದ ಆಡಳಿತದಲ್ಲಿರತಕ್ಕವರು ತಮಗೆ ತಮ್ಮವರಿಗೇ ಬೇಕಾದ ಕೆಲಸಗಳನ್ನು ಕೊಡಲು ತಮ್ಮ ಅಧಿಕಾರವನ್ನು ದುರುಪಯೋಗಪಡಿಸಿಕೊಳ್ಳುತ್ತಿದ್ದಾರೆ. ನಾವು ಎಷ್ಟು ಸಲ ಹೇಳಿದರೂ ಕೂಡ ಅದು ಅವರಿಗೆ ಮುಟ್ಟುವುದಿಲ್ಲ. ಯಾರೋ ಒಬ್ಬ ಕಾನ್‌ಸ್ಟೇಬಲ್ ಲಂಚವನ್ನು ತೆಗೆದುಕೊಳ್ಳಬಹುದು. ಆದರೆ ಮೇಲ್ಪಟ್ಟವರು. ಐಜಿಪಿಯವರು ಮಂತ್ರಿಗಳು ಆದರ್ಶವಾಗಿಬೇಕು. ಯಾರು ಲಂಚವನ್ನು ತೆಗೆದುಕೊಳ್ಳುತ್ತಾರೆಯೋ ಅವರನ್ನು ಹಿಡಿದು ಶಿಕ್ಷೆ ಮಾಡಬೇಕು ಯಾರು ಅಧಿಕಾರ ದುರುಪಯೋೀಗದಿಂದ ಆಸ್ತಿಪಾಸ್ತಿಗಳನ್ನು ಮಾಡಿಕೊಂಡು ತಪ್ಪಿತಸ್ಥರಾಗಿದ್ದಾರೆಯೇ ಅವರಿಗೆ ಶಿಕ್ಷೆಯಾಗಬೇಕು. ಮರಣ ದಂಡನೆಯೇ ಆಗಬೇಕು. ಆದರೆ ನಾನು ಮರಣ ದಂಡನೆಗೆ ವಿರೋಧ ಇದ್ದೇನೆ. ಆದ್ದರಿಂದ ಅವರಿಗೆ ಸಾಮಾನ್ಯ ಶಿಕ್ಷೆ ಆಗಬೇಕು. ತಪ್ಪಿತಸ್ಥರಾದವರು ಯಾರೇ ಆಗಿರಲಿ ಅವರಿಗೆ ಶಿಕ್ಷೆಯನ್ನು ವಿಧಿಸಲೇಬೇಕು. ಅದು ಆಗದೇ ಹೋದರೆ ಏನೂ ಪ್ರಯೋಜನವಿಲ್ಲ. ದೇಶದಲ್ಲಿ ಸರ್. ಎಂ. ವಿಶ್ವೇಶ್ವರಯ್ಯನವರು, ಬಸವಣ್ಣನವರು ಮುಂತಾದ ದೊಡ್ಡ ದೊಡ್ಡವರ ಹೆಸರನ್ನು ಹೇಳುತ್ತಿರೀ ಆದರೆ ನೈತಿಕವಾಗಿ ನಿಮಗೆ ಯಾವ ಅಧಿಕಾರವೂ ಇಲ್ಲ. ಸ್ವಾಮಿ, ಈಚೆಗೆ ನಾನು ಗುಲ್ಬರ್ಗಾ ಜಿಲ್ಲೆಗೆ ಹೋಗಿದೆದ. ಅಲ್ಲಿ ಒಂದು ದೊಡ್ಡ ವ್ಯವಹಾರ ನಡೆದಿದೆ. ಅಲ್ಲಿ ಷಹಾಬಾದಿನಲ್ಲಿ ಲೈಮ್‌ಸ್ಟೋನ್ ಬಹಳ ಇದೆ. ಸೇಡಂ ತಾಲ್ಲೂಕಿನಲ್ಲಿ



ಒಂದು ಸಿಮೆಂಟ್ ಫ್ಯಾಕ್ಟರಿ ಹಾಕುವ ಪ್ರಯತ್ನ ನಡೆದಿದೆ. ಅಲ್ಲಿ ಮನಾಪಲಿ ಕಂಪನಿಗಳಿವೆ. ಆ ಮನಾಪಲಿ 5 ಮೈಲಿ ಸುತ್ತಳತೆ ಕೊಟ್ಟಿದ್ದಾರೆ. ಅಧರ ಸುತ್ತಮುತ್ತ ಬೇರೆಯವರ ಜಮೀಮಿ ಕ್ವಾರಿ ಇದ್ದರೂ ಅದನ್ನು ಅವರು ಮಾಡುವ ಹಾಗಿಲ್ಲ. ಅದನ್ನು ಆ ಕಂಪನಿಯವರೇ ಮಾಡಬೇಕು. ಬೇರೆಯವರ ಸಂಪತ್ತನ್ನು ಕಂಪನಿಗಳವರು ಸಂಗ್ರಹಿಸುತ್ತಿದ್ದಾರೆ. ಅಲ್ಲಿ ಈ ರೀತಿ ಇದೆ.

ಇನ್ನೊಂದು ವಿಷಯವನ್ನು ನಾನು ಈ ಸಭೆಯ ಗಮನಕ್ಕೆ ತರಬಯಸುತ್ತೇನೆ. ಮಾನ್ಯ ಕೈಗಾರಿಕಾ ಮಂತ್ರಿಗಳು ಇವೊತ್ತು ಈ ಸಭೆಯಲ್ಲಿ ಇಲ್ಲ. ದುರಾದೃಷ್ಟವಶಾತ್ ಅವರು ದಿವಂಗತರಾಗಿದ್ದಾರೆ. ಅವರು 31 ನೇ ಜನವರಿ 66 ರಲ್ಲಿ ಈ ಸಭೆಯಲ್ಲಿ ಶ್ರಿ ಮಾನ್ ಜೆ. ಪಿ. ಸರ್ವೇಶ್ ಅವರ ಪ್ರಶ್ನೆಗೆ ಉತ್ತರ ಕೊಡುತ್ತಾ ಅಡ್ವೋಕೇಟ್ ಜನರಲ್ ಅವರು ಹೈಕೋರ್ಟಿನಲ್ಲಿ ಅಫಿಡವಿಟ್ ಹಾಕಿದ್ದಾರೆ. ಏನಾದರೂ ನಾವು ಅದಕ್ಕೆ ಅವಕಾಶವನ್ನು ಕೊಡುವುದಿಲ್ಲವೆಂದು ಹೇಳಿದ್ದಾರೆ. ಇಂಥಾದ್ದು ಒಂದು ಆಗಿದೆ. ಕಂಪನಿಗಳು ದೇಶವನ್ನು ಲೂಟಿ ಹೊಡೆಯುತ್ತಿವೆ. ಸಿಮೆಂಟ್ ಫ್ಯಾಕ್ಟರಿಗಳವರು ದೇಶವನ್ನು ಲೂಟಿ ಹೊಡೆಯುತ್ತಾರೆ. ಅಂಥವರನ್ನು ಮಾತ್ರ ಸರ್ಕಾರದವರು ಹಿಡಿಯುವುದಿಲ್ಲ. ತಮಗೆ ಬೇಕಾದಾಗ ಅವರಿಂದ ಕಾಂಗ್ರೆಸ್ ಫಂಡಿಗೆ ಹಣ ಮಾತ್ರ ತೆಗೆದುಕೊಳ್ಳುತ್ತಾರೆ. ಲೈಸನ್ಸ್ ಪರ್ಮಿಟ್ ರಾಜ್ಯ ಎಂದು ರಾಜಾಜಿಯವರು ಹೇಳುತ್ತಿರುವುದು ನಮಗೆಲ್ಲಾ ಗೊತ್ತಿದೆ. ಇದು ಲೈಸನ್ಸ ಮತ್ತು ದುರುಪಯೋಗಕ್ಕೆ ಸಂಬಂಧಪಟ್ಟ ವಿಷಯ ಒಂದಕ್ಕೊಂದು ಲೈಸನ್ಸ ಮತ್ತು ದುರುಪಯೋಗಕ್ಕೆ ಸಂಬಂಧಪಟ್ಟ್ ವಿಷಯ. ಒಂದಕ್ಕೊಂದು ಲೈಸೆನ್ಸನಿಂದ ಯಾರಿಗೆ ಎಷ್ಟೆಷ್ಟು ಹೋಗುತ್ತದೆ, ಸಂಬಂಧಪಟ್ಟವರಿಗೆ ಎಷ್ಟೆಷ್ಟು ವಿಲೇವಾರಿ ಆಗುತ್ತಿದೆ ಎನ್ನುವುದು ಗೊತ್ತು. ಏತಕ್ಕೆ ನಿಮಗೆ ಅಧಿಕಾರದಲ್ಲಿ ಆಸಕ್ತಿ ಇದೆಯೆಂಬುದು ಇದರಿಂದಲೇ ಗೊತ್ತಾಗುತ್ತದೆ. ನೀವು ಸರ್ಕಾರದ ಆಡಳಿತವನ್ನು ನಡೆಸತಕ್ಕದ್ದರಲ್ಲಿ ಒಂದು ಕ್ರಮವಿದೆಯೇ? ನಾನು ಹೇಳಬೇಕು ಎಂದರೆ, ನನ್ನ ಕಡತದಲ್ಲಿ ನೂರಾರು ಇವೆ. ಶ್ರೀ ಮಾನ್ ಬಸಪ್ಪನವರು ಮತ್ತು ಶ್ರೀಮಾನ್ ಶ್ರೀನಿವಾಸ ನಾಯಕರು ಇವರುಗಳಿಗೆ ನಾನು ಹೇಳುತ್ತೇನೆ. ಏನೋ ಒಂದು ಅವಿಶ್ವಾಸ ನಿರ್ಣಯವನ್ನು ಮಂಡಿಸುವುದಕ್ಕೆ ಒಂದು ಅವಕಾಶ ರೂಲ್ಸ ಆಫ್ ಪ್ರೊಸೀಜರ್‌ನಲ್ಲಿದೆ, ಅದನ್ನು ಉಪಯೋದಿಸಿಕೊಂಡು ಅವರು ಇದನ್ನು ಹೇಳಿ ಹೊರಟು ಹೋಗುತ್ತಾರೆ ಎಂದು ಇವರು ಯಾರೂ ಭಾವಿಸುವುದು ಬೇಡ. ನಾನು ವೈಯಕ್ತಿಕವಾಗಿ ಆ ಭಾವನೆಯಿಂದ ಹಗುರವಾಗಿ ಆ ಮಾತನ್ನು ಆಡುತ್ತಿಲ್ಲ. ಈ ಅಧಿವೇಶನ ಮುಗಿದರೂ ಮುಂದೆ ಅಧಿವೇಶನಗಳು ಬರುತ್ತವೆ. ಈ ಚುನಾವಣೆ ಮುಗಿದರೂ ಮುಂದೆ ಚುನಾವಣೆಗಳು ಬರುತ್ತವೆ. ಚುನಾವಣೆಗಳು ಬಾರದೇ ಹೋದರೂ ಜನ ಇರುತ್ತಾರೆ. ಜನತೆಯ ಬಾಯನ್ನು ಮುಚ್ಚಿಸುವುದಕ್ಕಾಗುವುದಿಲ್ಲ. ಅವಕಾಶವನ್ನು ಮುಚ್ಚುವುದಕ್ಕಾಗುವುದಿಲ್ಲ. ದೇಶ ದೊಡ್ಡದ್ದು ಅದು ಶಾಶ್ವತ ನಾವೂ ನೀವೂ ಹೋಗುತ್ತೇವೆ. ಆದರೆ ಇರುವಷ್ಟು ದಿವಸ ಪ್ರಾಮಾಣಿಕವಾಗಿ ಬದುಕಬೇಕು. ಕಾಂಗ್ರೆಸ್ ಸಂಸ್ಥೆ ಈ ದೇಶದಲ್ಲಿ ತ್ಯಾಗ ಮಾಡಿದಂತಹ ಒಂದು ಉತ್ತರ ಸಂಸ್ಥೆ ಮತ್ತು ಬಹಳ ಮಹತ್ವವುಳ್ಳಂತಹ ಪುಣ್ಯ ಸಂಸ್ಥೆ. ಇಂತಹ ಪುಣ್ಯವಾದಂತಹ

ಸಂಸ್ಥೆಯನ್ನು ಇಪ್ಪತ್ತು ವರ್ಷಗಳಳೊಳಗೆ ಸಮಾವಶೇಷವಾಗಿ ಹೋಗುವಂತೆ ಮಾಡಿದಿರಿ. ಕಾಂಗ್ರೆಸ್ ಎನ್ನುರ ಪದಕ್ಕೆ ಮೋಸ ಎನ್ನುವ ಅರ್ಥಬರುವಂತೆ ಮಾಡಿದ್ದೀರಿ. ಇದರಿಂದ ಎಷ್ಟು ಮಟ್ಟಿಗೆ ಇಂತಹ ತ್ಯಾಗ ಮಾಡಿದಂತಹ ಸಂಸ್ಥೆಗೆ ಗೌರವಬಂತು ಎನ್ನುವುದನ್ನು ತಾವೇ ಯೋಜನೆ ಮಾಡಬೇಕು. ಇಂತಹ ಉತ್ತಮವಾದ ಸಂಸ್ಥೆಯ ಭವಿಷ್ಯ ಯಾವ ತರಹ ಆಗುತ್ತದೋ ಎಂದು ಇದರ ನಾವು ಪಶ್ಚಾತ್ತಾಪಪಡಬೇಕಾಗಿ ಬಂದಿದೆ. ದೇಶದಲ್ಲಿ ಇಂದು ನಿರಾಸೆಯ ವಾತಾವರಣ ಎಲ್ಲೆಲ್ಲೂ ಎದ್ದು ಕಾಣುತ್ತಿದೆ. ಯಾರೂ ಬೇಕಾದರೂ ನೋಡಲಿ, ಇವೊತ್ತಿನ ನಮ್ಮ ನೌಕರರ ಪರಿಸ್ಥಿತಿ ಹೇಗಿದೆ ? ಎಲ್. ಸಿ. ನೌಕರರ ಪರಿಸ್ಥಿತಿ ಏನಿದೆ? ಅಥವಾ ಬೇರೆ ಮಿನರ್ವಾ ಮಿಲ್ಲುಗಳ ನೌಕರರ ಪರಿಸ್ಥಿತಿ ಏನು? ಎಷ್ಟು ಜನ ನೌಕರರು ಅಶಾಂತಿಯಿಂದ ಜೀವನ ನಡೆಸುವುದೇ ಕಷ್ಟ ಎಂದು ಹೇಳುತಿದ್ದಾರೆ. ಅದನ್ನೂ ನೊಡಿ ಇದರಿಂದ ಯಾರೂ ಸುಖಿಯಾಗಿದ್ದಾರೆ ಎನ್ನುವುದನ್ನು ತಾವು ನೋಡಬಹುದು. ಇವತ್ತಿ ದೇಶದಲ್ಲಿರುವ ಸುಮಾರು 600 ಮಿಲ್ಲುಗಳಿಗೆ ಹತ್ತಿ ಸಿಗಲಿಲ್ಲ ಎಂದು ಹತ್ತಿ ಮಿಲ್ಲುಗಳ ಫೆಡರೇಷನ್ನಿನವರು ಹದಿನಾರೂ ದಿನ ಮಿಲ್ಲುಗಳ ಕೆಲಸವನ್ನು ಮುಚ್ಚಬೇಕೆಂದು ಮಾಡುತ್ತಿದ್ದಾರೆ. ಇದರಿಂದ ಎಷ್ಟು ಜನ ಕಾರ್ಮಿಕರ ಸ್ಥಿತಿ ಕಷ್ಟಕ್ಕೆ ಸಿಗುತ್ತದೆ ಎನ್ನುವುದನ್ನು ಯೋಚನೆ ಮಾಡಿದ್ದಾರೆಯೇ ಇನ್ನು ನಿಮ್ಮ ಯೋಜನೆಯ ಚಿತ್ರವನ್ನು ಇಲ್ಲಿ ನಾವು ನೋಡಬೇಕಾಗಿದೆ. ಯಾರಾದರೂ ಇವೊತ್ತು ಹತ್ತು ಷರಟುಗಳು ಹಾಗೂ ಹತ್ತು ಜೊತೆ ಪಂಚೆ ಇಟ್ಟುಕೊಂಡು ಐಶಾರಾಮ ಮಾಡುವಂತಹ ಜೀವನ ನಡೆಸುತ್ತಿಲ್ಲ. ಇವೊತ್ತು 16 ಗಜ ಬಟ್ಟೆ ಇಟ್ಟುಕೊಂಡಿರುವವರು 18 ಗಜ ಮಾಡಿಕೊಳ್ಳಲು ಆಗುವುದಿಲ್ಲ. ಏಕೆಂದರೆ ಸಾಮಾನ್ಯವಾಗಿ ಇವೊತ್ತಿನ ಪೇಟೆಯಲ್ಲಿ ನೋಡಿದರೆ, ಯಾವ ಬಟ್ಟೆಯೂ ಕೂಡ ಮಿಟರಿಗೆ ಎರಡು ರೂಪಾಯಿಗಳಿಗಿಂತ ಕಡಿಮೆ ಇಲ್ಲ. ಜಾಸ್ತಿಯಾಗಿಯೇ ಬೆಲೆ ಇರುತ್ತದೆ. ಇವೊತ್ತು ಯಾರೂ ಐಷರಾಂನಂತೆ ಕಾರುಗಳಲ್ಲಿ ಓಡಾಡುತ್ತಿಲ್ಲ. ಅದರಲ್ಲೂ ನಮ್ಮ ಮಾನ್ಯ ಸದಸ್ಯರಾದ ಶ್ರೀಮಾನ್ ಅಲ್ಲಂ ಕರಿಬಸಪ್ಪನವರು ಇಟ್ಟುಕೊಂಡಿರುವಂತಹ ಕಾರುಗಳಲ್ಲಿ ಯಾರೂ ಓಡಾಡುತ್ತಿಲ್ಲ. ಇಂತಹ ಒಂದು ಕಾರನ್ನು ನಮ್ಮ ಮಾನ್ಯ ಮುಖ್ಯಮಂತ್ರಿಗಳೂ ಇಟ್ಟುಕೊಂಡಿದ್ದಾರೆ. ಒಂದು ಸಾರಿ ನಡೆದುಕೊಂಡು ಒಂದು ರಸ್ತೆಯಲ್ಲಿ ಹೋಗುತ್ತಿದ್ದಾಗ ಶ್ರೀ ಅಲ್ಲಂ ಕರಿಬಸಪ್ಪನವರ ಕಾರು ಬಹಳ ಜೋರಾಗಿ ಬರುತ್ತಿತ್ತಿ. ಅದನ್ನು ನೋಡಿದ ಕೋಡಲೇ ನನಗೆ ಗಾಬರಿಯಾಯಿತು. ನಾನು ಎಲ್ಲಿ ಈ ಕಾರಿನ ಮಧ್ಯಕ್ಕೆ ಸಿಗ್ರಿಕೊಂಡು ಸತ್ತಿ ಹೋಗುತ್ತೇನೋ ಎನ್ನುವಂತೆ ಆಯಿತು. ಹೀಗೆ ಸುಖ ಜೀವನವನ್ನು ನಡೊಸುತ್ತಿರುವ ಶ್ರೀಮಂತ ವರ್ಗ ಒಂದು ಕಡೆ, ಬಡತನದಿಂದ ನರಳುತ್ತಿರುರ ವರ್ಗ ಒಂದು ಕಡೆ ಇದೆ. ಇದರಲ್ಲೂ ನಿಮ್ಮ ಪಕ್ಷಕ್ಕೆ ಸೇರುದವರು ಒಂದು ಅರರಿಗೆ ಎಷ್ಟು ಬಸ್ಸುಗಳ ಪರ್ಮಿಟ್ಟುಗಳನ್ನು ಎಷ್ಟು ಫುಡ್ ಪರ್ಮಿಟ್ಟುಗಳನ್ನು ಕೊಡುವುದು, ಸ್ಟೇನಲೀಸ್ ಸ್ಟೀಲ್ ಪರ್ಮಿಟ್‌ಗಳನ್ನು ಕೊಡುವುದೆಷ್ಟು? ಕಾರುಗಳಿಗಾಗಿ ಕೊಡುವ ಪರ್ಮಿಟ್ಟುಗಳೆಷ್ಟು? ಹೀಗೆ ಕೊಡುವಾಗ ನಿಮಗೇನಾದರೂ ಪೂರ್ವಾಪರ ವಿವೇಚನೆ ಇದೆಯೇ ಎಂದು ನಾನು ಇಲ್ಲಿ ಕೇಳುತ್ತೇನೆ.



ಒಬ್ಬರು ಮಾನ್ಯ ಸದಸ್ಯರು- ಯಾರಿಗೂ ಅಕ್ಕಿ ಕೊಡಬೇಡಿ ಎಂದು ಸಲಹೆ ಮಾಡುತ್ತೀರಾ ಅನ್ನಹಾಕಿ ಅವರೂ ಚೆನ್ನಾಗಿ ಊಟಮಾಡಲಿ ಅಕ್ಕಿ ಕೊಡುತ್ತೇವೆ. ಎಂದು ಹೇಳುತ್ತಾ ದೇಶದ ಗಂಟನ್ನು ಹೊಡೆಯುವುದಕ್ಕೆ ಹೋಗಬೇಡಿ. ಈಗ ನೀವು ಈ ರೀತಿ ಮಾಡುತ್ತಿದ್ದಿರಿ.

ನಮಗೆಲ್ಲರಿಗೂ ಗೊತ್ತಿರುವ ಹಾಗೆ ನಮ್ಮ ಮುಂದೆ ಪಬ್ಲಿಕ್ ಅಕೌಂಟ್ಸ್ ಸಮಿತಿಯವರು ವರದಿ ಬಂದಿದೆ. ಅದರಲ್ಲಿ ಅವರು ಏನು ಹೇಳಿದ್ದಾರೆಂದರೆ, ಲಕ್ಷ ರೂಪಾಯಿಗಲ ಗೊಬ್ಬರವನ್ನು ತರಿಸುವುದಕ್ಕೆ ಲೆಕ್ಕಪತ್ರಗಳೇ ಇಲ್ಲ. ಇದಕ್ಕಾಗಿ ಬೇರೆ ಒಂದು ಕಮಿಟಿಯನ್ನೇ ನೇಮಕ ಮಾಡಿ, ಅದರಲ್ಲಿ ಎಲ್ಲರೂ ಹೋಗಿ ವಿಚಾರಣೆ ಮಾಡಲಿ ಎಂದು ಹೇಳಿದ್ದಾರೆ. ಇನ್ನು ಟ್ರಾನ್ಸಪೋರ್ಟ್ ಶಾಖೆ ಬಗ್ಗೆ ಕೂಡ ಇದರಲ್ಲಿ ಸೇರಿದ್ದಾರೆ. ಹಿಂದೆ ಕೆಲಸದಲ್ಲಿದ್ದಂತಹ ಮಂತ್ರಿಗಳಾದ ಶ್ರೀ ಶಂಕರರವರೂ ಕೂಡ ಟ್ರಾನ್ಸಪೋರ್ಟ್ ಇಲಾಖೆಯಲ್ಲಾದ ಕಾರ್ಮಿಕರ ಗೊಂದಲಗಳಿಂದಾಗಿ ಮಂತ್ರಿ ಪದವಿಯನ್ನು ಕಳೆದುಕೊಳ್ಳಬೇಕಾಗಿ ಬಂತು. ಇಲ್ಲೂ ಕೂಡ ಇಂತಹದೇ ಅಪಾದನೆಗಳೇ ಬಂದಿವೆ. ಇದನ್ನು ಏನಾದರೂ ಅವರು ಗಮನಕ್ಕೆ ತೆಗೆದುಕೊಂಡಿದ್ದಾರೆಯೇ ಎಂದರೆ ಹಾಗೇನೋ ಕಾಣಿಸುತ್ತಿಲ್ಲ. ಇನ್ನು ನಮ್ಮ ಪಿ. ಡಬ್ಲ್ಯೂ. ಡಿ ಮಂತ್ರಿಗಳು ಹೈದರಾಬಾದಿನಿಂದ ಫಾರ್ಗೋಗಳನ್ನು ನಮ್ಮ ದೇಶಕ್ಕೆ ಬೇಕೆಂದು ತರಿಸಿಕೊಂಡರು. ಅವು ಮೊದಲು ಹೈದರಾಬಾದಿನಲ್ಲಿ ಕ್ರಯವಾಗಿ ಇಲ್ಲಿಗೆ ಬಂದಿವೆ ಎಂದು ಹೇಳುತ್ತೇನೆ. ಅದರ ಮೇಲೆ ನಮಗೆ ಬರಬೇಕಾದ ಸೇಲ್ಸ್ ಟ್ಯಾಕ್ಸ್ ಅವರಿಗೇ ಹೋಯಿತು. ಇದನ್ನೇಕೆ ಮಾಡಿದರೋ ಗೊತ್ತಾಗುವುದಿಲ್ಲ. ಇದರಿಂದಲಾದರೂ ಕಮಿಷನ್ ಪಡೆಯುವುದಕ್ಕಾಗಿ ಮಾಡಿದರೋ ಏನೋ ತಿಳಿಯದು ಆದುದರಿಂದ ಇಂತಹ ವಿಚಾರಗಳ ಬಗ್ಗೆ ಹೆಚ್ಚಾಗಿ ಹೇಳುವುದಕ್ಕೆ ಇಷ್ಟಪಡುವುದಿಲ್ಲ.

ಸ್ವಾಮಿ, ನಮ್ಮ ಮಾನ್ಯ ಮಂತ್ರಿಗಳಾದ ಶ್ರೀಮಾನ್ ಕೃಷ್ಣಪ್ಪನವರು ಇಲ್ಲಿ ಬರುತ್ತಾರೆಂದಿದೆ. ಆದರೆ ಅವರು ಇಲ್ಲಿ ಕಾಣುತ್ತಿಲ್ಲ.

ಕೆಲ ಸದಸ್ಯರು- ಮಾನ್ಯ ಮುಖ್ಯ ಮಂತ್ರಿಗಳು ಇಲ್ಲೇ ಇದ್ದಾರೆ.

ಶ್ರೀ .ಎಸ್. ಗೋಪಾಲ ಗೌಡ - ಹಾಗಿದ್ದರೆ ಕೃಷಿಯ ಬಗ್ಗೆ ಕೆಲವು ಮಾತುಗಳನ್ನು ಅವರಿಗೆ ಕೇಳಬೇಕಾಗಿದೆ. ಇವೊತ್ತು ಇಲ್ಲಿ ಮಂಗಳೂರಿನಿಂದ ಕೆಲವು ಕೃಷಿ ಮಾಡುರ ಜನ ಇಲ್ಲಿ ತಮ್ಮ ಕಷ್ಟಗಳನ್ನು ಹೇಳಬೇಕೆಂದು ಬಂದಿದ್ದಾರೆ. ಅವರಿಗೆ ಕಳೆದ ಹದಿನೈದು ವರ್ಷಗಳಿಂದಲೂ ಮೋಡಿ ಮಾಡಿಕೊಡುವುದಕ್ಕೆ ಆಗಲಿಲ್ಲ. ಮಾಡಬೇಕಾದ್ದನ್ನು ಮಾಡದೇ, ಮಾಡಬಾರದನ್ನೇ ಮಾಡುತ್ತಾ ಹೋಗುತ್ತಿದ್ದೀರಿ. ಹೀಗೆ ಹೋಗುವುದರಿಂದ ಈ ದೇಶದಲ್ಲಿ ಒಂದು ರೀತಿಯಾದ ನೈತಿಕ ಅದಃಪತನಕ್ಕೆ ದಾರಿ ಮಾಡಿಕೊಡುತ್ತಿದ್ದೀರಿ. ಇವೊತ್ತು

ಎಲ್ಲೆಲ್ಲೂ ಭ್ರಷ್ಟಾಚಾರಿಗಳೇ ತಾಂಡವಾಡುತ್ತಿವೆ. ಲಂಚ ಕೊಡದೇ ಯಾವ ಕೆಲಸವೂ ಆಗುವುದಿಲ್ಲ ಎನ್ನುವ ಭಾವನೆ ಜನರಲ್ಲಿ ಬೆಳೆದು ಬಂದಿದೆ. ದಿನೇ ದಿನೇ ನೈತಿಕ ಅಧಃಪತನವಾಗುತ್ತಿದೆ. ಜನರಲ್ಲಿ ವಿಶ್ವಾಸ ಭಂಗವಾಗುತ್ತಿದೆ. ಅದರಲ್ಲಿ ಉತ್ಸಾಹ ಕುಗ್ಗುತ್ತಿದೆ. ದೇಶವನ್ನೆಲ್ಲಾ ದಿವಾಳಿಯಾಗುತ್ತಿದೆ. ನಿಮ್ಮ ಅಮೆರಿಕಾದ ಅಧ್ಯಕ್ಷರಾದ ಜಾನ್‌ಸನ್‌ರವರು ಪಿ. ಎಲ್. 480 ರಂತೆ ಗೋಧಿ ಕೊಡುವುದನ್ನು ನಿಲ್ಲಿಸಿಬಿಟ್ಟಿದ್ದಾರೆ. ನಮ್ಮ ಮಾನ್ಯ ಆಹಾರ ಮಂತ್ರಿಗಳಾದ ಜತ್ತಿಯವರು ಎಲ್ಲಿಂದ ಅನ್ನ ತಂದು ಮುಂದೆ ಜನರಿಗೆ ಹಾಕುತ್ತಾರೇ ನೋಡಬೇಕಾಗಿದೆ. ನಾನು ೀ ಹಿಂದೆ ಒಂದು ಸಾರಿ ಮಾತನಾಡುವಾಗ ಹೇಳಿದ್ದೆ ಇದು ಪರಾಭವ ಸಂವತ್ಸರ ಎಂದು. ಹಾಗೂ ಮುಂದೆ ಬರುವ ಫೆಬ್ರವರಿ ತಿಂಗಳ ಹೊತ್ತಿಗೆ ದೊಡ್ಡ ಕ್ಷಾಮವನ್ನು ಎದುರಿಸಬೇಕಾಗಿ ಬರಬಹುದು. ಕಾಂಗ್ರೆಸ್ಸು ಪಕ್ಷದವರು ಮುಂದೆ ದೊಡ್ಡ ಬರಗಾಲವನ್ನು ಎದುರಿಸಬೇಕಾಗಿ ಬರಬಹುದು.

ತ್ಯಾಗದ ಕಾಲ ಮುಗಿದು ಇಪ್ಪತ್ತು ವರ್ಷಗಳ ಭೋಗದ ಕಾಲವನ್ನು ನಾವಿಂದು ನೋಡುತ್ತಿದ್ದೇವೆ. ಮಹಾತ್ಮ ಗಾಂಧಿಯವರ ಹೆಸರಿನಲ್ಲಿ ಹಿಟ್ಟಿಗೆ ಉಪ್ಪು ಹಾಕದೆ ಊಟಮಾಡುತ್ತಿದ್ದಂತಹವರು ಇವೊತ್ತು ಎಷ್ಟು ಮಾರ್ಪಾಡು ಆಗುತ್ತಿದ್ದಾರೆ ಎನ್ನುವುದನ್ನು ನೋಡಿದರೆ ನನಗೆ ಪರಮಾಶ್ಚರ್ಯವಾಗುತ್ತಿದೆ ಕಾಂಗ್ರೆಸ್ಸಿನವರು ಹೀಗಾಗುತ್ತಾರೆಂದು ನಾನು ಭಾವಿಸಿರಲಿಲ್ಲ. ಒಂದೇ ಸಮನೆ ಅಧಿಕಾರದಲ್ಲಿ ಸುಮಾರು 20 ವರ್ಷಗಳಿಂದಲೂ ಅಧಿಕಾರದ ತೆಕ್ಕೆಗೆ ಸಿಕ್ಕಿಕೊಂಡು ಹೋಗುತ್ತಿದ್ದಾರೆ. ಈಚೆಗೆ ನಮ್ಮ ಎನ್.ಡಿ.ಓ.ಗಳ ಪ್ರತಿನಿಧಿಗಳು ಮುಖ್ಯ ಮಂತ್ರಿಗಳೊಡನೆ ಭೇಟಿಗೆ ಬಂದಾಗ ನಮ್ಮ ಮಾನ್ಯ ಮಂತ್ರಿಗಳಾದ ಶ್ರೀ ರಾಮರಾಯರೂ ಇದ್ದರಂತೆ. ಅವರು ಇಲ್ಲಿ ಉತ್ತರ ಹೇಳುವಾಗ ಇಂಥಿಂಥವರು ಇಂಥ ಪೋಷಾಕು ಹಾಕಿದ್ದರು ಇಂಥ ಪೆನ್ನು ಇಟ್ಟುಕೊಂಡಿದ್ದರು ಎಂದು ಇನ್ನಿತರ ಮಾತುಗಳನ್ನು ಹೇಳಿದರು, ಛೇ, ಅವರು ಇಂತಹ ಮಾತುಗಳನ್ನು ಆಡುವುದು ಎಂದರೆ.......

ಶ್ರೀ ಎಂ. ವಿ. ರಾಮರಾವ್ (ಗೃಹಶಾಖೆಯ ಮಂತ್ರಿಗಳು).-ಸ್ವಾಮಿ, ನಾನು ಇಲ್ಲಿ ಹೇಳಿರುವುದನ್ನು ಎಲ್ಲರೂ ಕೇಳಿದ್ದಾರೆ. ನಾನೇನು ಹೇಳಿದೆ ಎಂದರೆ, ಅವರು ಇಟ್ಟುಕೊಂಡಿರುವ ಪೆನ್ ಹಾಗೂ ವಾಚು ಮತ್ತು ಅವರು ಪ್ರತಿನಿದಿಗಳಾಗಿ ಬಂದಿದ್ದವರು ಹಾಕಿಕೊಂಡಿರುವ ಪೋಷಾಕು ಬಹಳ ಬೆಲೆಯುಳ್ಳಂತಹವುಗಳು. ಇಂತಹ ಬೆಲೆಯುಳ್ಳ ವಸ್ತುಗಳನ್ನು ನಾನು ಕೂಡ ತೆಗೆದುಕೊಂಡು ಉಪಯೋಗಿಸುವದಕ್ಕೆ ಆಗುವುದಿಲ್ಲ ಎಂದು. ಇದರ ಬಗ್ಗೆ ಯಾವುದೋ ಒಂದು ಪೇಪರಿನವರೂ ಕೂಡ ಲೀಡ್‌ರ ಆರ್ಟಿಕಲಂ ಬರೆದು ಅದರಲ್ಲಿ ಸರ್ಕಾರಕ್ಕೆ ಇವರ ಬಗ್ಗೆ ಸೌಜನ್ಯವಿರಬೇಡವೇ? ಎಂದು ಬರೆದಿದ್ದುದನ್ನು ನಾನೂ ಕೂಡ ಓದಿ ನೋಡಿದೆ. ನಾನೇನೂ ಅವರಿಗೆ ಬುದ್ಧಿವಾದ ಹೇಳುತ್ತ ಇಂತಹ ಪೆನ್‌ಗಳನ್ನು ಇಟ್ಟುಕೊಳ್ಳಬೇಡಿ, ಇಂತಹ ಬಟ್ಟೆಗಳನ್ನು ಹಾಕಿಕೊಳ್ಳಬೇಡಿ ಎಂದು ಹೇಳಲಿಲ್ಲ. ಆದರೆ ಅಂತಹ ವಸ್ತುಗಳನ್ನು ಇಟ್ಟುಕೊಳ್ಳಲು ನನಗೆ ಆಗುತ್ತಿಲ್ಲ ಎಂದು ಹೇಳಿದೆ.



ಶ್ರೀ ಎಸ್. ಗೋಪಾಲಗೌಡ.-ತಾವೇನೋ ಶ್ರೀಮಂತರಿರಬಹುದು; ಸಿಂಪಲ್ ಆಗಿರಬಹುದು.

ಶ್ರೀ ಸಿ.ಜೆ. ಮುಕ್ಕಣ್ಣಪ್ಪ.-ಸಿಂಪ್ಲಿಸಿಟಿಯಲ್ಲಿ ದಲಾಯಿಲಾಮ ಇದ್ದಹಾಗೆ ಇದ್ದೇನೆ ಅಂತ ಅವರು ಹೇಳಿದರು. (ನಗು)

ಶ್ರೀ ಎಸ್. ಗೋಪಾಲಗೌಡ.-ಸ್ವಾಮಿ, ಈ ಮಾತನ್ನು ನಾನು ಹೇಳಬಾರದು ಎಂದಿದ್ದೆ. ಆ ಸಮಯದಲ್ಲಿ ನಾನು ಇರಲಿಲ್ಲ. ನಾನೂ ಕೂಡ ಪತ್ರಿಕೆಗಳ ವರದಿಗಳ ಆಧಾರದಮೇಲೆ ಇಲ್ಲಿ ಹೇಳಬೇಕಾಗಿ ಬಂತು. ಗಾಂಧಿವಾದಿಗಳಾಗಿದ್ದವರಲ್ಲಿ ಒಬ್ಬರು ಪೋಲೀಸು ಇಲಾಖೆ ವಹಿಸಿಕೊಂಡರೆ ಬುದ್ಧಿ ಹೇಗೆ ಪರಿವರ್ತನೆಯಾಗುತ್ತದೆ ಎನ್ನುವುದನ್ನು ನಾವು ಬಿಡಿಸಿ ಇಲ್ಲಿ ಹೇಳಲು ಯಾರಿಗೂ ಆಗುವುದಿಲ್ಲ. ಇವೆರಡನ್ನೂ ರಿಕನ್‌ಸೈಲ್ ಮಾಡುವುದು ಕಷ್ಟವಾಗುತ್ತದೆ. ಇದು ಏನೇ ಇರಲಿ, ತಮ್ಮ ಗಮನಕ್ಕೆ ಇನ್ನೊಂದು ವಿಚಾರ ಇಲ್ಲಿ ತರುತ್ತೇನೆ. ಬಾಗಲಕೋಟೆಯಲ್ಲಿರುವ ಒಂದು ಸಿಮೆಂಟು ಫ್ಯಾಕ್ಟರಿ ಇದೆ. ಈ ಬಾಗಲಕೋಟೆಯಿಂದಲೇ ನಮ್ಮ ರಾಜ್ಯದ ಮುಖ್ಯಮಂತ್ರಿಗಳಿಗೆ ಒಂದು ಸ್ಥಾನ ಕೊಟ್ಟು ಚುನಾವಣೆ ಮಾಡಿಸುವುದಕ್ಕಾಗಿ ಇಲ್ಲಿದ್ದ ಒಬ್ಬರಿಂದ ರಾಜಿನಾಮೆ ಕೊಡಿಸಿ ಇವರನ್ನು ಅವಿರೋಧವಾಗಿ ಚುನಾಯಿಸಬೇಕೆಂದು ಮಾಡಿ ತಂದು ಈ ರಾಜ್ಯದ ಮುಖ್ಯಮಂತ್ರಿಗಳಾಗಿ ಮಾಡಿದರು. ಇದು ಎಲ್ಲರಿಗೂ ಗೊತ್ತಿರುವ ವಿಷಯ. ಬಾಗಲ ಕೋಟೆಯ ಸಿಮೆಂಟು ಫ್ಯಾಕ್ಟರಿಯಲ್ಲಿ ಅನೇಕ ಅಕ್ರಮ ವ್ಯವಹಾರಗಳು ನಡೆಯಲು ಇಲ್ಲಿದ್ದ ಒಬ್ಬರು ಶ್ರೀಮಂತ ಡೈರೆಕ್ಟರೇ ಕಾರಣ ಎಂದು ಅವರ ಮೇಲೆ ದುಡ್ಡಿನ ಛಪಾವಣೆಗಾಗಿ ಸುಮಾರು 33 ಕೇಸುಗಳಲ್ಲಿ ಲಕ್ಷ ರೂಪಾಯಿಗಳಷ್ಟು ಹಣ ದುರುಪಯೋಗವಾಗಿದೆ ಎನ್ನುವುದು ಇನ್ನೂ ಕೋರ್ಟುಗಳಲ್ಲಿರುವಾಗ ಅದನ್ನು ವಾಪಸ್ಸು ತರಿಸಿಕೊಳ್ಳಲು ನಮ್ಮ ಮಂತ್ರಿಮಂಡಲದವರು ಸಹಾಯ ಮಾಡಿ ವಿತ್‌ಡ್ರಾ ಮಾಡಿಸಿದರೆಂದು ಕೇಳುತ್ತೇನೆ. ಇಂತಹ ಅಕ್ರಮ ವ್ಯವಹಾರಗಳಿಗೆ ಗುರಿಯಾಗಿ ಸೆಷನ್ ಕೇಸು ಇದ್ದಂತಹ ವ್ಯಕ್ತಿಯನ್ನೇ ಪುನ: ಇದರ ಮ್ಯಾನೇಜಿಂಗ್ ಡೈರೆಕ್ಟರಾಗಿ ನೇಮಿಸಿ ಅವರಿಗೆ ಸುಮಾರು 8.10 ಸಾವಿರ ರೂಪಾಯಿಗಳಷ್ಟು ಪಗಾರ ಎಂದು ಕೊಡುತ್ತಿದ್ದಾರೆ. ಅಲ್ಲದೆ ಆ ಫ್ಯಾಕ್ಟರಿಯಲ್ಲಿ ಪುನ: ಚುನಾವಣೆಗಳು ನಡೆಯಲು ಬಂದಾಗ ಇಲ್ಲಿನ ರಾಜ್ಯ ಸರ್ಕಾರದವರು ಹಾಗೂ ಮಂತ್ರಿಮಂಡಲದವರು ಪ್ರಾಕ್ಸಿ ಕೊಟ್ಟು ಅವರಿಗೆ ವೋಟು ಬರುವಂತೆ ಪುನ: ಪ್ರಚಾರ ಮಾಡಿ ಡೈರೆಕ್ಟರಾಗಿ ಬರಲು ಪ್ರಯತ್ನ ಮಾಡುತ್ತಿದ್ದಾರೆಂದು ಕೇಳುತ್ತೇವೆ. ಇದೇ ಕಾರಣಕ್ಕಾಗಿಯೇ ನಮ್ಮ ಮಾನ್ಯ ಮಂತ್ರಿಗಳಾದ ಶ್ರೀಮಾನ್ ಆರ್. ಎಂ. ಪಾಟೀಲ್‌ರವರೂ ಕೂಡ ಅವರು ತಮ್ಮ ಮೊದಲಿನ ಪೋರ್ಟ್‌ಪೋಲಿಯೋ ಕಳೆದುಕೊಳ್ಳಲು ಕಾರಣವಾಯಿತು ಎಂದು ಕೇಳುತ್ತೇವೆ. ಇದೇ ಕಾರಣಕ್ಕಾಗಿಯೋ ಏನೋ ನಮ್ಮ ಮಾನ್ಯ ಆಹಾರ ಮಂತ್ರಿಗಳಾದ ಶ್ರೀಮಾನ್ ಜತ್ತಿಯವರೂ ಕೂಡ ಡಿಮೋಟ್ ಆಗುವ ಪ್ರಮೇಯ ಬಂತು ಎಂದು ಕೇಳುತ್ತೇವೆ. ಇನ್ನೂ ಒಂದು ಕಾರಣ ಇಲ್ಲಿ ಹೇಳುವುದಾದರೆ, ಈ ಮಂತ್ರಿಮಂಡಲದಲ್ಲಿ ಸತ್ತೋರು ಕೆಟ್ಟೋರು ಯಾರಿದ್ದರೂ ಸರಿ ಇವರ ಜಾಗಗಳನ್ನು ಭರ್ತಿ ಮಾಡಲು ಆಗಲಿಲ್ಲ.

ಯಾರು ಹೋದರೂ ಸರಿಯೇ ಎಲ್ಲ ಮಂತ್ರಿಗಳ ಸ್ಥಾನವನ್ನೂ ನಾವೊಬ್ಬರೇ ವಹಿಸಿಕೊಳ್ಳುತ್ತೇನೆಂದು ಹೇಳುತ್ತಾರೆ. ಈಗ ನೀವೇ ನೋಡಬಹುದು ಹಿಂದೆ ಸೋಷಿಯಲ್ ವೆಲ್‌ಫೇರು ಇಲಾಖೆಗೆ ಒಬ್ಬರು ಮಂತ್ರಿಗಳು ಇದ್ದವರು ಈಗ ಇಲ್ಲ. ಅವರ ಬಗ್ಗೆ ಏನಾದರೂ ಕೇಳಲು ಆ ಇಲಾಖೆಯ ಅಧಿಕಾರಿಗಳ ಬಳಿ ಹೋದರೆ ನಮಗೇನೂ ಗೊತ್ತಿಲ್ಲ, ಇವೆಲ್ಲಾ ಪಾಲಿಸಿ ಮ್ಯಾಟರುಗಳು, ಮಂತ್ರಿಮಂಡಲಕ್ಕೆ ಸೇರಿದ್ದು ಎನ್ನುತ್ತಾರೆ ಮತ್ತು ನಾವೇನೂ ಮಾಡುವುದಕ್ಕೆ ಆಗುವುದಿಲ್ಲ ಎಂದೂ ಹೇಳುತ್ತಾರೆ. ಈ ಪಾಲಿಸಿಯನ್ನು ಡಿಸೈಡ್ ಮಾಡುವವರು ಯಾರು? ಯಾರ ಮನೆ ಬಾಗಿಲು ಕಾಯಬೇಕು ಇದನ್ನು ಸ್ವಲ್ಪ ಯೋಚನೆ ಮಾಡಬೇಕು. ಮಾನ್ಯ ಶ್ರೀ ದುಗ್ಗಪ್ಪನವರು ಹೇಳಿದರು, ಸೋಶಿಯಲ್ ವೆಲ್‌ಫೇರ್ ಏನೂ ಆಗಿಲ್ಲ ಎಂದು. ಕಾಂಗ್ರೆಸ್ ಚುನಾವಣಾ ಪ್ರಣಾಳಿಕೆಯಲ್ಲಿ ಉದ್ದುದ್ದವಾದ ದೊಡ್ಡ ದೊಡ್ಡ ಮಾತುಗಳನ್ನು ಹೇಳಿದ್ದಾರೆ. ಸರ್ದಾರ್ ವಲ್ಲಭಾಯಿ ಪಟೇಲರ ಒಂದು ತತ್ವವನ್ನು ಹೇಳಿದ್ದಾರೆ. ರಾಜ್ಯಗಳ ವಿಲೀನೀಕರಣವಾಯ್ತು. ಎರಡನೆಯದು ಅಸ್ಪೃಶ್ಯತೆ ತೆಗೆದುಹಾಕಿದ್ದಾರೆ, ಮತ್ತು ಸ್ತ್ರೀಯರಿಗೆ ಸ್ಥಾನಮಾನ ಬಂದಿದೆ ಇತ್ಯಾದಿ. ಇವತ್ತು ಏನಾಗಿದೆ ಎಂದರೆ, ಇವರ ಸರ್ಕಾರದ ಎಲ್ಲಾ ವಿಷಯಗಳನ್ನೂ ನಾವು ಧೃತರಾಷ್ಟ್ರನಿಗೆ, ಸಂಜಯನ ಮೂಲಕ ಹೇಳುತ್ತಾರೆ. ಇನ್ನೂ ಸ್ವಲ್ಪ ಮುಂದಕ್ಕೆ ಹೋದರೆ ಮಾನ್ಯ ಕೃಷ್ಣಪ್ಪನವರು ಬಹಳ ಚೆನ್ನಾಗಿ ವಿವರಣೆ ಮಾಡಿ ಅಲ್ಲಿಯೇ ನರಕಕೆ ತಳ್ಳಿಬಿಡುತ್ತಾರೆ, ಇವರು ಹೇಳುತ್ತಾರೆ, ಜಾನ್‌ಸನ್ ಇಲ್ಲದಿದ್ದರೆ, ಕೊಸಗಿನ್ ಬರುತ್ತಾನೆ ಎಂದು. ಯಾವ ದೇಶವೂ ಪರದೇಶದ ಹಣ, ಪರದೇಶದ ಗೋಧಿ, ಗೊಬ್ಬರದಿಂದ ಸ್ವಾತಂತ್ರ್ಯವನ್ನು ಕಟ್ಟಿಲ್ಲ. ನೆರವು ಪಡೆಯಬಹುದು, ತಾಂತ್ರಿಕ ಸಹಾಯ ಪಡೆಯಬಹುದು. ಮಾನ್ಯ ಮುಖ್ಯಮಂತ್ರಿಯವರು ಸಣ್ಣ ಕಾರು, ಸಣ್ಣ ಕಾರು ಎಂದು ಹೇಳುತ್ತಾ ಇದ್ದಾರೆ. ಬಹುಶ: ಈಗ ಅದು ಹೋಯಿತು ಎಂದು ಕಾಣುತ್ತದೆ. ಗಾಲ್‌ಬ್ರೆತ್ ಹೇಳುತ್ತಾರೆ, ನೀವು ಇನ್ನೂ ಸೈಕಲ್ ಯುಗದಲ್ಲೇ ಇದ್ದೀರಿ, ಕಾರುಗಳಲ್ಲಿ ಇನ್ನೂ ಓಡಾಡುವುದಕ್ಕಾಗಲಿಲ್ಲ ಎಂದು. ಶ್ರೀ ರಾಮಕೃಷ್ಣ ಹೆಗಡೆಯವರು ಹೇಳುತ್ತಾರೆ-ಜನ ಎಂತದ್ದು ಇರುತ್ತಾರೋ, ಅಂಥದೇ ಸರ್ಕಾರ ಸಿಗುತ್ತದೆ ಎಂದು. ನಾನಾದರೂ ಹೇಳುವುದಿಷ್ಟೆ, ಇರುವ ಸ್ವಲ್ಪ ಕಾಲದಲ್ಲಾದರೂ ದೇಶದ ಹಿತದೃಷ್ಟಿಯಿಂದ ಸ್ವಾರ್ಥವನ್ನು ಸ್ವಲ್ಪ ಕಡಿಮೆ ಮಾಡಿ, ಇನ್ನೂ ತಿಂದುಕೊಂಡು ಮುಂದುವರಿಸಿಕೊಂಡು ಹೋಗಬೇಡಿ. ನೀವು ಜನರಿಗೆ ನೀರು ಕೊಡುವ, ದೀಪ ಕೊಡುವ, ಗೊಬ್ಬರ ಕೊಡುವ ಮುಂತಾದ ಸಹಸ್ರಾರು ಭರವಸೆಗಳನ್ನು ಕೊಟ್ಟು ವಂಚಿಸಿದಿರಿ. ಅದರಲ್ಲಿ ಒಂದಾದರೂ ಮಾಡಿ ದೇಶವನ್ನು ಕಟ್ಟುವುದಕ್ಕೆ ಪ್ರಯತ್ನ ಮಾಡಿ.

ಶ್ರೀಮಾನ್ ಕಂಠಿಯವರು ಹೇಳುತ್ತಾರೆ, ವಿದ್ಯಾಭ್ಯಾಸ ವಿಷಯದಲ್ಲಿ ಸುಧಾರಣೆಯಾಗಿದೆ ಯೆಂದು. ಆದರೆ, ಅಂಥ ಸುಧಾರಣೆಯಾಗುತ್ತಾ ಇಲ್ಲ. ಅದನ್ನು ಹೇಗೆ ಸಾಧಿಸುವುದಾಗಲೀ ಗೊತ್ತಿಲ್ಲ. ಅಂತೂ ಕನ್ನಡ ಮಾಧ್ಯಮ ಮಾಡಬೇಕು, ಮತ್ತು ಇತರ ಬೇರೆ ಪ್ರಯೋಗಗಳನ್ನು ರಿವ್ಯೂ ಮಾಡಿ ಸರಿಪಡಿಸಬೇಕು. ಉದಾಹರಣೆಗೆ ಸ್ಕೂಲುಗಳಲ್ಲಿ 50 ಜನ ಪ್ರೋಬೇಶನರುಗಳನ್ನು ತೆಗೆದುಕೊಳ್ಳುವುದು. 20 ವರ್ಷ ಸರ್ವಿಸ್ ಮಾಡಿ ಎಂ.ಎ., ಬಿ.ಟಿ. ಯಾಗಿದ್ದರೂ ಅವನಿಗೆ ಹೆಡ್‌ಮಾಸ್ತರ್ ಆಗುವ ಸಂದರ್ಭ ಇಲ್ಲ. ಈ ಪ್ರೇಬೇಶನರುಗಳನ್ನು ಹೆಡ್‌ಮಾಸ್ಟರ್, ಹೆಡ್ ಮಿಸ್ಟ್ರೆಸ್ ಮಾಡುವುದರಿಂದ ಆ 20 ವರ್ಷ ಸೇವೆ ಮಾಡಿದವರು ಯಾವ ಹೊಳೆಗೆ ಹಾರಬೇಕು? ಅದೇ ರೀತಿ ಜೂನಿಯರ್ ಇಂಜಿನಿಯರ್ಸ್ ಇದ್ದಾರೆ. ಅಂತೂ ಸಹಸ್ರಾರು ಸಮಸ್ಯೆಗಳನ್ನು ನಿರ್ಮಾಣ ಮಾಡಿ ಹದಗೆಡಿಸಿ ಬಿಟ್ಟಿದ್ದಾರೆ. ಇವತ್ತು ದೇಶದ ಒಂದು ಅತಿ ಮೂಲ್ಯವಾದ 20 ವರ್ಷಗಳನ್ನು ಹಾಳು ಮಾಡಿದಿರಿ. ಇವತ್ತು ಜನತೆಯ ದೇಶವನ್ನು ಕಟ್ಟಿ ಎಲ್ಲರೂ ಬದುಕಬೇಕು ಎನ್ನುವ ದೃಷ್ಟಿಯಿಂದ ಕೆಲಸವನ್ನು ಮಾಡಬೇಕು. ಅದಿಲ್ಲದೆ, ನೀವು ದೇಶದ ಬೊಕ್ಕಸವನ್ನು ಬರಿದು ಮಾಡಿ ದಾರಿದ್ರ್ಯವನ್ನು ತಂದೊಡ್ಡಿದ್ದೀರಿ. ಅಪಾರವಾದ ಸಾಲವನ್ನು ಮಾಡಿದಿರಿ. ಇವತ್ತಿನ ದಿವಸ ಯಾವುದಕ್ಕೆ ಮಾಡಬೇಕಾಗಿತ್ತೋ ಅದಕ್ಕೆ ಮಾಡದೆ ಬೇರೆ ಬೇರೆ ವಿಚಾರಗಳಿಗೆ ಖರ್ಚು ಮಾಡಿ ತಿಂದು ಬರಿದು ಮಾಡಿದಿರಿ. ದೇಶದ ಜನತೆಗೆ ಅನ್ನ ಕೊಡುವುದಕ್ಕೂ ಆಗಲಿಲ್ಲ, ಮತ್ತು ಯಾವ ಮೂಲಭೂತ ಸಮಸ್ಯೆಯನ್ನು ಬಗೆಹರಿಸಲಾಗಲಿಲ್ಲ. ನಮ್ಮ ಮಾನ್ಯ ಮಂತ್ರಿಗಳು ಹೇಳುತ್ತಾರೆ, ಪೌರಸಭೆಯು ಹಣಕಾಸಿನ ಪರಿಸ್ಥಿತಿಯು ಚೆನ್ನಾಗಿಲ್ಲದಿರುವುದರಿಂದ ಅಧ್ಯಕ್ಷರು ಮತ್ತು ಉಪಾಧ್ಯಕ್ಷರ ಸಂಭಾವನೆಗಳನ್ನು ನಿಲ್ಲಿಸುತ್ತೇವೆ ಎಂದು. 10 ವರ್ಷಗಳ ಹಿಂದೆ ಮಾಡಿದ ಸಾಲ.-ಈಗ ಹಣಕಾಸಿನ ವ್ಯವಸ್ಥೆ ಸರಿಯಾಗಿಲ್ಲ ಎಂದು ಈಗಿರುವ ಅಧ್ಯಕ್ಷ ಮತ್ತು ಉಪಾಧ್ಯಕ್ಷರಿಗೆ ಕೊಡಬಾರದು ಎಂದು ಹೇಳುತ್ತಾರೆ. ನಾನಾದರೂ ಕೇಳುತ್ತೇನೆ: ಇವರು ಹಣವನ್ನು ದುರುಪಯೋಗ ಮಾಡಿದ್ದಾರೆ.-ಎಂದು ತಿಂಗಳು ಇವರೆಲ್ಲಾ ಏಕೆ ಪುಕ್ಸಟ್ಟೆಯಾಗಿ ಕೆಲಸ ಮಾಡಬಾರದು? ಯಾವ ತಪ್ಪಿಗೆ ಯಾವ ಶಿಕ್ಷೆ? ಮಿತವ್ಯಯ ಸಾಧಿಸುವುದು ಹೇಳುತ್ತಾರೆ. ಎಡಗೈಯಲ್ಲಿ ಸಾಸಿವೆಯನ್ನು ಗಟ್ಟಿಯಾಗಿ ಹಿಡಿದಿದ್ದರೆ ಬಲಗೈಯಲ್ಲಿ ಕುಂಬಳಕಾಯಿ ಹೋಗುತ್ತದೆ. ಒಬ್ಬೊಬ್ಬ ಕಂಟ್ರಾಕ್ಟರುಗಳು ಮಾಡಿದ ಮನೆಗಳನ್ನು ನೋಡಿದರೆ, ನಮ್ಮ ಹೊಟ್ಟೆ ಉರಿದು ಹೋಗುತ್ತದೆ. ರಾಜನ ಅರಮನೆಗಳು ಕೂಡ ಆ ರೀತಿ ಇಲ್ಲ. ಇದೆಲ್ಲಾ ಯಾವ ಹಂ? ಕೊಯಂಬತ್ತೂರು ನೋಟೆ? ಪಿ.ಡಬ್ಲ್ಯೂ ಡಿ. ನೋಟೆ? ಏನಿದು ಸೂರೆ? ಇದೆಲ್ಲಾ ನಿಲ್ಲಬೇಕು. ಜನ ಬೆಂಬಲದಿಂದ ಇದನ್ನೆಲ್ಲಾ ನಾವು ನಿಲ್ಲಿಸುತ್ತೇವೆ. ಇಷ್ಟು ಹೇಳಿ, ಈ ಮಂತ್ರಿಮಂಡಲದಲ್ಲಿ ಜನತೆಯ ವಿಶ್ವಾಸ ಉಳಿದಿರುವುದಿಲ್ಲ, ಹಾಗು ನೀವು ಜನರ ವಿಶ್ವಾಸ ಉಳಿಸಿಕೊಳ್ಳಲಿಕ್ಕೆ ಪ್ರಯತ್ನ ಮಾಡಲಿಲ್ಲ ಎಂದು ಹೇಳುತ್ತೇನೆ. ಕೊನೆಯದಾಗಿ ಹೇಳುವುದು ಏನೆಂದರೆ, ಆಳುವ ನೈತಿಕ ಅರ್ಹತೆಯ ಹಕ್ಕನ್ನು ಇವರು ಕಳೆದುಕೊಂಡಿದ್ದಾರೆ ಎಂದು ಹೇಳಿ ನನ್ನ ಮಾತು ಮುಗಿಸುತ್ತೇನೆ.

## ಕೃಷ್ಣಾ ಮತ್ತು ಗೋದಾವರಿ ನೀರಿನ ಹಂಚಿಕೆ ವಿಷಯ: 1967

ಸ್ವಾಮಿ, ಈ ಕೃಷ್ಣ ಮತ್ತು ಗೋದಾವರಿ ನೀರಿನ ಹಂಚಿಕೆಯ ವಿಷಯದಲ್ಲಿ ಈಗ ಪ್ರದಾನ ಮಂತ್ರಿಗಳು ದೆಹಲಿಯಲ್ಲಿ ಮುಖ್ಯ ಮಂತ್ರಿಗಳ ಸಮ್ಮೇಳನವನ್ನು ಕರೆದಿದ್ದಾರೆ. ಮಹಾರಾಷ್ಟ್ರ, ಕರ್ನಾಟಕ ಮತ್ತು ಆಂಧ್ರ ಪ್ರ್ಯಾಂತ್ಯಗಳ ಮುಖ್ಯಮಂತ್ರಿಗಳು ಈ ತಿಂಗಳು 17-18ನೇ ತಾರೀಖು ಈ ಸಮ್ಮೇಳನದಲ್ಲಿ ಕೃಷ್ಣಾ ಮತ್ತು ಗೋದಾವರಿ ನೀರಿನ ಹಂಚಿಕೆಯ ವಿಷಯದಲ್ಲಿ ಚರ್ಚೆ ಮಾಡಿ ಏನಾದರೂ ಒಂದು ತೀರ್ಮಾನಕ್ಕೆ ಬರುತ್ತಾರೆ ಎಂದು ಹೇಳಿದರು. ಜೊತೆಗೆ ಶ್ರೀಮಾನ್ ಕೆ. ಎಲ್. ರಾವ್ ಅವರ ಸಂಧಾನ ಒಳ್ಳೆಯದು ಎಂದು ಹೇಳಿದ್ದಾರೆ. ಕೃಷ್ಣಾ ನೀರಿನ ಬಗ್ಗೆ ಪ್ರಧಾನಿಗಳು ಆಂಧ್ರದಲ್ಲಿ ಮಾಡಿರುವ ಭಾಷಣಗಳು ನೋಡಿದರೆ, ಶ್ರೀಮಾನ್ ಚನ್ನಬಸಪ್ಪನವರು ಈ ಮಾನ್ಯ ಸಭೆಯಲ್ಲಿ ಏನು ಹೇಳಿದ್ದಾರೆಯೋ ಅದಕ್ಕಿಂತಲೂ ಕಳವಳಿಕಾರಿಯಾದ, ಒಂದು ಭಯಾನಕವಾದ ಭವಿಷ್ಯ ಇದೆಯೆಂದು ನಮಗೆ ಕಂಡು ಬರುತ್ತದೆ. ತಾವು ಹೇಗೂ ದೆಹಲಿಗೆ ಹೋಗುತ್ತಿದ್ದೀರಿ. ಅದಕ್ಕೋಸ್ಕರ ನನ್ನ ನಮ್ರವಾದ ಸಲಹೆ ಇಷ್ಟೆ. ಮಾನ್ಯ ಶಿವಪ್ಪನವರು ಹೇಳಿದ ಹಾಗೆ ಕಾರಣಾಂತರದಿಂದ ಈ ಸಭೆಯಲ್ಲಿ ಕೃಷ್ಣಾ ಗೋದಾವರಿ ನೀರಿನ ಹಂಚಿಕೆಗೆ ಸಂಬಂಧಪಟ್ಟ ನಿರ್ಣಯವನ್ನು ಚರ್ಚೆ ಮಾಡಿ ನಿರ್ಣಯ ಮಾಡಲಿಕ್ಕೆ ಆಗಲಿಲ್ಲ. ಇದಕ್ಕೆ ಬೇರೆ ಕಾರಣಗಳು ಇರಬಹುದು. ಈ ವಿಷಯದಲ್ಲಿ ಮಾನ್ಯ ಮುಖ್ಯಮಂತ್ರಿಗಳು ಯಾವ ಮಾತುಕತೆಗಳನ್ನೂ ಆಡಲಿಲ್ಲ ಎಂದು ಶ್ರೀಮಾನ್ ಶಿವಪ್ಪನವರು ತಿಳಿಸಿದರು. ಮೊನ್ನೆ ಶ್ರೀಮಾನ್ ಚನ್ನಬಸಪ್ಪನವರು ಬಹಳ ಚೆನ್ನಾಗಿ ಕೇಳಿದರು; ಈ ಕೃಷ್ಣಾ ನೀರಿನ ವಿಷಯದಲ್ಲಿ ನಮ್ಮ ಸರ್ಕಾರದವರು ಏನು ನಿಲುವನ್ನು ತೆಗೆದುಕೊಂಡಿದ್ದೀರಿ, ಅದನ್ನು ತಿಳಿಸುವುದಕ್ಕೆ ಸಾಧ್ಯವಿದೆಯೇ ಎಂದು ಅವರು ಕೇಳಿದರು. ಅದಕ್ಕೆ ನಮ್ಮ ದುರದೃಷ್ಟವಸಾತ್ ಲೋಕೋಪಯೋಗಿ ಶಾಖೆಯ ಮಂತ್ರಿಗಳು ರಾಜಕೀಯ ಉತ್ತರವನ್ನು ಕೊಟ್ಟಿದ್ದಾರೆ. ಅವರು ಚನ್ನಬಸಪ್ಪನವರನ್ನು ವೈಯಕ್ತಿಕ ರೀತಿಯಲ್ಲಿ ಹಾಗೆ ಹೀಗೆ ಎನ್ನುವ ಮಾತನ್ನು ಹೇಳಿ ಮುಗಿಸಿದರು. ಇದರಿಂದ ಏನಾಗಿದೆ ಎಂದರೆ ಈ ವಿಷಯದಲ್ಲಿ ಈ ಸದನಲ್ಲಿ ವಂದು ತತ್ವದ ಬಗ್ಗೆ ಒಮ್ಮತ ಅಭಿಪ್ರಾಯಕ್ಕೆ ಬರುವುದಕ್ಕೆ ಸಾಧ್ಯವಾಗಿಲ್ಲ ಎಂಬುದು ಕಂಡುಬರುತ್ತದೆ. ಇದರಲ್ಲಿ ಒಂದು ಐಕಮತ್ಯ ಇಲ್ಲದೆ ಒಂದು ರೀತಿ ಹೊರಗಡೆಯವರಿಗೆ ಕಂಡುಬರುತ್ತದೆ. ಅದಕ್ಕಾಗಿ ಈಗ ನಾನು ಒಂದು ಸಲಹೆ ಮಾಡುತ್ತೇನೆ, ತಾವು ಹೇಗೂ ದೆಹಲಿಗೆ ಹೋಗುತ್ತೀರಿ, ತಮ್ಮ ಮುಕಂಡತ್ವದಲ್ಲಿ ಶ್ರೀಮಾನ್ ಚನ್ನಬಸಪ್ಪನವರು, ಶ್ರೀಮಾನ್ ಶಿವಪ್ಪನವರು, ಶ್ರೀಮಾನ್ ನಂಜೇಗೌಡರು ಇತ್ಯಾದಿ ಯಾರು ಯಾರು ಈ ವಿಷಯದಲ್ಲಿ ಮಾಹಿತಿಯನ್ನು ಹೊಂದಿದ್ದಾರೆಯೋ ಅವರೆಲ್ಲರನ್ನು ಒಳಗೊಂಡಂತಹ ಒಂದು ನಿಯೋಗವನ್ನು ದೆಹಲಿಗೆ ಕರೆದುಕೊಂಡು ಹೋಗಿ ಅಲ್ಲಿ ಈ ಕೃಷ್ಣಾ ನೀರಿನ ವಿವಾದದ ಸಂಬಂಧದಲ್ಲಿ ಪ್ರಧಾನಿಗಳು, ಆಂಧ್ರ ಮುಖ್ಯ ಮಂತ್ರಿಗಳು ಮತ್ತು ಮಹಾರಾಷ್ಟ್ರದ ಮುಖ್ಯಮಂತ್ರಿಗಳೊಡನೆ ಮಾತುಕತೆ ನಡೆಸಬೇಕು. ಇಲ್ಲದೇ ಹೋದರೆ ಶ್ರೀಮಾನ್ ಚನ್ನಬಸಪ್ಪನವರ ಮುಖಂಡತ್ವದಲ್ಲಿ ನಾನು ಈಗಾಗಲೇ ಹೇಳಿದ ಮಾನ್ಯ ಸದಸ್ಯರನ್ನೊಳಗೊಂಡ ಒಂದು ನಿಯೋಗವನ್ನು ದೆಹಲಿಗೆ ಕಳುಹಿಸಬೇಕೆಂದು ನಾನು ಹೇಳುತ್ತೇನೆ. ಈಗ ಈ ಸಭೆ ಮುಕ್ತಾಯವಾಗುತ್ತಿದೆ.

---
ವಿಧಾನ ಸಭೆ ನಡವಳಿಕೆ: ದಿನಾಂಕ 5.8.1967



ಇನ್ನು ಮತ್ತೆ ಈ ಸಭೆ ಸೇರಬೇಕಾದರೆ ಆರು ತಿಂಗಳಾಗುತ್ತದೆಯೋ ಅಥವಾ ಯಾವಾಗ ಸೇರುತ್ತಾರೆಯೋ ಗೊತ್ತಿಲ್ಲ. ಒಂದು ವೇಳೆ ಮಾನ್ಯ ಶಿವಪ್ಪನವರು ವಿರೋಧ ಪಕ್ಷದವರು, ಅವರು ಹೇಳಿಕೆ ಕೊಡುವುದು ಹೇಗೆ ಎಂಬ ಅಭಿಪ್ರಾಯವಿದ್ದ ಹಾಗೆ ಆಗುವುದು ಸರ್ವ ಸಮ್ಮತ ಇಲ್ಲದಿದ್ದರೆ ಇನ್ನು ಆರು ತಿಂಗಳ ನಂತರದಲ್ಲಿ ನಾವು ಸೇರಿ ಈ ವಿಷಯದಲ್ಲಿ ಚರ್ಚೆ ಪ್ರಯೋಜನವಾಗುವುದಿಲ್ಲ. ಆದ್ದರಿಂದ ದಯವಿಟ್ಟು ಈ ವಿಷಯದಲ್ಲಿ ಮುಖ್ಯಮಂತ್ಲಿಗಳು ಜೊತೆಯಲ್ಲಿ ತಾವು ಸಮಾಲೋಚನೆ ಮಾಡಿ ಒಂದು ನಿಯೋಗವನ್ನು ನಮ್ಮ ರಾಜ್ಯದ ಪರವಾಗಿ ದೆಹಲಿಗೆ ಕಳುಹಿಸಿ ಅಲ್ಲಿ ಪ್ರಧಾನಿಗಳು, ಆಂಧ್ರದ ಮುಖ್ಯ ಮಂತ್ರಿಗಳು, ಮಹಾರಾಷ್ಟ್ರದ ಮುಖ್ಯಮಂತ್ರಿಗಳ ಜೊತೆಯಲ್ಲಿ ಮಾತುಕತೆಯನ್ನು ನಡೆಸುವಂತೆ ಮಾಡಬೇಕು. ಈ ವಿಷಯದಲ್ಲಿ ನಿರ್ಣಯವಿಲ್ಲದಿದ್ದರೂ ಮುನ್ನೆಚ್ಚರಿಕೆಯನ್ನು ತೆಗೆದುಕೊಳ್ಳಬೇಕು. ಈ ವಿಚಾರದಲ್ಲಿ ಆಳುವ ಪಕ್ಷದವರು ಮತ್ತು ವಿರೋಧ ಪಕ್ಷದ ಅನೇಕ ಸದಸ್ಯರು ಹೇಳಿದ್ದಾರೆ. ಈಗ ಪ್ರಧಾನ ಮಂತ್ರಿಗಳು ಸಮ್ಮೇಳನವನ್ನು ಕರೆದಿರುವಾಗ ಮುಖ್ಯ ಮಂತ್ರಿಗಳ ಮುಖಂಡತ್ವದಲ್ಲಿ ಅಲ್ಲಿಗೆ ಸಾಕಷ್ಟು ವಿಷಯಗಳನ್ನು ತಿಳಿದಿರುವವರು ಹೋಗಿ ಮಾತುಕತೆ ನಡೆಸುವುದು ಒಳ್ಳೆಯದು. ಅವವರರ ಮುಂದೆ ನಮ್ಮ ಅಭಿಪ್ರಾಯವನ್ನು ಸ್ಪಷ್ಟವಾದ ರೀತಿಯಲ್ಲಿ ನ್ಯಾಯವಾದ ರೀತಿಯಲ್ಲಿ ಇಡಬೇಕು. ಒಂದು ವೇಳೆ ನಮಗೆ ನ್ಯಾಯವಾದ ಪಾಲು ನಿಜರು ದೊರೆಯುವುದಿಲ್ಲ ಎಂದು ಕಂಡುಬಂದಾಗ ತಕ್ಷಣ ಕೇಂದ್ರ ಸರ್ಕಾರಕ್ಕೆ ಒತ್ತಾಯಪಡಿಸಿ ಈ ವಿವಾದವನ್ನು ಒಂದು ನ್ಯಾಯಾಲಯದ ತೀರ್ಪಿಗೆ ಒಳಪಡಿಸಿ ಸಹಾಯ ಮಾಡಬೇಕೆಂದು ನಾನು ಕೇಳಿಕೊಳ್ಳುತ್ತೇನೆ. ಇದಕ್ಕೆ ಲೋಕೋಪಯೋಗಿ ಶಾಖೆಯ ಮೆಂತ್ಲಿಗಳೂ ಒಪ್ಪಬಹುದು. ಆದ್ದರಿಂದ ಈ ಕೃಷಾ ನದಿಯ ನೀರಿನ ಹಂಚಿಕೆಗೆ ಸಂಬಂಧಪಟ್ಟಂತೆ ನಮ್ಮ ಸರ್ಕಾರದ ವರದಿಗಳು ಏನಿವೆಯೋ ಅವುಗಳನ್ನೆಲ್ಲಾ ನಮ್ಮ ನಿಯೋಗದವರ ಕೈಯಲ್ಲಿ ಕೊಟ್ಟು ಅವರನ್ನು ದೆಹಲಿಗೆ ಕಳುಲಿಸುವುದಕ್ಕೆ ವ್ಯವಸ್ಥೆ ಮಾಡಬೇಕೆಂದು ನಾನು ತಮ್ಮಲ್ಲಿ ಕೇಳಿಕೊಳ್ಳುತ್ತೇನೆ.

## ಸರ್ಕಾರದ ವಿರುದ್ಧ ಅವಿಶ್ವಾಸ ನಿರ್ಣಯ ಕುರಿತು, 1967.

ಶ್ರೀ ಎಸ್. ಗೋಪಾಲಗೌಡ(ತೀರ್ಥಹಳ್ಳಿ)-ಮಾನ್ಯ ಉಪಾಧ್ಯಕ್ಷರೇ ಈ ಮಂತ್ರಿಮಂಡಲದಲ್ಲಿ ಈ ಮನೆಗೆ ವಿಸ್ವಾಸವಿಲ್ಲ ಎಂಬ ಸೂಚನೆಯನ್ನು ವಿರೋಧ ಪಕ್ಷದ ನಾಯಕರಾದ ಶ್ರೀಮಾನ್ ಶಿವಪ್ಪನವರು ಈ ಸಭೆಯ ಮುಂದೆ ಮಂಡಿಸಿದ್ದಾರೆ. ಮತ್ತು ಕಾರಣಗಳನ್ನು ಅವರು ಭಾಷಣದಲ್ಲಿ ತಿಳಿಸಿದ್ದಾರೆ. ಮಾನ್ಯ ಮುಖ್ಯಮಂತ್ರಿಗಳಾದ ಶ್ರೀ ನಿಜಲಿಂಗಪ್ಪನವರು ಕಾಂಗ್ರೆಸ್ ಅಧ್ಯಕ್ಷರಾಗಿ ಆಯ್ಕೆಯಾಗಿದ್ದಾರೆ. ರಾಜ್ಯದ ಮುಕ್ಯಮಂತ್ರಿ ಪದವಿ ಬಿಡುತ್ತಾ ಇದ್ದಾರೆ ಎನ್ನುವ ಸಂದರ್ಭದಲ್ಲಿ ನಾವು ಈ ನಿರ್ಣಯವನ್ನು ಈ ಸೂಚನೆಯನ್ನು ಈ ಸಭೆಯ ಮುಂದೆ ಇಟ್ಟಿದ್ದೇವೆ. ಬೆಳಿಗ್ಗೆ ಶ್ರೀಮಾನ್ ನಿಜಲಿಂಗಪ್ಪನವರು ಶ್ರೀಮಾನ್ ಸಿದ್ಧವೀರಪ್ಪನವರ ಭಾಷಣ ಕೇಳಿದ್ದರೆ ಬಹುಶ: ಅವರು ಈಗಲೇ ರಾಜೀನಾಮೆ ಕೊಡುತ್ತಿದ್ದರೋ ಏನೋ? ಹಿರಿಯರಾದ ಶ್ರೀಮಾನ್ ಸಿದ್ಧವೀರಪ್ಪನವರು ರಾಜ್ಯ 1956ರಲ್ಲಿ ಯಾವ ರೀತಿ ನಡೆದುಕೊಂಡು ಹೋಗುತ್ತಾ ಇದೆ, ಶ್ರೀಮಾನ್ ಸಿದ್ಧವೀರಪ್ಪನವರು ಮಂತ್ರಿಯಾಗಿದ್ದಾಗ ರಾಜ್ಯದ ಆರ್ಥಿಕ ಸ್ಥಿತಿ ಏನು ಇತ್ತು, ಕಾಂಗ್ಸೆಸ್ ಅದಿಕಾರಕ್ಕೆ ಬಂದಾಗ ಏನು ಇತ್ತು, ಇದನ್ನು ಅಂಕಿಅಂಶಗಳಿಂದ ಹೇಳಿದ್ದಾರೆ ಮತ್ತು ಏಕೀಕರಣನಾದನಂತರ ಶ್ರೀಮಾನ್ ನಿಜಲಿಂಗಪ್ಪನವರ ಯುಗ ಆರಂಭವಾಗಿ 1967ರಲ್ಲಿ ಇನ್ನೂ ಮುಕ್ತಾಯವಾಗುತ್ತಾ ಇದೆ, ಈ ಅವಧಿಯಲ್ಲಿ ರಾಜ್ಯ ಯಾವ ದಿಶೆಯಲ್ಲಿ ಮುನ್ನಡೆದಿದೆ ಸಾಲ ಎಷ್ಟು ಕೋಟಿ ರೂಪಾಯಿ ಹೆಚ್ಚಾಗಿದೆ ಈ ವಿಷಯಗಳನ್ನು ಅಂಕಿ ಅಂಶಗಳೊಡನೆ ಕೊಟ್ಟಿದ್ದಾರೆ. ಅವರು ಕನ್ನಡದಲ್ಲಿಯೇ ಮಾತನಾಡಿದರು. ನನಗೆ ನಿಜವಾಗಿಯೂ ಕಣ್ಣು ಹನಿ ತುಂಬಿ ಬಂತು, ಗಂಟಲು ಬಿಗಿದಿತ್ತು. ಅದಕ್ಕೆ ಕಾರಣ ಗೊತ್ತಿಲ್ಲ ಅವರು ಸತ್ಯವನ್ನೇ ನುಡಿದಿದ್ದಾರೆ. ಎನ್ನುವುದು ಬಹುಶ: ಕಾರಣವಿರಬಹುದು. ಈ ರಾಜ್ಯದ ಹಿತದ ಬಗ್ಗೆ ಮಾತನಾಡಿದ್ದಾರೆ ಇವತ್ತು ಯಾವ ರೀತಿ ರಾಜ್ಯದ ಹಿತಕ್ಕೆ ಧಕ್ಕೆ ಬಂದಿದೆ ಎನ್ನುವುದನ್ನು ಅವರು ಮನಮುಟ್ಟುವಂತೆ ಹೇಳಿದ್ದಾರೆ. ಕೆಲವರು ಮಾನ್ಯ ಸ್ನೇಹಿತರು, ಆಳುವ ಪಕ್ಷದವರು ಎದ್ದು ನಿಜಲಿಂಗಪ್ಪನವರ ಉಪ್ಪು ತಿಂದಿಲ್ಲ ಈ ರೀತಿ ಹೇಳಬೇಡಿ ಎಂದು ಎದ್ದು ನಿಂತು ಹೇಳಿದರು. ರಾಜಕಾರಣದಲ್ಲಿ ನಿಯಮಗಳು ಮತ್ತು ಶಿಸ್ತು ಇರುವುದರಿಂದ ಅನೇಕ ಸಲ ಆತ್ಮವಂಚನೆ ಮಾಡಿದರೂ ಕೂಡ ಸತ್ಯ ನುಡಿಯದೇ ಇರತಕ್ಕಂಥ ಅನಿವಾರ್ಯ ಪರಿಸ್ಥಿತಿ ಇದೆ ಎಂದು ನಾನು ಮನಗಂಡಿದ್ದೇನೆ. ಈ ಕಾರಣಕ್ಕಾಗಿ ಶ್ರೀಮಾನ್ ಶಿವಪ್ಪನವರು ತಂದಿರತಕ್ಕಂಥ ಸೂಚನೆಗೆ ಧೈರ್ಯನಾಗಿ ಸತ್ಯ ಎತ್ತಿ ಹಿಡಿಯುತ್ತೇನೆ ಎಂಬ ಮನವರಿಕೆಯಿಂದ ನಂಬಿಕೆಯಿಂದ ಕೈ ಎತ್ತಲಾರರು ಎಂಬ ಸಂದೇಹ ನಮಗೆ ಇದೆ. ನಾವು ಅಷ್ಟೇನೂ ದಡ್ಡರಲ್ಲ. ಆದರೆ ಅವರು ಮಾತುಗಳನ್ನು ಕೇಳದಂತೆ ಸದಸ್ಯರಿಗೆ ಅವರಿಗೆ ಆ ಸಂದರ್ಭದಲ್ಲಿ ಅವರ ಮನಸ್ಸಿನಲ್ಲಿ ಹೊಟ್ಟೆಯೊಳಗೆ ತೊಲಸುವುದು ಎಂದು ಹೇಳುವ ಹಾಗಾಗುತ್ತದೆ. ಪ್ರತಿಕ್ರಿಯೆ ನೋಡಿದರೆ ಅವರ ಮಾತುಗಳನ್ನು ಅಕ್ಷರಶ: ಒಪ್ಪಿದಂತೆ ಎಂದು ಕಾಣುತ್ತಿತ್ತು. ಏನೇ ಇರಲಿ ಅವಿಶ್ವಾಸ ನಿರ್ಣಯ ಮಂಡಿಸತಕ್ಕಂಥ ಸಂವಿದಾನಾತ್ಮಕವಾಗಿರತಕ್ಕಂಥ ಹಕ್ಕು ದುರುಪಯೋಗಪಡಿಸಿದ್ದಲ್ಲ. ಮಹಾಚುನಾವಣೆಗಳಾದ ಮೇಲೆ ಈ ವರ್ಷ ಶ್ರೀಮಾನ್ ನಿಜಲಿಂಗಪ್ಪನವರು ಒಪ್ಪಿಕೊಂಡ

ವಿಧಾನ ಸಭೆ ನಡವಳಿಕೆ: ದಿನಾಂಕ 23.12.1967



ಗಾಗೆ ಕಾಂಗ್ಸೆಸ್ ಸೋಲಿಗೆ ಕಾರಣ ಗೊತ್ತಿದೆ. ಅವರು ಸ್ವಾಗತಿಸುವ ರೀತಿಯಲ್ಲಿ ಹೇಳಿದ್ದಾರೆ. ಬಹಳ ಸಂತೋಷದ ವಿಷಯ. ಕೆಲವೊಮ್ಮೆ ಅವರು ನಿಜವನ್ನು ಹೇಳಬೇಕಾಗುತ್ತದೆ. ನಮ್ಮ ರಾಜ್ಯದಮಟ್ಟಿಗೆ ಹೇಳಬೇಕು ಅಂದರೆ, ಶ್ರೀಮಾನ್ ಸಿದ್ದವೀರಪ್ಪನವರು ಒಂದು ಮಾತು ಹೇಳಿದರು. ಶ್ರೀಮಾನ್ ನಿಜಲಿಂಗಪ್ಪನವರು ಮುಖ್ಯಮಂತ್ರಿಯಾಗಿ ಮುಂದುವರಿದರೆ ಇಲ್ಲಿ ಕಾಂಗ್ಸೆಸ್ ಆಡಳಿತಕ್ಕೆ ಚರಮಗೀತೆ ಬೇಗ ಹಾಡಲು ಸಾಧ್ಯವಾಗುವುದು ಎಂದು ಹೇಳಿದರು; ಸ್ಫೂರ್ತಿ ಬರುತ್ತದೆ ಎಂದು ಹೇಳಿದರು. ನಾನಾದರೂ ಭಾವಿಸುತ್ತೇನೆ ಅಖಿಲಭಾರತ ಮಟ್ಟದಲ್ಲಿ ಶ್ರೀ ನಿಜಲಿಂಗಪ್ಪನವರ ಕಾಲದಲ್ಲಿ ಕಾಂಗ್ರೆಸ್ ಆಡಳಿತ ಚರಮಗೀತೆ ಹಾಡಲಾಗುತ್ತದೆ. ಅದಕ್ಕಾಗಿ ಹೋಗುತ್ತಾರೆ ಎಂದು ನನಗೆ ಅನಿಸುತ್ತದೆ. ಈ ಮಾತು ಹೇಳುವಾಗ ನನಗೆ ಸಂತೋಷವಾಗುವುದಿಲ್ಲ. ಕರ್ನಾಟಕದ ಒಬ್ಬ ನಾಯಕ ಅಖಿಲಭಾರತ ಮಟ್ಟದಲ್ಲಿ ಯಾವುದೇ ಸಂಸ್ಥೆ ನಾಯಕನಾಗಿ ಆಯ್ಕೆಯಾಗಿದ್ದಾರೆ ಅಂದರೆ ಸ್ವಾಭಾವಿಕವಾಗಿ ನಮಗೆ ಹೆಮ್ಮೆ ಸಂತೋಷವಾಗುತ್ತದೆ. ಸ್ವಾಭಾವಿಕವನಾಗಿ ಅವರಿಗೆ ಶುಭ ಕೋರುವುದು ನಮಗೆ ಎಂದು ಸಾಮಾನ್ಯವಾದ ಕೆಲಸ. ಇವತ್ತು ಇದನ್ನು ಮಾಡಲಾರದ ಸ್ಥಿತಿಗೆ ನಾವು ನಿಜಲಿಂಗಪ್ಪನವರನ್ನು ಕರೆದುಕೊಂಡು ಬಂದುಬಿಟ್ಟಿದ್ದೇವೆ. ಇದು ವ್ಯಸನಕರ ವಿಷಯ. ಅದನ್ನು ನಾವು ವಿಷಾದದಿಂದ ಹೇಳಬೇಕಾಗಿದೆ. ಕಾರಣ ಏನೇನೋ ಇದ್ದರೂ ವೈಯಕ್ತಿಕವಾಗಿ ಇಲ್ಲವಲ್ಲ. ಯಾರಾದರೂ ಇದು ವೈಯಕ್ತಿಕನಾಗಿ ಇದೆ ಎಂದು ತಿಳಿದುಕೊಂಡಿದ್ದರೆ ಅದು ದೊಡ್ಡ ತಪ್ಪು ಅಭಿಪ್ರಾಯ. ಇಲ್ಲಿ ನಮ್ಮ ಅವರ ಮಧ್ಯೆ ವ್ಯವಹಾರ ನಡೆದಿಲ್ಲ. ಅವರ ಆಸ್ತಿ ನಮ್ಮ ಆಸ್ತಿಪಾಲು ಹಿಸ್ಸೆ ಆಗಿಲ್ಲ. ಏನಾದರೂ ಅನುಚಿತವಾದ ಪರಸ್ಪರ ವರ್ತನೆ ನಡೆದಿಲ್ಲ. ಅದೇರೀತಿ ಮಂತ್ರಿಮಂಡಲದಲ್ಲಿಯ ಬೇರೆ ಮಂತ್ರಿಗಳ ಬಗ್ಗೆ ಕೂಡ. ಇಲ್ಲಿ ನಮ್ಮ ಕರ್ತವ್ಯ ಮಾಡಬೇಕಾಗಿದೆ. ಸರಕಾರ ಮಾಡತಕ್ಕಂಥ ಕೆಲಕ ವಿರೋಧ ಪಕ್ಷದವರಾದ ನಾವು ಆರಿಸಿ ಬಂದು ಈ ರಾಜ್ಯದ ಹಿತಾಸಕ್ತಿ ಎತ್ತಿ ಹಿಡಿಯತಕ್ಕಂಥ ಹೊಣೆ, ಕರ್ತವ್ಯ ಸರಕಾರದ ಮೇಲೂ ನಮ್ಮ ಮೇಲೂ ಇರುತ್ತದೆ. ಇದೆ. ಇಲ್ಲಿ ಶ್ರೀ ನಿಜಲಿಂಗಪ್ಪನವರ ಮಂತ್ರಿಮಂಡಲದ ಮೇಲೆ ಹಿಂದೆ ನಾವು ಆಪಾದನೆ ಪಟ್ಟಿ ಕಳಿಸಿದ್ದೆವು. ಇಲ್ಲಿ ಆಗ್ಗೆ ಗುಲಜಾರಿ ಲಾಲ ನಂದಾ ಅವರು ಬೆಂಗಳೂರಿಗೆ ಬಂದಿದ್ದರು. ಅವರಿಗೆ ಕೊಟ್ಟು ಬಿಟ್ಟೆವು. ಆಗ್ಗೆ ಅವರು ಕೇಂದ್ರದಲ್ಲಿ ಗೃಹಮಂತ್ರಿಗಳಾಗಿದ್ದರು. ಅದು ಆದಮೇಲೆ ಕೇಂದ್ರದಲ್ಲಿ ರಾಷ್ಟ್ರಾಧ್ಯಕ್ಷರನ್ನು ಹಿಡಿದು ಎಲ್ಲ ಜವಾಬ್ದಾರಿ ಸ್ಥಾನದಲ್ಲಿರತಕ್ಕಂಥ ಜನರಿಗೆ ಕೊಟ್ಟಿದ್ದೇವೆ. ಅದು ಒಂದು ದೃಷ್ಟಿಯಿಂದ ತಪ್ಪೂ ಆಗಬಹುದು. ಯಾವ ದೃಷ್ಟಿಯಿಂದ ಎಂದರೆ, ಏನೇ ತಪ್ಪು ನಡೆಯುತ್ತಿರಲಿ, ದುಷತ್ಯಗಳೇ ನಡೆಯುತ್ತಿರಲಿ, ರಾಜ್ಯದ ಹಿತದೃಷ್ಟಿಯಿಂದ ಎಲ್ಲರೂ ಒಂದಾಗಿ ಕೇಂದ್ರದವರಿಂದ ಹಣ್ಣು ತೆಗೆದುಕೊಂಡು ಅವರನ್ನು ಹೆದರಿಸುವುದು ಅವರಿಂದ ನಾವು ಕೆಲಕ ತೆಗೆದುಕೊಳ್ಳುವುದು, ಇಂಥ ಒಗ್ಗಟ್ಟು ಇರಬೇಕು ಎಂದು ಬಹಳ ಸಲ ಹೇಳುತ್ತಾರೆ. ಆ ಒಗ್ಗಟ್ಟಿಗೆ ನೀವು ಕೊಟ್ಟ ಆಪಾದನೆ ಪಟ್ಟಿ ಅಡ್ಡಿಯಾಯಿತು. ಅವರ ದೃಷ್ಟಿಯಲ್ಲಿ ನಾವು ತಪ್ಪಿತಸ್ಥರಾದೆವು, ನಾವು ಅವರ ಹತ್ತಿರ ಏನೂ ಕೇಳುವುದಕ್ಕೆ ಆಗಲಿಲ್ಲ. ಅದನೇ ಅವರು ಒಂದು ಅಸ್ತ್ರವನ್ನಾಗಿ ನಮ್ಮ ಮೇಲೆ ಪ್ರಯೋಗ ಮಾಡುತ್ತಿದ್ದಾರೆ ಎನ್ನುವ ಮಾತುಗಳನ್ನು ಬೇರೆ ಕಡೆಯಿಂದ ಹೇಳಿದ್ದಾರೆ. ಹೀಗೆ ಆಗಬಾರದಾಗಿತ್ತು ಎಂದು ವಾಸ್ತವವಾಗಿ ಇವತ್ತು

ದೇಶದಲ್ಲಿ ಶ್ರೀ ನಿಜಲಿಂಗಪ್ಪನವರಿಗೆ ಏನು ನಡೆದಿದೆ, ನಡೆಯುತ್ತಿದೆ ಎನ್ನುವುದು ಕಾಣುತ್ತಿಲ್ಲ, ಕೇಳುತ್ತಿಲ್ಲ ಎನ್ನುವಷ್ಟು ದೂರ ನಾನು ಹೋಗುವುದಿಲ್ಲ ಬಹುಶ: ಅವರು ಅದನ್ನು ತಿಳಿದೂ ತಡೆಗಟ್ಟಲಿಕ್ಕೆ ಅಸಮರ್ಥರೂ ಆಗಿರಬಹುದು. ಆದರೆ ಶ್ರೀಮಾನ್ ಸಿದ್ದವೀರಪ್ಪನವರು ಏನು ಹೇಳುತ್ತಾರೋ ಗೊತ್ತಿಲ್ಲ. ನನ್ನ ಅಭಿಪ್ರಾಯದಲ್ಲಿ ಈ ರೀತಿ ಮಾಡುವಂಥದೇ ಸರಿ ಎನ್ನುವ ತೀರ್ಮಾನಕ್ಕೆ ಬಂದು ಹಾಗೆ ಮಾಡುತ್ತಿದ್ದಾರೋ ಏನೋ ಎನ್ನುವ ಶಂಕೆ ಬರುತ್ತದೆ. ಎಚ್ಚರಿಕೆ ಇಲ್ಲದವನನ್ನು ಎಚ್ಚರಿಸಬಹುದು, ನಿದ್ರೆ ಬಂದಿರುವವನಂತೆ ನಟಿಸುವವನನ್ನು ಎಚ್ಚರಿಸುವುದು ಸಾಧ್ಯವಿಲ್ಲ. ಹೀಗೆ ಆಗಿರಬಹುದು ಎನ್ನುವುದು ನಮಗೆ ಈಗ ದೊಡ್ಡ ಅನುಮಾನ, ಸಂದೇಹ ಬಂದಿದೆ. ಈ ಆಪಾದನೆ ಪಟ್ಟಿಗಳಲ್ಲಿ ಹುರುಳಿಲ್ಲ ಎಂದು ಹೇಳಿದರು. ಅದನ್ನು ವಿಚಾರಣೆ ಮಾಡಿಸುವುದಕ್ಕೆ ಏನೂ ಹೆಚ್ಚು ಖರ್ಚಾಗುವುದಿಲ್ಲ. ಎಷ್ಟೋ ಕೋಟಿ ರೂಪಾಯಿಗಳು ಯಾವ ಯಾವುದಕ್ಕೋ ಖರ್ಚಾಗುತ್ತವೆ, ವಿಚಾರಣೆ ಮಾಡಿಸಬೇಕಾದ್ದು, ಆ ಆಪಾದನೆ ಯಾರ ಮೇಲೆ ಹೊತ್ತಿರುತ್ತದೋ ಅವರ ಹಿತದೃಷ್ಟಿಯಿಂದರೇ ಬಹಳ ಅಗತ್ಯ. ರಾಮನ ಹೆಂಡತಿ ಸೀತೆಯ ಬಗ್ಗೆ ಒಬ್ಬ ಅಗಸ ಎಷ್ಟೋ ಒಂದು ಕಡೆ ಸ್ವಲ್ಪ ಮೂದಲಿಸಿ ಮಾತನಾಡಿದ್ದನೇನೇ ಕೇಳಿ ರಾಮ ಸೀತೆಯನ್ನು ಅಗ್ನಿಪರೀಕ್ಷೆಗೆ ಗುರಿಪಡಿಸುತ್ತಾನೆ ಮತ್ತು ಕಡೆಗೆ ಕಾಡಿಗೆ ಅಟ್ಟುತ್ತಾನೆ, ಕೊಂದು ಹಾಕಿಬಾ ಎಂದು ಲಕ್ಷ್ಮಣನಿಗೆ ಆಜ್ಞೆ ಮಾಡುತ್ತಾನೆ. ಗಾಂಧೀಜಿಯವರು ರಾಮ ರಾಜ್ಯದ ಕನಸು ಈ ನ್ಯಾಯ ನಿಷ್ಠುರತೆ ನಮ್ಮಲ್ಲಿ ಬರಬೇಕು ಎನ್ನುವುದನ್ನು ಸಾರುತ್ತದೆ ಎಂದು ನಾನು ತಿಳಿದುಕೊಂಡಿದ್ದೇನೆ. ಹಾಗೆಯೇ ನಿಜಲಿಂಗಪ್ಪನವರು ಸೀಜರನ ಪತ್ನಿ ಯಾವಾಗಲೂ ಅನುಮಾನಕ್ಕೆ ಗುರಿಯಾಗಬಾರದು, ಅದಕ್ಕೆ ಅವಕಾಶವನ್ನೇ ಕೊಡಬಾರದು ಎನ್ನುವ ಮಾತು ಏನಿದೆ ಹಾಗೆ ನಿಜಲಿಂಗಪ್ಪನವರೂ ರಾಜ್ಯವನ್ನು ನಡೆಸಬೇಕು ಎನ್ನುವುದೇ ನಮ್ಮ ಅಭಿಪ್ರಾಯ. ಸಡೆಸಬೇಕಾಗಿತ್ತು; ಏಕೆಂದರೆ ಅದು ಭೂತಕಾಲಕ್ಕೆ ಸೇರಿಹೋಯಿತು. ಆದುದರಿಂದ ಈ ಆಪಾದನೆಗಳಲ್ಲಿ ಹುರುಳಿಲ್ಲ ಎಂದು ಯಾರು ಯಾರಿಂದಲೋ ಸರ್ಟಿಫಿಕೇಟುಗಳನ್ನು ತಂದು ಬೆಳಕಿಗೆ ಬಿಟ್ಟರು. ಅದರಿಂದ ಏನಾಯಿತು ಎಂದರೆ, ಶರಾವತಿಯಲ್ಲಿ ನಡೆದಿದ್ದರೆ ಹತ್ತು ಪಾಲು ಭ್ರಷ್ಟಾಚಾರ ನಡೆಸುವುದಕ್ಕೆ ಎಲ್ಲರಿಗೂ ರಹದಾರಿ ಸಿಕ್ಕಿದಂತಾಯಿತು. ಅದೇ ರಹದಾರಿ, ಆಪಾದನೆ ಪಟ್ಟಿಯ ನಂತರ ನಮ್ಮ ರಾಜ್ಯದಲ್ಲಿ ಆ ಆಪಾದನೆಯ ಪಟ್ಟಿಯಲ್ಲಿ ಅಪಾದಿಸಲ್ಪಟ್ಟ ರೀತಿಯ ಘಟನೆಗಳು ಇನ್ನೂ ಹೆಚ್ಚು ರೂಪದಲ್ಲಿ ನಡೆದಿದೆ.

ಸ್ವಾಮಿ, ಶ್ರೀಮಾನ್ ನಿಜಲಿಂಗಪ್ಪನವರಲ್ಲಿ ನಾನು ಕೇಳುತ್ತೇನೆ. ಈ ಬಾಗಿಲುಕೋಟೆ ಪ್ರಕರಣವಿದೆಯಲ್ಲ, ಇನ್ನಾದರೂ ವಿಚಾರಣೆಯಾಗುತ್ತದೆ, ಆಗಬೇಕು, ಬಾಗಿಲುಕೋಟೆ ಪ್ರಕರಣ ಈ ದೇಶದಲ್ಲಿ ನಡೆದಿರಬಹುದಾದ ಅವ್ಯವಹಾರಗಳಲ್ಲಿ ಬಹಳ ದೊಡ್ಡದು. ಸೆಷೆನ್ಸ್‌ನಲ್ಲಿರುವ ಕೇಸುಗಳನ್ನು ಕೂಡ ಹಿಂದಕ್ಕೆ ತೆಗೆದುಕೊಂಡಿದ್ದಾರೆ. ಆತ ಡೈರಿಯಲ್ಲಿ ಬರೆದಿದ್ದಾನೆ, ಅದರಲ್ಲಿ ಶ್ರೀ. ಎಸ್.ಕೆ. ಪಾಟೀಲರ ಹೆಸರಿದೆ. ಶ್ರೀ ಮನೋಭಾಯಿ ಷಾ ಅವರ ಹೆಸರಿದೆ, ಶ್ರೀಮಾನ್ ನಿಜಲಿಂಗಪ್ಪನವರ ಹೆಸರಿದೆ. ಅದು ಕೋರ್ಟಿನ ಮುಂದೆ ಹಾಜರುಪಡಿಸಿದಂಥ ಡೈರಿ. ಒಂದು ಲಕ್ಷಕ್ಕೆ ಮೇಲ್ಪಟ್ಟು ಹಣ ಕೊಟ್ಟಿದ್ದಾರೆ. ಶ್ರೀಮಾನ್ ಜತ್ತಿ ಅವರಿಗೆ ಇದೆಲ್ಲ ಗೊತ್ತು, ಚೆನ್ನಾಗಿ ಗೊತ್ತು ಅವರು ಗೃಹ ಮಂತ್ರಿಗಳೂ ಆಗಿದ್ದರು.



ಕೇಸುಗಳನ್ನು ವಾಪಸ್ಸು ತೆಗೆದುಕೊಳ್ಳುವುದರ ಬಗ್ಗೆ ಎಷ್ಟೊಂದು ಒತ್ತಡ ಮೇಲಿನಿಂದ ಬಂದಿದೆ. ಹೇಗೆ ಅವರು ವಾಪಸ್ಸು ತೆಗೆದುಕೊಂಡರು ಎನ್ನುವುದು ಒಂದು ದೊಡ್ಡ ಕರ್ಮಕಾಂಡ. ಇದು ನಡೆಯುತ್ತಿರುವಾಗಲೇ 10 ಲಕ್ಷ ರೂಪಾಯಿಗಳಷ್ಟು ಷೇರುಗಳನ್ನು ಕೊಂಡು, ಯಾರಮೇಲೆ ಆಪಾದನೆ ಹೊತ್ತಿತ್ತೋ ಆತನನ್ನೇ ಪುನ: ಡೈರೆಕ್ಟರ್ ಮಾಡುವುದಕ್ಕೆ ಸಹಾಯ ಮಾಡಿದರು. ಈಗ ವಿಚಾರಣೆ ನಡೆಯುತ್ತಿದೆ. ಅವರು ಡೈರೆಕ್ಟರಾಗಿಲ್ಲ. ಈಗ ಕೂಡ ನಾನು ಬಹಳ ಕೇಳಿದ್ದೇನೆ. ಈ ಒಂದು ಕೇಸನ್ನೂ ವಾಪಸ್ಸು ಪಡಿಸುವುದರಲ್ಲಿದ್ದಾರೆ. ಶ್ರೀ ನಿಜಲಿಂಗಪ್ಪನವರಿಗೂ ಗೊತ್ತಿದೆ. ಐದು ಲಕ್ಷ ರೂಪಾಯಿಗಳ ತನಕ ಆತ ಕೊಟ್ಟಿದ್ದಾನೆ. ಯಾರಿಗೋ ಎಂದು ಕೇಳುತ್ತೇವೆ. ಇಂಥದ್ದು ಎಷ್ಟೋ, ಏಕೆಂದರೆ ಸರ್ಕಾರದವರು ಸಿಬ್ಬಂದಿಯನ್ನು ಹಾಕಿ, ಪೋಲೀಸ್ ಅಧಿಕಾರಿಯನ್ನು ಹಾಕಿ ತಪ್ಪುಗಳನ್ನು ಹುಡುಕಿ ಚಾರ್ಜ್‌ಷೀಟು ಹಾಕಿದ್ದಾರೆ ಮತ್ತು ಅದಕ್ಕೆ ನಾವು ಹಣವನ್ನು ಬಜೆಟ್ಟಿನಿಂದ ಕೊಟ್ಟಿದ್ದೇವೆ. ಸ್ಪೆಷಲ್ ಇನ್‌ವೆಸ್ಟಿಗೇಷನ್ ನಡೆದಿದೆ. ಬಹುಶ: ಹಿಂದೆ, ಆ ಕಾಲದಲ್ಲಿ ಇದ್ದ ಗೃಹಮಂತ್ರಿಗಳಿಗೆ ಕೆಲಸ ಹೋಗುವುದಕ್ಕೂ ಅದೇ ಕಾರಣವೆಂದು ಕಾಣುತ್ತದೆ. ಇದು ಒಂದು ಪ್ರಕರಣ. ಅದರ ಬಗ್ಗೆ ವಿಚಾರಣೆ ಮಾಡಬೇಕು. ಅದರ ಬಗ್ಗೆ ಶ್ರೀ ನಿಜಲಿಂಗಪ್ಪನವರು ಮತ್ತು ಅವರ ಮಂತ್ರಿ ಮಂಡಲದವರು ಏನೂ ಕೈವಾಡಮಾಡಿಲ್ಲ ಎನ್ನುವುದನ್ನು ಲೋಕಕ್ಕೆ ಸಾಬೀತುಪಡಿಸಿ ಕೊಡಬೇಕು; ನಾವು ಇಲ್ಲಿ ಮನರಜನೆಗಾಗಿ ಇದನ್ನೆಲ್ಲ ಪ್ರಸ್ತಾಪ ಮಾಡುತ್ತಿಲ್ಲ. ನೀವು ಯಾವ ಗಾಜಿನ ಮನೆಯಲ್ಲಿದ್ದೀರೋ ಅದೇ ಗಾಜಿನ ಮನೆಯಲ್ಲಿ ನಾನೂ ಇದ್ದೇನೆ. ನೀವು ಯಾವ ಬೆಂಕಿಯಲ್ಲಿ ಪ್ರವೇಶ ಮಾಡಬಹುದೋ ಅದೇ ಬೆಂಕಿಯಲ್ಲಿ ಪ್ರವೇಶಮಾಡುವುದಕ್ಕಾಗಿ ಇದ್ದೇನೆ. ನಮಗೂ ತ್ರಿಕರಣಗಳಿವೆ. ಸ್ವಚ್ಛತೆ ಎಲ್ಲಿಂದ ಆರಂಭವಾಗಬೇಕು ಕಾನ್‌ಸ್ಟೇಬಲ್‌ನಿಂದಲೋ, ಐ.ಜಿ.ಪಿ. ಅವರಿಂದಲೋ, ಗೃಹಮಂತ್ರಿಗಳಿಂದಲೋ? ಸ್ವಚ್ಛತೆ ಎಲ್ಲಿಂದ ಆರಂಭವಾಗಬೇಕು? ಆ ಒಂದು ತಲೆಕೆಳಗು ವ್ಯವಹಾರವೇ ದೇಶವನ್ನು ಈ ದುರ್ಗತಿಗೆ ತಂದು ಬಿಟ್ಟಿರತಕ್ಕುದ್ದು. ಶ್ರೀ ನೆಹರೂ ಅವರು ಅದನ್ನು ಅಖಂಡವಾಗಿ 18 ವರ್ಷ ಮುಂದೆ ತಳ್ಳಿಕೊಂಡು ಬಂದರು. ಅದರಿಂದ ಏನಾಯಿತು ಇವತ್ತು ಎಂದರೆ, ಯಾರನ್ನು ನಂಬಬೇಕು ಎನ್ನುವ ಪ್ರಶ್ನೆ ಬಂದಿದೆ. ವಿಶ್ವಾಸವನ್ನು ಕಳೆದುಕೊಳ್ಳುವಷ್ಟು ರೀತಿಯಲ್ಲಿ ಭ್ರಷ್ಟಾಚಾರ, ಭ್ರಷ್ಟಾಚಾರ ಎಂದರೆ ಕಾಂಗ್ರೆಸ್ ಆಡಳಿತಕ್ಕೆ ಒಂದು ಬೇರೆ ಹೆಸರು. ಭ್ರಷ್ಟಾಚಾರ ಎಂದರೆ ಅದರ ಅನ್ವರ್ಥನಾಮ ಕಾಂಗ್ರೆಸ್ ಅಲ್ಲವೇ ಸ್ವಾಮಿ? 20 ವರ್ಷಗಳ ಅವಧಿಯಲ್ಲಿ ಎಷ್ಟು ವೇಗವಾಗಿ ನೀವು ಈ ಅಧ:ಪತನ ಮುಟ್ಟಿರಬಹುದು? ಏಕೆಂದರೆ, ಎಷ್ಟು ಪುಣ್ಯ ಮಾಡಿ ಬಂದದ್ದು ಇಷ್ಟು ಬೇಗ ನಷ್ಟವಾಗಬೇಕಾದರೆ ಎಷ್ಟು ಇಂಥ ಕರ್ಮಕಾಂಡಗಳು ನಡೆದಿರಬಹುದು ಸಾರ್ವಜನಿಕ ಕ್ಷೇತ್ರದಲ್ಲಿ ಇದು ಒಂದು ಬಹಳ ಪವಿತ್ರವಾದ ಕ್ಷೇತ್ರ ಎಂದು ತಿಳಿದುಕೊಳ್ಳಬೇಕು. ಇದು ಇಲ್ಲದೆ ಹೋದರೆ ಹೇಗೆ ಈ ದೊಡ್ಡ ದೊಡ್ಡ ಹೊಣೆಗಳನ್ನು ನಿರ್ವಹಿಸುವುದಕ್ಕೆ ಆಗುತ್ತದೆ? ಇದು ಬಹಳ ಮೂಲ ಪ್ರಶ್ನೆ. ಇದನ್ನು ನಾವು ಇವತ್ತು ಈ ಮಂತ್ರಿಮಂಡಲದ ಎದುರು ಇಟ್ಟು ಸಾಬೀತು ಮಾಡುವುದಕ್ಕೆ ಸಿದ್ಧರಿದ್ದೇವೆ. ಇಂಥ ಪ್ರಕರಣದ ಬಗ್ಗೆ ವಿಚಾರಣೆ ಮಾಡಬೇಕು.

ಇನ್ನು ಹೆಗ್ಡೆಯವರು ಪ್ರವಾಸದ ವಿಚಾರ ಪ್ರಸ್ತಾಪಿಸಲ್ಪಟ್ಟಿದೆ, ಇದು ಬಹಳ ಗಂಭೀರವಾಗಿರುವ ವಿಷಯ. ಅವರಿನ್ನೂ ಮುಂದೆ ಬರುವವರು, ಭವಿಷ್ಯವಿರುವವರು. ಮಾನ್ಯ ಮಿತ್ರರು ಹೇಳಿದ ಪ್ರಕಾರ ನಡೆದಿದ್ದರೆ ಬಹಳ ತಪ್ಪಾಗುತ್ತದೆ, ಸರಕಾರಕ್ಕೆ ಕೆಟ್ಟ ಹೆಸರು ಬರುತ್ತದೆ. 17ನೆಯ ತಾರೀಖು ಕೇಳಿದ ಪ್ರಶ್ನೆಗೆ ಕೊಟ್ಟ ಉತ್ತರದಲ್ಲಿ 15ನೆಯ ತಾರೀಖು ಹೊರಟ ಆಜ್ಞೆಯ ಉಲ್ಲೇಖವಿಲ್ಲ; ಅದಿಲ್ಲದೆ ಒಂದು ರೀತಿಯ ತಪ್ಪ ಸೇರಿಸಿದ್ದಾರೆ. ಬಹಳ ದೊಡ್ಡ ಕಷ್ಟದ ಕೆಲಸ ಇದೆಲ್ಲಾ. ತಾರೀಖು ಮುಂತಾದ್ದನ್ನೆಲ್ಲಾ ಹೇಳಿದ್ದಾರೆ, ಓದಿದ್ದಾರೆ. ದೆಹಲಿಗೆ ಹೋದರೆ ಅಶೋಕ ಹೋಟಲಿನಲ್ಲಿಯೇ ಉಳಿಯುತ್ತಾರೆ, ಹಣ ಖರ್ಚುಮಾಡುತ್ತಾರೆ. ಸ್ವತ: ಅವರಿಗೆ ಶಕ್ತಿಯಿದೆ, ಉಳಿಯಬಹುದು ಸಕರಾರದ ಹಣ ಖರ್ಚುಮಾಡಿದ್ದರೆ ಅದು ಸೂಕ್ಷ್ಮವಾದ ವಿಷಯ. ತಮಗೆಲ್ಲಾ ಸೂಕ್ಷ್ಮವಾದ ವಿಷಯಗಳು ಅರ್ಥವಾಗುತ್ತವೆ. ಆದುದರಿಂದ ಸೂಕ್ಷ್ಮವಾಗಿಯೇ ಹೇಳುತ್ತೇನೆ. ದೇಶದಲ್ಲಿ ಅವಮಾನಕರ ಸ್ಥಿತಿ ಇದೆ. ತಾಳಗುಪ್ಪೆಗೆ ಹೋಗಿ ಮೂರನೆ ದರ್ಜೆ ಡಬ್ಬ ನೋಡಿ, 20 ವರ್ಷದ ಇತಿಹಾಸವೇನಿದೆ, ಎಷ್ಟು ಜವರು ಕೂಡಬೇಕಾದ ಕಡೆ ಎಷ್ಟು ಜನರು ಕೂಡುತ್ತಾರೆ ಎಂಬುದನ್ನು ನೋಡಬೇಕು, ಈಗ ಒಂದಕ್ಕೆ ಮೂರರಷ್ಟು ಪ್ರಯಾಣಿಕರ ಸಂಖ್ಯೆ ಹೆಚ್ಚಿದೆ. ಹಿಂದೂಸ್ತಾನದ ಏರ್‌ಪೋರ್ಟಿಗೆ ಹೋಗಿ ನೋಡಿ, ನಾನು ಹಳ್ಳಿಗಳಲ್ಲಿ ಭಾಷಣ ಮಾಡುವಾಗ ಏರೋಪ್ಲೇನಿನ ಬಳಿ ನೂಕುನುಗ್ಗಲು, ಬಸ್‌ಸ್ಟ್ಯಾಂಡಿನಲ್ಲಿರುವುದಕ್ಕಿಂತ ಜಾಸ್ತಿ ಇರುತ್ತದೆ, 3 ದಿವಸ ಮುಂಚೆಯೇ ಸೀಟನ್ನು ಕಾದಿರಿಸಿಕೊಳ್ಳಬೇಕು ಎಂದು ಹೇಳುತ್ತೇನೆ. ಇಂಗ್ಲೆಂಡಿಗೆ ನಮ್ಮ ಜನರು ಹೋಗುವುದು ಬರುವುದು ಜಾಸ್ತಿಯಾಗಿದೆ ಎಂದು ಯಾರೋ ಬರೆದಿರುವುದನ್ನು ಸಿದ್ಧವೀರಪ್ಪನವರು ಹೇಳಿದರು. ಈ ದಿವಸ ರೈಲುವೆ ಇಲಾಖೆಯ ಒಬ್ಬ ಛೋಟಾ ಅಧಿಕಾರಿ ಸೆಲೂನಿನಲ್ಲಿ ಹೋಗುತ್ತಾ ಅಲ್ಲಿ ಎಲ್ಲ ಸೌಕರ್ಯವನ್ನೂ ಪಡೆಯುತ್ತಾನೆ, ಹಿಂದೆ ರಾಜರುಹಾಗೆ ಹೋಗುತ್ತಿದ್ದರು. ಹೀಗೆ ಒಬ್ಬ ಛೋಟಾ ಅಧಿಕಾರಿಗೆ ರೈಲ್ವೆಯಲ್ಲಿ ದೊಡ್ಡ ಗಾಡಿ ಕೊಡುತ್ತಾರೆ ನಮ್ಮ ರಾಜ್ಯದಿಂದ ಎಷ್ಟೋ ಡೈರೆಕ್ಟರುಗಳು, ಮ್ಯಾನೇಜಿಂಗ್ ಏಜೆಂಟರು, ಮ್ಯಾನೇಜರುಗಳು, ಡೆಪ್ಯುಟಿ ಡೈರೆಕ್ಟರು ವಿಮಾನದಲ್ಲಿ ಪ್ರಯಾಣ ಮಾಡುತ್ತಾರೆ. ಪ್ರತಿಯೊಬ್ಬರಿಗೂ ಯಾವುದೋ ಮಿಟಿಂಗಿಗೋಧ ಸಮ್ಮೇಳನಕ್ಕೋ ಹೋಗಬೇಕಾದ ಕೆಲಸವಿರುತ್ತದೆ, ಜಾಗ್ರತೆ ಹೋಗಬೇಕು, ಹೋಗುತ್ತಾರೆ. ನಿಮ್ಮ ಕಣ್ಣು ಎಲ್ಲಿದೆ, ಆಕಾಶದ ಕಡೆಯೋ ಅಥವಾ ಭೂಮಿಯ ಕಡೆಯೋ ನಿಮ್ಮ ಜನರು ಯಾರು, ಅವರ ಸ್ಥಿತಿಗತಿಯೇನು, ಜೀವನಪಟ್ಟ ಎಂಥದ್ದು ಎಂಬುದನ್ನು ತಿಳಿದುಕೊಳ್ಳಬೇಕು. ಕೆಲವರಿದ್ದಾರೆ, ಅವರ ಮನೆಗೆ ಯಾರಾದರೂ ನೆಂಟರು ಹೋದರೆ ಅವರಿಗೆ ಹೊದೆಯುವುದಕ್ಕೆ ಕೊಡಲು ಒಂದು ಕಂಬಳಿ ಕೂಡ ಅವರ ಬಳಿ ಇರುವುದಿಲ್ಲ; ಇರುವುದನ್ನು ಅವರಿಗೆ ಕೊಟ್ಟರೆ ಗಂಡ ಹೆಂಡತಿ ಸೀರೆ ಹೊದ್ದುಕೊಂಡು ಮಲಗಬೇಕು. ಇಂಥ ಸ್ಥಿತಿ ಇದೆ. ಈಗಲೂ ನೋಡಬಹುದು. 20 ವರ್ಷ ನಿಮ್ಮ ರಾಜ್ಯಭಾರವಾದರೂ ಅವರ ಸ್ಥಿತಿ ಸುಧಾರಿಸಲಿಲ್ಲ. ಪೆಟ್ರೋಲ್ ಬಂಕ್ ಮುಂತಾದುವನ್ನು ಇಟ್ಟುಕೊಂಡು ಅನುಕೂಲಸ್ಥರಾಗಿರುವ ಬಂಧುಗಳ ವಿಚಾರ ನಾನು ಹೇಳುತ್ತಿಲ್ಲ. ಅಂಥವರು ಒಳ್ಳೆಯ ಅನುಕೂಲ ಸ್ಥಿತಿಯಲ್ಲಿದ್ದಾರೆ, ಅವರನ್ನು ನೋಡಿದರೆ ತಲೆ ತಿರುಗುತ್ತದೆ. ಅದೇ ಹಳ್ಳಿಗಳಿಗೆ ಹೋದರೆ ಹೋದ 2 ದಿವಸಗಳ ಮೇಲೆ ನಮಗೆ



ಅಂದಾಜಾಗುವುದು ಇಲ್ಲಿದ್ದರೆ ಗೊತ್ತಾಗುವುದಿಲ್ಲ. ಇದು ಅಲ್ಲಿನ ಸ್ಥಿತಿ. ನಿಜಲಿಂಗಪ್ಪನವರು ಮಂತ್ರಿಮಂಡಲದಿಂದ ಹೋಗಿ ಅಲ್ಲಿಗೆ ಬೇರೊಬ್ಬರು ಬರುವ ಕಾಲದಲ್ಲಿ ಈ ಮಾತನ್ನು ನಾವು ಹೇಳಬೇಕು. ಶ್ರೀಮಾನ್ ಸಿದ್ಧವೀರಪ್ಪನವರು ಬಹಳ ಸುಂದರವಾಗಿ ಹೇಳಿದ್ದಾರೆ.

ಈ 20 ವರ್ಷಗಳಲ್ಲಿ ಪ್ರತಿಯೊಂದು ಇಲಾಖೆಯವರೂ ಕೂಡ ತಮ್ಮ ಜೀವನವನ್ನು ಸೃಷ್ಟಿಮಾಡಿಕೊಂಡಿದ್ದಾರೆ. ಇದಕ್ಕೆ ಯಾವ ಇಲಾಖೆಯೂ ಹೊರತಾಗಿಲ್ಲ. ಯಾವ ಅಂಗಡಿಯಲ್ಲಿ ಸರಕಾರ ಔಷಧಿ ಕೊಳ್ಳಬೇಕು ಎಂದು ಕೂಡ ನಿರ್ಧಾರವಾಗಿದೆ, ಹಾಗಿಲ್ಲದೆ ಬೇರೆ ಅಂಗಡಿಗಳಲ್ಲಿ ಕೊಂಡರೆ ತಲೆಹೋಗುತ್ತವೆ. ನಾರಾಯಣಗೌಡರೂ ವಿಚಾರಮಾಡಿ ನೋಡಬಹುದು. ಇಂಥ ಕಂಪೆನಿಯಲ್ಲಿ ಪವರ್ ಟಿಲ್ಲರ್ ತೆಗೆದುಕೊಳ್ಳಬೇಕು, ಇಂಥ ಕಡೆ ಗೊಬ್ಬರ ಪಡೆಯಬೇಕು, ಕಮೀಷನ್ ಆದಕ್ಕೆಷ್ಟು ಎಂಬುದೆಲ್ಲಾ ನಿಗದಿಮಾಡಿದೆ, ಇದೆಲ್ಲಾ ಬಹಳ ಚೆಂದಾಗಿದೆ. ಹೀಗೆ ಜನರನ್ನು ಶೋಷಣೆಮಾಡಿ ಸರಕಾರದ ಹಣದಲ್ಲಿ ಬೇಕಾದಷ್ಟು ಸಿಬ್ಬಂದಿ ನೇಮಕ ಮಾಡುತ್ತಾರೆ. ಜನತಾ ಬಜಾರುಗಳನ್ನು ತೆರೆಯುವುದು, ಲಕ್ಷಾಂತರ ಖರ್ಚುಮಾಡಿ ಕಮೀಷನ್ ಪಡೆಯುವುದು ಇದೆಲ್ಲಾ ನಡೆಯುತ್ತಿದೆ, ಎಲ್ಲಾ ಇಲಾಖೆಗಳಲ್ಲೂ ಇದೆ.

ಜತ್ತಿಯವರ ವ್ಯವಹಾರ ದೊಡ್ಡದು; ವ್ಯಾಪಾರಕ್ಕೆ ಬೊಕ್ಕಸದಿಂದ 27 ಕೋಟಿ ರೂಪಾಯಿಗಟಿನ್ನು ಕೊಟ್ಟಿದ್ದಾರೆ, ನೋಡಿದರೆ ಭಯವಾಗುತ್ತದೆ. ಕಂಟ್ರೋಲ್ ಕಾಲದಲ್ಲಿ ಸುಮಾರು 9 ಕೋಟಿ ರೂಪಾಯಿಗಳಿಗೆ ಲೆಕ್ಕ ಸಿಕ್ಕದೆ ಒಬ್ಬ ಅಧಿಕಾರಿ ನೇಮಕಮಾಡಿ 2-3 ವರ್ಷವಾದಮೇಲೆ ಸಾಧ್ಯವಿಲ್ಲವೆಂದು ಕೈಬಿಡಲಾಯಿತು. ಈಗ 2 ವರ್ಷಗಳಲ್ಲಿ ಲಾಭ ಬಂದಿದೆ, ಮಂತ್ರಿಗಳು ಹೇಳುವುದು ಲಾಭವೂ ಇಲ್ಲ, ನಷ್ಟವೂ ಇಲ್ಲ ಎಂದು, ಇಲಾಖೆ ಬೆಳೆಯುತ್ತಲೇ ಇದೆ, ಡೈರೆಕ್ಟರ ಮೇಲೆ ಡೈರೆಕ್ಟರು, ಸಿಬ್ಬಂದಿಯ ಮೇಲೆ ಸಿಬ್ಬಂದಿ ಬೆಳೆಯುತ್ತಲೇ ಇದೆ. ನೀವು 47 ರೂಪಾಯಿಗಳಿಗೆ ಭತ್ತಕೊಂಡು 99 ಪೈಸೆ ಒಂದು ಕಿಲೋ ಕೆಟ್ಟ ಅಕ್ಕಿಯನ್ನು ಕೊಡುತ್ತೀರಿ ಅದಕ್ಕೆ ಸೇಲ್ಸ್ ಟ್ಯಾಕ್ಸ್ ಬೇರೆ ಇದೆ. ಆದರೂ ಬೊಕ್ಕಸಕ್ಕೆ ಲಾಭ ತುಂಬಿಲ್ಲ. ಲಾಭ ಬಂದಿದೆ, ಮೊನ್ನೆ ಲೆಕ್ಕ ಕೊಟ್ಟಿದ್ದಾರೆ. ಎಷ್ಟೇ ಲಾಭ ಬಂದರೂ ಒಂದೇ ರೀತಿ ನಡೆಸುತ್ತಿದ್ದಾರೆ. ರೈತರ ಮನೆಗೆ ನುಗ್ಗಿ ಧಾನ್ಯವನ್ನು ನೀವು ಗೊತ್ತುಮಾಡುವ ಬೆಲೆಗೆ ತೆಗೆದುಕೊಳ್ಳುತ್ತೀರಿ. ಮಳೆಬೆಳೆಯಿಲ್ಲದಿದ್ದರೆ ಲೆವಿಇಲ್ಲ ಎಂದು ಸಚಿವರು ಹೇಳುವುದು ಬಲು ಚೆಂದ. ಸಣ್ಣ ರೈತರ ಹತ್ತಿರ ಹೋಗಿ ಅವರಿಗೆ ಎಷ್ಟೇ ಬೆಳೆಯಾದರೂ ಕೊಡಲೇಬೇಕೆಂದು ನಿರ್ಬಂಧಮಾಡಿ ತೆಗೆದುಕೊಂಡು ದೊಡ್ಡವರನ್ನು ಬಿಟ್ಟುಬಿಡುತ್ತಾರೆ. ಅವರಹತ್ತಿರ ಹೋಗುವುದಿಲ್ಲ. ಇಂಥ ಕಿರುಕುಳದ ಮತ್ತು ದಬ್ಬಾಳಿಕೆಯ ಲೇವಿ ನೀತಿಯನ್ನು ಅನುಸರಿಸುತ್ತಿರುವುದರಿಂದ ಈ ಸರಕಾರದಲ್ಲಿ ನಮಗೆ ವಿಶ್ವಾಸವಿಲ್ಲ. ಇದನ್ನು ಕೈಬಿಡಬೇಕು ಎಂದು ಹೇಳಲು ನಾನು ನಿಂತಿರುವುದು. ಇದೇ ರೀತಿ ಭೂಕಂದಾಯದ ವಿಚಾರವನ್ನು ರಾಜ್ಯಪಾಲರ ಬಾಯಿನಲ್ಲಿ ಹೇಳಿಸಿದ್ದಾರೆ. ಮಾನ್ಯ ಕಂದಾಯ ಸಚಿವರು ಹೇಳಿದ್ದಾರೆ. ಅನಂತರದಲ್ಲಿ ಆದರೂ ಮಾಡಿದ್ದಾರೆಯೇ ಎಂದರೆ ಅದೂ ಇಲ್ಲ. 60 ರೂಪಾಯಿಗಳ

ಕಂದಾಯ ಕೊಡುತ್ತಿದ್ದುದು ಇವತ್ತು 460 ರೂಪಾಯಿಗಳ ಕಂದಾಯ ಕೊಡುವಹಾಗೆ ಹೆಚ್ಚಿಸಿದ್ದಾರೆ. ಬಾಕಿ ಇರುವುದನ್ನು ವಸೂಲುಮಾಡಿ ಒಂದು ದೊಡ್ಡ ರೀತಿಯಲ್ಲಿ ಅದನ್ನು ತುಂಬಬೇಕು ಎಂಬುದಾಗಿ ಹೇಳುತ್ತಾರೆ. ಇದು ಇವರ ಕೈಲಿ ಶಕ್ಯವಿಲ್ಲ. ಈ ರೀತಿ ಮಾಡಕೂಡದು ಎಂದು ಹೇಳುವ ಮಾತಿನಲ್ಲಿ ವಚನಭ್ರಷ್ಟರಾಗಿದ್ದಾರೆ. ಒಟ್ಟಿನಲ್ಲಿ ಭೂಕಂದಾಯವನ್ನು ರದ್ದುಮಾಡಬೇಕು.

ಇನ್ನು ಭೂಸುಧಾರಣೆ ಬಗ್ಗೆ ಸುಮಾರು 20 ವರ್ಷಗಳಿಂದಲೂ ರೈತನ ಮೂಗಿಗೆ ತುಪ್ಪ ಹಚ್ಚಿ ಅವನನ್ನು ಇವತ್ತು ಕಾರಾಗೃಹಕ್ಕೆ ಪೋಲೀಸರು ಕರೆದುಕೊಂಡು ಹೋಗುವಂಥ ಕಾನೂನುಗಳು ದೇಶದಲ್ಲಿವೆ. ಚುನಾವಣೆಗಳು ಆದ ಮೇಲೆ ಹೊಸದನ್ನು ಈ ರಾಜ್ಯಕ್ಕೆ ಏನು ಕೊಟ್ಟಿದ್ದಾರೆ? ಈಗ ಅದೇ ಜನರು ಇರಬಹುದು ನೀವು ಕೊಟ್ಟ ಭರವಸೆ ಏನಾಯಿತು? ಮಾನ್ಯ ಶ್ರೀ ಸಿದ್ದವೀರಪ್ಪನವರು ಹೇಳಿದಂತೆ, ಅಮೃತಮಹಲ್ ಇತ್ಯಾದಿ ದೊಡ್ಡ ದೊಡ್ಡ ಕಾವಲುಗಳನ್ನು ಮಾರಾಟಮಾಡಿ ಹೆಚ್ಚಿಗೆ ದುಡ್ಡು ಮಾಡಿಕೊಂಡು ನಿಮ್ಮ ಕೆಲಸ ಮುಂದುವರಿಸಬೇಕು ಎಂದು ಇದ್ದೀರಿ. ಸಣ್ಣ ಪುಟ್ಟ ಕಂಟ್ರಾಕ್ಟರುಗಳಿಂದ ಸಿಗುವುದಿಲ್ಲ. ಮೋರಿ, ಮತ್ತು ಭಾವಿ ಕೆಲಸಗಳಿಂದ ಅಷ್ಟಾಗಿ ಸಿಗುವುದಿಲ್ಲ. 5, 10, 15 ಕೋಟಿ ರೂಪಾಯಿಗಳ ಕೆಲಸಕ್ಕೆ ಹೊಸಬ ಬಂದನೆಂದರೆ, ನೀವು ಹೇಳಿದಹಾಗೆ ಪರ್ಮಿಟ್ ಅವನಿಗೆ ಅವನು ಹೇಳಿದ ಟರ್ಮ್ಸ್ ನಿಮಗೆ, ಬಾಕಿಯವರೂ ಹತ್ತಿರ ಯಾರೂ ಬರುವಹಾಗೆ ಇಲ್ಲ. 50 ಅಣೆಕಟ್ಟುವುದು ಇದೆಯೇ ಎಂದರೆ, ಹೌದು ಎಂದು ಹೇಳುತ್ತಾರೆ. ಈ ರೀತಿ ಕೇಳುವಂತಹವನನ್ನೇ ಆ ಕೆಲಸಕ್ಕೆ ಬಿಡುತ್ತಾರೆ. ಏಕೆ ಅಂದರೆ ಆ 5 ಕೋಟಿಯಲ್ಲಿ ಒಂದೂವರೆ ಕೋಟಿಯಾದರೂ ಇವರು ಹೊಡೆಯಬಹುದು. ಅದಕ್ಕೆ ಸಂಬಂಧಪಟ್ಟ ಕಾಗದಗಳನ್ನು ಬಂದೋಬಸ್ತುಮಾಡಿ ಪತ್ರ ಸಮೇತ ಕೊಡಬಹುದು. ಸಣ್ಣಪುಟ್ಟ ಕೆಲಸಗಳು ಕಣ್ಣಿಗೆ ಬೀಳುವುದಿಲ್ಲ. ಸಣ್ಣ ಭಾವಿ ಸಣ್ಣ ಸ್ಕೂಲು, ಸಣ್ಣ ಮೋರಿ ಕೆಲಸಗಳನ್ನು ಮಾಡುವುದಕ್ಕೆ ಇವರಿಗೆ ಆಗದು, ಸಣಅಣ ಆಸ್ಪತ್ರೆಗಳಲ್ಲಿ ಡಾಕ್ಟರುಗಳು ಇಲ್ಲವೆಂದು ಹೇಳುತ್ತಾರೆ. ಇದನ್ನು ಹೇಳಲು ನನಗೆ ನಗುಬರುತ್ತದೆ. ಇವತ್ತು ಬಿರ್ಲಾರವರ ಏಜೆನ್ಸೀಸ್ ನಮ್ಮ ಮೈಸೂರು ಸಂಸ್ಥಾನದಲ್ಲಿ ಬೇಕಾದಷ್ಟು ಇವೆಯೆಂದು ನಾನು ಹೇಳಬೇಕಾಗಿದೆ. ತಾವು ಹೇಳಿದಿರಿ, ವಿಚಾರಣೆಯಾದರೆ ಇದು ಗೊತ್ತಾಗುತ್ತದೆಂದು, ಕೆಲವೊಂದು ಕೈಗಾರಿಕೆಗಳನ್ನು ಸ್ಥಾಪನೆಮಾಡಿಕೊಂಡು ಕೈಗಾರಿಕೆಗಳ ಪ್ರಗತಿಗೆ ಇಲ್ಲಿ ಧಕ್ಕೆತಂದಿರುವ ಜನಗಳಿಗೆ ಕೋಟ್ಯಾಂತರ ರೂಪಾಯಿಗಳನ್ನು ಸರ್ಕಾರದ ಬೊಕ್ಕಸದಿಂದ ಕೊಟ್ಟುದುರ ಫಲವಾಗಿ ಇಲ್ಲಿ ಬೇರೆ ಯಾವ ಕೈಗಾರಿಕೆಗಳೂ ಬೆಳೆಯುವುದಕ್ಕೆ ಸಾಧ್ಯವಿಲ್ಲ. ಇಲ್ಲಿರತಕ್ಕ ಹೆಚ್.ಎಂ.ಟಿ.ಯಲ್ಲಿ ಸಣ್ಣ ಕೈಗಾರಿಕೆಗಳು ಅವರ ಆಶ್ರಯದಲ್ಲಿ ಬೆಳೆಯುವ ಹಾಗಿಲ್ಲ. ಏಕೆಂದರೆ ಅವರ ನಿಯಂತ್ರಣದಿಂದ ಇದರ ಮಾರ್ಕೆಟನ್ನು ತಯಾರುಮಾಡಬೇಕು. 16 ಕೋಟಿ ರೂಪಾಯಿಗಳನ್ನು ನೀವು ಈಗ ಅವರಿಗೆ ಕೊಟ್ಟಿದ್ದೀರಿ. ಕ್ಷಯರೋಗ ಪೀಡಿತರಾದವರಿಗೆ ಏನು ಕೊಟ್ಟಿದ್ದೀರಿ? ಏನೂ ಕೊಟ್ಟಿಲ್ಲ. ಅಲ್ಲಿನ ರೋಗಿಗಳು ನಾಳೆ ಸಾಯುತ್ತಾರೆ. ಅಂತಹವರಿಗೆ ಯಾವ ರೀತಿಯ ಸಹಾಯವೂ ಇಲ್ಲ. ಆದ್ದರಿಂದ ಇದು ಕೈಗಾರಿಕೆ ನೀತಿಯಲ್ಲಿ ಮಾನ್ಯ ಶ್ರೀ. ನಿಜಲಿಂಗಪ್ಪನವರು ಇಲ್ಲಿದ್ದರೆ ನಮಗೆ ಒಂದು ಸ್ಫೂರ್ತಿ. ಅವರ ಸಣ್ಣಕಾರು ಕತೆ ಏನಾಯಿತು



ಎಂದು ಕೇಳುತ್ತೇನೆ. ಕೃಷ್ಣಾ ಮೇಲ್ದಂಡೆ ಕತೆ ಕೇಳಬೇಕೆಂದಿದ್ದೆ ಮತ್ತು ಕಾವೇರಿ ನೀರನ್ನು ಉಪಯೋಗಿಸುವುದು ಎಲ್ಲಿಗೆ ಬರುತ್ತದೆಂದು ಕೇಳಬೇಕೆಂದಿದ್ದೆ. ಕೆಲವರು ಕೃಷ್ಣಾ ನದಿ ಹಾಗೂ ಗೋದಾವರಿ ನೀರಿನ ಪಾಲಿನ ಬಗ್ಗೆ ಸ್ಪಷ್ಟವಾಗಿ ಹೇಳಿದ್ದಾರೆ. ಮಾನ್ಯಶ್ರೀ ನಿಜಲಿಂಗಪ್ಪನವರು ಅಧಿಕಾರದಲ್ಲಿರುವ ಹಿತ ದೃಷ್ಟಿಯಿಂದ ಶ್ರೀ. ಕೆ.ಎಲ್. ರಾವ್ ಅವರಿಗೆ ಬೇಸರ ಬರದು, ಕೇಂದ್ರ ಸರ್ಕಾರದ ಮಂತ್ರಿಗಳಿಗೆ ಬೇಸರವಾಗದಂತೆ, ಕೇರಳ ಮಂತ್ರಿಗಳಿಗೆ ಬೇಸರ ಬಾರದಂತೆ, ಇಂದಿರಾಗಾಂಧಿ ಮತ್ತು ನಮ್ಮ ಮುಖ್ಯ ಮಂತ್ರಿಗಳದು ಶ್ರೀ ಕೃಷ್ಣಾ ತುಲಾಭಾರವಾಯಿತು, ಅದಾದಮೇಲೆ ಚವಾಣರ ರಾಜ್ಯವಾಗಿತ್ತು. ಈಗ ಬ್ರಹ್ಮಾನಂದರೆಡ್ಡಿಯವರ ರಾಜ್ಯ. ಮಧ್ಯೆ ಸಿಕ್ಕಿದಂಥ ಜನರು ಬಿಜಾಪುರ ಮತ್ತು ಗುಲ್ಬರ್ಗಾದವರು. ಈ ಪ್ರದೇಶಗಳ ಜನರಿಗೆ ನೀವು ದ್ರೋಹ ಬಗೆದಿಲ್ಲವೇ ಎಂದು ಹೇಳುತ್ತೇನೆ. ಈ ಪರಿಸ್ಥಿತಿಯಾಗಿ ಅಲ್ಲಿ ನೀರು ಹೋಗುವಂಥ ಪರಿಸ್ಥಿತಿ ಬಂದರೆ ಈ ರಾಜ್ಯದ ಇತಿಹಾಸದಲ್ಲಿ ಕರಾಳ ಅಧ್ಯಾಯವಾಗುತ್ತದೆ. ಮತ್ತೆ ಅದನ್ನು ರಿಪೇರಿ ಮಾಡುವುದಕ್ಕಾಗುವುದಿಲ್ಲ. ಮಾನ್ಯ ಶ್ರೀ ಚನ್ನಬಸಪ್ಪನವರು ಮತ್ತು ಶ್ರೀ ನಂಜೇಗೌಡರು ಕೂಗಿದ್ದೇ ಕೂಗಿದ್ದು, ಇವರು ಉತ್ತರ ಕೊಟ್ಟಿದ್ದೇ ಕೊಟ್ಟಿದ್ದು. ಇದೇ ಮಂತ್ರಿಮಂಡಲ ಹೀಗೆಯೇ ಮುಂದುವರೆದರೆ ಈ ರಾಜ್ಯದ ಪರಿಸ್ಥಿತಿ ನಿಜವಾಗಿ ಹಾಗೂ ಶಾಶ್ವತವಾಗಿ ಅಪಾಯಕ್ಕೆ ತುತ್ತಾಗುತ್ತದೆ. ಆದ್ದರಿಂದ ನಿಮ್ಮ ನೀತಿಯನ್ನು ಬದಲಾಯಿಸಬೇಕು. ದುಂದಾಟವನ್ನು ನಿಲ್ಲಿಸಬೇಕೆಂಬುದಾಗಿ ಹೇಳುತ್ತೇನೆ. ಈಗಾಗಲೇ ಮಾನ್ಯ ಶ್ರೀ ರಾಮರಾವ್ ಅವರು ರಾಜೀನಾಮೆಯನ್ನು ಕೊಟ್ಟುಹೋಗಿದ್ದಾರೆ. ನಾವು ನಿಮ್ಮನ್ನು ರಾಜೀನಾಮೆ ಕೊಡಿ ಎಂಬುದಾಗಿ ಕೇಳುವುದು ಹಾಸ್ಯಾಸ್ಪದ ಉಂಟುಮಾಡಿದಂತಾಗುತ್ತದೆ. ಮನುಷ್ಯತ್ವ ಇದ್ದಪಕ್ಷದಲ್ಲಿ ನಾವು ಪದೇ ಪದೇ ಹೇಳುವುದರಿಂದ ಒಂದಲ್ಲ ಒಂದುಸಾರಿ ಮನುಷ್ಯರಂತೆ ವರ್ತಿಸುತ್ತೇವೆ. ಮಾನ್ಯ ಶ್ರೀ ರಾಮರಾವ್ ಅವರು ರಾಜೀನಾಮೆ ಕೊಡುತ್ತಾರೆಂಬುದು ಮೊದಲೇ ನಮಗೆ ಕಂಡುಬಂದಿದ್ದರೆ ನಾವು ಮಧುಗಿರಿಗೆ ಹೋಗುತ್ತಿರಲಿಲ್ಲ. ಆ ರೀತಿಯಾಗಿ ಒತ್ತಾಯವನ್ನೂ ಸಹ ಮಾಡುತ್ತಾ ಇರಲಿಲ್ಲ. ಮಾನ್ಯ ಶ್ರೀ ನಿಜಲಿಂಗಪ್ಪನವರು ಮಾನ್ಯ ಶ್ರೀ ಸಿದ್ಧವೀರಪ್ಪನವರ ಮಾತನ್ನು ಕೇಳಿದ್ದು ನನ್ನ ಕಣ್ಣೆದುರಿಗೆ ಬಂದಂತಾಗಿತ್ತು. ಅಂದಾಕ್ಷಣಕ್ಕೆ ನಾವೇನು ಗಂಡಹೆಂಡಿರೆ? ಏನೋ ಒಂದು ತತ್ವ ಇದು. ಅದನ್ನು ಮಾನ್ಯ ಶ್ರೀ ನಿಜಲಿಂಗಪ್ಪನವರು ಗ್ರಹಿಸಿದ್ದರೆ ಅವರು ಇಂದೆ ರಾಜೀನಾಮೆ ಕೊಡುತ್ತಿದ್ದರು. ನಾವೇನೂ ಶಾಶ್ವತರಾಗಿ ಗೂಟ ಹೊಡೆದುಕೊಂಡು ಇರುವುದಿಲ್ಲ ಜಗತ್ತೇನೋ ಇರುತ್ತದೆ. ನಾವೆಲ್ಲರೂ ಬೇಗ ಬೇಗ ಹೋಗುತ್ತೇವೆ. ಆದರೆ ನಾವು ನಡೆದ ದಾರಿ ಆದರ್ಶವಾಗಿರಬೇಕು. ನಮಗೆ ಎಷ್ಟುಕಾಲ ಹೇಳುವುದು, ಎಷ್ಟು ಸಲಹೆ ಹೇಳುವುದು, ಅಷ್ಟೂ ನಿಮಗೆ ಸಾಮಾನ್ಯವಿಷಯವಾಗಿದೆ. ಇದನ್ನು ನೋಡಿದರೆ ನನಗೆ ಆಶ್ಚರ್ಯವಾಗುತ್ತದೆ. ಇಂತಹ ಅವ್ಯವಹಾರಗಳು ಇಂತಹ ನೀತಿ, ಸರ್ಕಾರದ ಬೊಕ್ಕಸವನ್ನು ದೂರಮಾಡುವ ಕ್ರಮ, ಮತ್ತು ಬಡದೇಶದ ಬೊಕ್ಕಸದ ಬಗ್ಗೆ ಅಜಾಗರೂಕತೆಯಿಂದ ನೋಡುವ ಕ್ರಮ- ಇವುಗಳ ಬಗ್ಗೆ ನಾನು ಎಚ್ಚರಿಕೆ ಕೊಡುವುದಕ್ಕೆ ನಿಂದಿದ್ದೇನೆ. ಕೊನೆಯದಾಗಿ ಮತ್ತೊಂದುಸಾರಿ ಎಚ್ಚರಿಕೆ ಕೊಡುತ್ತೇನೆ. ಶ್ರೀಮಾನ್ ಸಿದ್ದವೀರಪ್ಪನವರು ಜನತೆಗೆ ಈಗಾಗಲೇ ಕರೆ

ಕೊಟ್ಟಿದ್ದಾರೆ. ಇವತ್ತು ಹತ್ತಿ ಉರಿಯುತ್ತಿದೆ ಬಂಗಾಳದಲ್ಲಿ, ಮದ್ರಾಸಿನಲ್ಲಿಯೂ ಉರಿಯುತ್ತಿದೆ. ಅದು ನಮ್ಮನ್ನು ಸುಡದೆ ಬಿಡುವುದಿಲ್ಲ. ಆದ್ದರಿಂದ ಕಾಲ ಮೀರುವುದಕ್ಕೆ ಮುನ್ನ ನೀವು ಜಾಗ್ರತರಾಗಬೇಕು; ಹೆಚ್ಚಿನ ಜವಾಬ್ದಾರಿಯನ್ನು ವಹಿಸಬೇಕು. ಈಗಾಗಲೇ ನೀವು ಮಾಡುತ್ತಿರುವ ತಪ್ಪುಗಳನ್ನು ತಿದ್ದಿಕೊಳ್ಳಬೇಕು. ಅಪ್ಯವಹಾರಗಳನ್ನು ನಿಲ್ಲಿಸಬೇಕು.

ಕೊನೆಯದಾಗಿ ಸ್ಟೀಲ್ ಕೋಟಾ ಒಂದನ್ನು ಕೊಟ್ಟರಿ, 10 ಸಾವಿರ ರೂಪಾಯಿಗಳ ಕೋಟಾ ಅವನ ಹತ್ತಿರ ಇದ್ದರೆ ಸಾಕು. ಅವನು ಯಾವ ಸ್ಟೀಲ್ ವ್ಯಾಪಾರ ಮಾಡುವವರನಾಗಿರಬೇಕಾಗಿಲ್ಲ; ಈ ಸ್ವಾಮಿಗಳ ಕೃಪೆ ಇದ್ದರೆ ಸಾಕು. ಸ್ಟೇನ್‌ಲೆಸ್ ಸ್ಟೀಲ್ ಪರ್ಮಿಟ್ ಬಂದುಬಿಡುತ್ತದೆ. ಮಾನ್ಯಶ್ರೀ. ಸಿದ್ಧವೀರಪ್ಪನವರು ಮಾಡನಾಡುತ್ತಾ ಸಾಮಾನ್ಯವಾಗಿ ಒಬ್ಬ ರೈತ 10 ಸಾವಿರ ರೂಪಾಯಿಗಳನ್ನು ದುಡಿಯಬೇಕಾದರೆ, ಎಷ್ಟು ಸಾವಿರ ಎಕರೆಯನ್ನು ಮಾಡಬೇಕು: ಎಷ್ಟು ಹಣವನ್ನು ಬಂಡವಾಳ ಹಾಗಬೇಕು ಎಂದು ಹೇಳಿದರು. ನಿಮ್ಮಲ್ಲಿ ಸ್ಟೇನ್‌ಲೆಸ್ ಸ್ಟೀಲ್ ಕೋಟಾ ಇದೆ, ನಿಮ್ಮ ಹತ್ತಿರ ಇನ್ನೂ ಏನೇನೋ ಇದೆಯೆಂದು ಹೇಳುತ್ತಾ ಈ ದೇದಶದ ಆಸ್ತಿ ನಿಮ್ಮ ಆಸ್ತಿಯಾಗಿದೆ. ನಿಮಗೆ ಅನುಕೂಲವಾದ ಕಾನೂನುಗಳು ಆಜ್ಞೆಗಳು, ನೀತಿ ನಿಯಮಗಳನ್ನು ಹೊರಡಿಸುವುದಕ್ಕೆ ತಕ್ಕ ಅಧಿಕಾರಿಗಳೂ ಇದ್ದಾರೆ. ಸ್ಟೇನ್‌ಲೆಸ್ ಸ್ಟೀಲ್‌ನಲ್ಲಿ ಕೆಲಸ ಮಾಡತಕ್ಕ ಯಾವ ಕೆಲಸಗಾರನು ಇಲ್ಲದಿದ್ದರೂ ಅಂಥಾ ಒಬ್ಬ ವ್ಯಕ್ತಿಗೆ ಒಂದು ಹತ್ತು ಸಾವಿರ ರೂಪಾಯಿನ ಒಂದು ಸ್ಟೇನ್‌ಲೆಸ್ ಸ್ಟೀಲ್‌ನ ಕೋಟ ಕೊಡುವುದು. ಯಾರಿಗೆ ಅಂದರೆ ಈ ಮಂತ್ರಿಮಂಡಲಕ್ಕೆ ಯಾರ ಮೇಲೆ ಇವರ ಒಂದು ಸಹಾನುಭೂತಿ ಇದೆಯೋ ಅಂಥಾ ವ್ಯಕ್ತಿಗೆ. ಕಾರಣ ಏನೆಂದರೆ ದೇಶದಲ್ಲಿರತಕ್ಕ ಆಸ್ತಿಯೆಲ್ಲಾ ಈ ಮಂತ್ರಿ ಮಂಡಲದ್ದೇ ಆಗಿದೆ, ಮೇಲಾಗಿ ಇವರಿಗೆ ಸರಿಯಾಗಿ ತಾಳ ಹಾಕತಕ್ಕ ಅಧಿಕಾರಿಗಳೂ ಇದ್ದಾರೆ. ಇವರು ಹೇಳಿದಂತೆ ಅವರು ಆರ್ಡರನ್ನು ಹೊರಡಿಸುತ್ತಾರೆ. ಆದರೆ ಈಗಾಗಲೇ ನನ್ನ ಮಾನ್ಯ ಮಿತ್ರರೊಬ್ಬರು ಹೇಳಿದಂತೆ ಇನ್ನು ಈ ಆಡಳಿತ ದೇಶದಲ್ಲಿ ಬಹಳ ದಿನ ಇರುವುದಿಲ್ಲ. ಈ ಯುಗ ಕಳೆದ ಕೂಡಲೇ ಬರತಕ್ಕ ಯುಗ ಏನಿದೆ ಅದು ವಿಚಾರಣೆಯ ಯುಗ. ಅದನ್ನು ಅರಿಯದೆ ಈ ದಿವಸ ನಾನು ಮುಖ್ಯ ಮಂತ್ರಿ, ಈ ಸ್ಟೇನ್‌ಲೆಸ್ ಸ್ಟೀಲ್ ಇತ್ಯಾದಿ ಕೋಟಗಳಲ್ಲೆಲ್ಲಾ ಇರುವುದು ಕೇವಲ ನನ್ನ ಅಣ್ಣ, ನನ್ನ ತಮ್ಮ ನನ್ನ ಬಂಧುಬಳಗಕ್ಕೇ ಎಂದು ಅವರು ಅವನ್ನೆಲ್ಲಾ ಯಾರು ಯಾರಿಗೆ ಬೇಕೋ ಅವರಿಗೆ ಕೊಡಲಿ. ಆದರೆ ಮುಂದೆ ಬರತಕ್ಕ ವಿಚಾರಣೆಯ ಯುಗದಲ್ಲಿ ಈ ವಿಚಾರಗಳ ಬಗ್ಗೆ ಒಂದು ಆಯೋಗವನ್ನು ನೇಮಕ ಮಾಡಿ, ಆ ಕಾಲಕ್ಕೆ ಇವರಿಲ್ಲದಿದ್ದರೆ ಇವರ ಸಂತತಿ ಯಾರಾದರೂ ಇದ್ದರೆ, ಅವರನ್ನೇ ಎಳೆದು ಗಲ್ಲಿಗೆ ಹಾಕಿ ನೀವು ಇಷ್ಟರಿಂದಲೇ ಸಮಾಧಾನ ಪಟ್ಟುಕೊಳ್ಳಬೇಕೆಂದು ಆ ಹಳ್ಳಿಯ ಜನರಿಗೆ ಹೇಳುವಂಥಾ ಒಂದು ಕಾಲ ಬೇಗ ಸನ್ನಿಹಿತವಾಗುತ್ತದೆ. ಇವರೇ ಇನ್ನೂ ಆಡಳಿತದಲ್ಲಿದ್ದರೆ ನಿಮ್ಮ ಅಂಗೀಬಟ್ಟೆಯನ್ನು ಸಹಾ ತೆಗೆದುಕೊಂಡು ಹೋಗುತ್ತಾರೆಂದು ಹೇಳಿದರು. ಅಷ್ಟೇ ಅಲ್ಲಿ ನಾನು ಹೇಳುತ್ತೇನೆ ಇವರು ಜನರ ಚರ್ಮವನ್ನು ಸಹಾ ಸುಲಿದುಕೊಂಡು ಹೋಗುತ್ತಾರೆ ಎಂದು, ಇವರ ಕಾಲದಲ್ಲಿ ಫೈಲುಗಳಿಗೆ ಬೆಂಕಿಯನ್ನು ಹಚ್ಚಿಸಿದ್ದಾರೆ. ಅನೇಕ ಫೈಲುಗಳನ್ನು



ಗೈರುವಿಲೆ ಮಾಡಿದ್ದಾರೆ, ಸೆಷನ್ ಕೋರ್ಟಿಗೆ ಹಾಜರ್ಮಾಡಿದ್ದ ಫೈಲನ್ನೇ ಪರಾರಿಯಾಯಿತು ಅನ್ನುವಾಗ ಇವರ ಕಾಲದಲ್ಲಿ ಇನ್ನು ಯಾವುದಕ್ಕೆ ತಾನೆ ಸುರಕ್ಷತೆ ಇದೆ? ಮನೆಯವರ ಮಾನದ ವಿಚಾರ, ನಮ್ಮ ಮಾನದ ವಿಚಾರ, ಹಾಗೂ ನಮ್ಮ ಆಸ್ತಿಪಾಸ್ತಿಗಳ ರಕ್ಷಣೆಯ ವಿಚಾರದಲ್ಲಿ ಇಂದಿನ ಸರ್ಕಾರ ಒಂದು ರಕ್ಷಣೆಯನ್ನು ನೀಡುತ್ತದೆ ಎಂಬ ಭರವಸೆ-ವಿಶ್ವಾಸ ಈ ದಿವಸ ಯಾರಲ್ಲೂ ಉಳಿದಿಲ್ಲ.

## ರಾಜ್ಯದ ಗಡಿಗೆ ಸಂಬಂಧಿಸಿದಂತೆ ಮಹಾಜನ ವರದಿ ಕುರಿತು. 1967

ಶ್ರೀ ಚವಾಣ್ ಅವರಾಗಲೀ, ಶ್ರೀ ನಾಯಕ್ ಅವರಾಗಲೀ, ಶ್ರೀ ನಿಜಲಿಂಗಪ್ಪನವರಾಗಲೀ ಮತ್ತೆ ಯಾರೇ ಆಗಲೀ ತಮ್ಮ ಸ್ಥಾನಕ್ಕೆ ಕಟ್ಟು ಬೀಳಬೇಕಾದುದು ಅವಶ್ಯಕವಿತ್ತು. ದುರದೃಷ್ಟವಶಾತ್ ಮಹಾರಾಷ್ಟ್ರದ ನಾಯಕರು ಕಾಡಿ ಬೇಡಿ ಶ್ರೀಮಾನ್ ಬಾಪಟ್ ಅವರನ್ನು ಮುಖ್ಯ ಮಂತ್ರಿಗಳ ನಿವಾಸದಲ್ಲಿ ಉಪವಾಸ ಕುಳ್ಳಿರಿಸಿ, ಅವರಲ್ಲಿಗೆ ಶ್ರೀಮತಿ ಇಂದಿರಾ ಗಾಂಧಿಯವರನ್ನು ಕರೆದುಕೊಂಡು ಹೋಗಿ ತೋರಿಸಿ, ಗಡಿ ಆಯೋಗದ ರಚನೆಗೆ ಆಶ್ವಾಸನೆ ತೆಗೆದುಕೊಂಡರು. ಅದು ಸಿಕ್ಕುತ್ತದೆಂದು ಹೇಳಿದರು, ತೆಗೆದುಕೊಂಡವರು ಅವರು, ಬೆಳಗಾಂ ನಗರ, ಕಾರವಾರ, ಸೂಪ, ಹಳಿಯಾಳ,ಇವೆಲ್ಲವೂ ನಮಗೆ ಸಿಕ್ಕಲಿಲ್ಲ ಎನ್ನುವ ಒಂದೇ ಒಂದು ಕಾರಣಕ್ಕಾಗಿ ಅವರು ಒಪ್ಪುವುದಿಲ್ಲ ಎಂದು ಹೇಳುವುದು ನನಗೆ ಶೋಚನೀಯವಾಗುತ್ತದೆ. ನಾನು ಮೊದಲೇ ಹೇಳಿದ್ದೇನೆ. ಈ ರಾಜ್ಯದ ವಿರೋಧ ಪಕ್ಷದವರು ಯಾರೂ ಈ ಅಧಿಕೃತವಾಗಿ ಮಹಾಜನ ಕಮೀಷನ್ ನೇಮಕವನ್ನು ಸ್ವಾಗತಿಸಲಿಲ್ಲ ಎಂದು ನಾವು ಬಹಿಷ್ಕರಿಸಬೇಕು ಎಂದು ಮಾಡಿ ಬಹಿಷ್ಕರಿಸಿದ್ದೇವೆ. ನಾವು ಅವರ ಮುಂದೆ ಸಾಕ್ಷಿ ನೀಡಲಿಲ್ಲ. Sri. P.V. Aithala. Such a grave problem is being discussed, there is no minister in this House.

ಶ್ರೀ ಎಚ್. ಸಿದ್ದವೀರಪ್ಪ.-ಹೊರಗೆ ಏನು ಅಂದರೂ ಭಯವಿಲ್ಲ. ನಮಗೆ ಗಂಟಲು ಒಣಗಿಸಿಕೊಳ್ಳುವುದು ಬೇಡ ಎಂದರೆ ಮನೆಗೆ ಹೋಗೋಣ. ಇದು ದೇಶದ ಪ್ರಶ್ನೆ. ದೇಶ ನಮಗೆ ಏನು ಅಂದಾರು? ನಮ್ಮ ಅಭಿಪ್ರಾಯ ತಿಳಿಸಬೇಕು ಎಂದು ನಾವು ಆತ್ಮ ತೃಪ್ತಿಗಾಗಿ ಮಾತನಾಡುತ್ತಿದ್ದೇವೆ. ಮಂತ್ರಿಗಳ ಮೇಲಿನ ಗೌರವಕ್ಕಾಗಿ ಮಾತನಾಡುತ್ತಾ ಇಲ್ಲ.

ಶ್ರೀ. ಎಸ್. ಗೋಪಾಲಗೌಡ.-ಸ್ವಾಮಿ, ಈಗ ಎಷ್ಟು ವರದಿ ಬಂದ ಮೇಲೆ ಶ್ರೀಮಾನ್ ಚವ್ವಾಣರೇ ಆಗಲಿ, ಮಹಾರಾಷ್ಟ್ರದ ಮುಖ್ಯ ಮಂತ್ರಿಗಳೇ ಆಗಲಿ ಮಹಾರಾಷ್ಟ್ರದ ಏಕೀಕರಣ ಸಮಿತಿಯವರೇ ಆಗಲಿ ಅದನ್ನು ವಿರೋಧ ಮಾಡುವುದಾಗಲಿ ಅಥವಾ ಒಪ್ಪುವುದಿಲ್ಲ ಎಂದಾಗಲಿ ಹೇಳಿದರೆ ಅದು ತಪ್ಪಾಗುತ್ತದೆಂದು ನಾನು ಈ ಸಂದರ್ಭದಲ್ಲಿ ಹೇಳಬಯಸುತ್ತೇನೆ. ನಮ್ಮ ಸರ್ಕಾರದವರು ನಾನು ಹೇಳಿದ ಹಾಗೆ ಸಣ್ಣಪುಟ್ಟ ಹೊಂದಾಣಿಕೆಗಳನ್ನು ಮಾಡಿಕೊಳ್ಳಬಹುದು ಎಂದು ಹೇಳಿದರು. ಒಂದು ತೀರ್ಮಾನಕ್ಕೆ ಅಂಟಿಕೊಳ್ಳುವುದಕ್ಕೆ ಸಾಧ್ಯವಾಗಲಿಲ್ಲ. ಅಲ್ಲಿಂದ ಒಂದು ಮೆಟ್ಟಲು ಕೆಳಗಿಳಿದರು. ಕೇವಲ ಮಹಾರಾಷ್ಟ್ರ ಮೈಸೂರು ಗಡಿ ವಿವಾದದ ಸಂಬಂಧದಲ್ಲಿ ಆಯೋಗ ರಚನೆ ಆಗಬಾರದು ಎಂದು ಹೇಳಿದವರು ಕಾರಸಗೋಡನ್ನು ಸೇರಿಸಿದ್ದಾರೆ ಎಂಬ ನೆಪ ಮುಂದೆ ಮಾಡಿ ಅದನ್ನು ಒಪ್ಪಿಕೊಂಡರು. ಶ್ರೀಮಾನ್ ನಿಜಲಿಂಗಪ್ಪನವರು ವರದಿಯನ್ನು ಒಪ್ಪಿಕೊಂಡಿದ್ದೂ ಅಲ್ಲದೆ ಇನ್ನೂ ಅದು ಹೊರಗೆ ಬರುವುದಕ್ಕಿಂತ ಮುಂಚಿತವಾಗಿ ನಾವು ಅದನ್ನು ಸ್ವಾಗತಿಸುತ್ತೇವೆ,

ವಿಧಾನ ಸಭೆ ನಡವಳಿಕೆ: ದಿನಾಂಕ 15.2.1967



ಅದರಲ್ಲಿ ಏನು ಇದ್ದರೂ ಅದು 'ಅವಾರ್ಡ್' ಎಂದು ಪರಿಗಣಿಸುತ್ತೇವೆ ಎಂದು ಹೇಳಿದರು. ನಾನು ಅವರಿಗೆ ಹೇಳುತ್ತೇನೆ. ಇದು ಮುತ್ಸದ್ದಿತನ ಅಲ್ಲ, ಇದು ಜವಾಬ್ದಾರಿ ಸರ್ಕಾರದ ವರ್ತನೆ ಅಲ್ಲ, ರಾಜಕೀಯ ನೀತಿ ಅಲ್ಲ ಎಂದು. ಅವರು ಪ್ರಜಾಪ್ರಭುತ್ವದಲ್ಲಿ ದೊಡ್ಡವರು ಇರಬಹುದು. ಅವರಿಗೆ ಅಖಿಲಭಾರತ ಮಟ್ಟದ ವ್ಯಕ್ತಿತ್ವ ಇರಬಹುದು. ಆದರೆ ಈ ರಾಜ್ಯದ 2 1/2 ಕೋಟಿ ಜನರ ಒಂದು ಸಮಸ್ಯೆಯನ್ನು ಬಗೆಹರಿಸುವ, ಅವರ ಹಿತ ಅವರ ಭವಿಷ್ಯವನ್ನು ರೂಪಿಸತಕ್ಕಂಥ ಮತ್ತು ಕಾಪಾಡತಕ್ಕಂಥ ಹೊಣೆಯನ್ನು ಹೊತ್ತ ಮುಖ್ಯ ಮಂತ್ರಿಗಳು ಆಗಿರತಕ್ಕಂಥವರು ಈ ರೀತಿ ನಮ್ಮ ರಾಜ್ಯದ ಜನತೆಯನ್ನು ಔದಾರ್ಯದ ಉರುಳಿನಲ್ಲಿ ಹಾಕಬಾರದಾಗಿತ್ತು; ಎಂದು ಹೇಳುತ್ತೇನೆ. ಇದನ್ನು ಕ್ಯಾಬಿನೆಟ್‌ನಲ್ಲಿ ಮೊದಲು ತೀರ್ಮಾನ ಮಾಡಲಿ. ಅದು ಎಂತಹ ಕ್ಯಾಬಿನೆಟ್ ಅಂದರೆ ನಿಜಲಿಂಗಪ್ಪನವರು ಹೇಳಿದ ಹಾಗೆ ಕೇಳುವಂಥ ಕ್ಯಾಬಿನೆಟ್. ಮಹಾಜನರು ದೊಡ್ಡವರು, ವರದಿ ದೊಡ್ಡದು ಒಪ್ಪಿಕೊಳ್ಳುತ್ತೇವೆ ಎಂದು ಮೊದಲೇ ಹೇಳಿಬಿಟ್ಟರೆ ಹೇಗೆ? you might have placed it before the Cabinet. ಅನಂತರ ವಿರೋಧ ಪಕ್ಷದ ಮುಖಂಡರುಗಳಿಗೆ ತಂತಿಗಳನ್ನು ಕಳುಹಿಸಿ, ನಾವು ಬರಲೂಬಾರದು ಹೇಳಲೂ ಬಾರದು ಎನ್ನುವ ರೀತಿಯಿಂದ ವರ್ತನೆ ಮಾಡಿರುವುದು ಖಂಡನೀಯ. ನಿಮ್ಮ ವರ್ತನೆಗಳು, ನಿಮ್ಮ ಸಂಧಾನಗಳನ್ನು ಖಂಡಿಸಬೇಕಾಗಿದೆ. ಮಹಾರಾಷ್ಟ್ರದಲ್ಲಿ ಎಷ್ಟು ಒಗ್ಗಟ್ಟು ಇದೆ ನೋಡಿ. ವಿರೋಧ ಪಕ್ಷದವರೂ, ಆಡಳಿತ ಪಕ್ಷದವರೂ ಒಂದೇ ಆಗಿದ್ದಾರೆ. ಇಲ್ಲಿ ಸರ್ಕಾರದವರೇ ಎಲ್ಲಾ ಪಕ್ಷದವರ ಅಭಿಪ್ರಾಯವನ್ನೂ ಪ್ರತಿಬಿಂಬಿಸುವ ಭಾವನೆಯಿಂದ ಮುಂದುವರೆಯುತ್ತಿದ್ದಾರೆ. ಆದರೆ ನಮ್ಮನ್ನು ಯಾವತ್ತೂ ವಿಶ್ವಾಸಕ್ಕೆ ತೆಗೆದುಕೊಂಡಿಲ್ಲ. ಎಲ್ಲಾ ಆದ ಮೇಲೆ ಹೀಗೆ ಆಗಿದೆ ಏನು ಮಾಡುವುದು ಎಂದು ಹೇಳುತ್ತೀರಿ. ಇದು ತಪ್ಪು. ಮುಂದೆಯಾದರೂ ಒಂದು ಒಳ್ಳೆಯ ಪರಂಪರೆಯನ್ನು ನಾವು ಹಾಕಿಕೊಳ್ಳುವುದು ಒಳ್ಳೆಯದು. ಅದನ್ನು ನಾನು ವಿಷಾದದಿಂದ ಹೇಳುತ್ತೇನೆ. ಮಾನ್ಯ ಶಿವಪ್ಪನವರು ಸೌಜನ್ಯದಿಂದ ಹೋದರು. ಸಭೆಯನ್ನು ಕರೆಯಿರಿ ಎಂದರು. ಇವತ್ತು ಅಭಿಮತ ಸಂಗ್ರಮ ಮಾಡಿದರೆ ಸಾಕು. ಶ್ರೀಮಾನ್ ನಾಯಕರಂತೆ ತೀರ್ಮಾನ ಮಾಡುವುದು ಬೇಡ ಎಂದು ಬಂದಿದ್ದಾರೆ, ಸಂತೋಷ. ವರವರ ಬಿಪ್ರಾಯ ಅವರದು. ನಾನು ನಮ್ಮ ಅಬಿಪ್ರಾಯವನ್ನು ಈ ಸಬೆಯಲ್ಲಿ ಕೊಡಬೇಕೆಂದು ಇಷ್ಟಪಡುತ್ತೇನೆ; ಸ್ವಾಮಿ.

ಮಹಾರಾಷ್ಟ್ರದವರು ಲಾಗ ಹೊಡೆದರು ಎಂದು ನಮ್ಮ ರಾಜ್ಯದವರು ಒಂದು ಪುಸ್ತಕದಲ್ಲಿ ಹೇಳಿದ್ದಾರೆ. ನಾನು ಹೇಳುವುದು ಈಗ ಎರಡು ಮೂರು ಲಾಗ ಹೊಡೆದು ಕುಪ್ಪಳಿಸಿದರಲ್ಲ, ಜತ್ತಿ ಅವರು ಸಣ್ಣ ಪುಟ್ಟ ಹೊಂದಾಣಿಕೆ ಎಂದು ಹೀಗೆ ನೆಗೆದದ್ದು, ಶ್ರೀ ನಿಜಲಿಂಗಪ್ಪನವರು ಡೆಲ್ಲಿಯಿಂದ ನೆಗೆನೆಗೆಯುತ್ತ ಬಂದದ್ದು, ಕೊನೆಗೆ ಇಲ್ಲಿ ಬಂದು ಆ ಪುಸ್ತಕದಲ್ಲಿ ಕೊನೆಯಲ್ಲಿ ಹೇಳುತ್ತಾರೆ, ರಾಜ್ಯದ ಪರವಾಗಿ ಕಮಿಟ್‌ಮೆಂಟ್ ಅಂತ.

7" Under the circumstances......................................"
Which is that circumstance, ಅದು ಅವರಿಗೇ ಗೊತ್ತು.

"it is for the Central Government to take a firm stand and cry halt to all agitational activities by deciding that the recommendations will be accepted as an award and by implementing the same whether the parties are pleased or displeased. Unless a firm stand is taken agitational activities will go on increasing leading all sorts of disturbances. The chapter of this dispute must be closed once and for all. As exhorted by Chief Minister of Mysore, it is high time that the nation rises above all such parochial and fissiparous tendencies and devotes its attention to national reconstruction."

ಎಂಥ ದೊಡ್ಡ ಮಾತು, ಬಹಳ ದೊಡ್ಡ ಮಾತು, ಆದರೆ ಸಂದರ್ಭೋಚಿತವಾಗಿ ದೊಡ್ಡ ಮಾತು ಆಡಿ, ದೊಡ್ಡ ಕೆಲಸ ಮಾಡಿದರೆ ಅದಕ್ಕೆ ಗೌರವತರುತ್ತದೆ, ಅದಕ್ಕೆ ಒಂದು ಸಮರ್ಥನೆ ಇರುತ್ತದೆ. ಯಾವುದಕ್ಕೆ ಯಾವುದನ್ನು ಹೇಳಬೇಕೋ, ಯಾವಾಗ ಹೇಳಬೇಕೋ ಆವಾಗ ಬಿಟ್ಟು ಬೇರೆ ಕಡೆ ಹೇಳಿದರೆ ಅದು ಹೇಡಿತನವಾಗುತ್ತದೆ, ಮುಖ ಉಳಿಸಿಕೊಳ್ಳುತಕ್ಕ ಜಾಣ್ಮೆಯೂ ಆಗುತ್ತದೆ, ಅರ್ಥವಿಲ್ಲದ ಅಲಾಪನೆಯೂ ಆಗುತ್ತದೆ.

ನಾನು ರಾಜ್ಯ ಸರ್ಕಾರವನ್ನು, ಯಾವ ಯಾವ ಭಾಗಗಳು ನಮಗೆ ಬರಬೇಕು, ಯಾವ ಯಾವ ಹಳ್ಳಿಗಳು ಬರಬೇಕು ಎಂದು ನಮ್ಮಲ್ಲಿ ಒಂದು ಲಿಸ್ಟ್ ಹಾಕಿಲ್ಲವೇ ಎಂದು ಕೇಳಿದೆ. ಅದು ಆಗಿಲ್ಲ ಎಂದು ಕೂಡ ಕೇಳಿದ್ದೇನೆ. ಪಾರ್ಲಿಮೆಂಟ್‌ನಲ್ಲಿ ಈಗಾಗಲೇ ಕರ್ನಾಟಕದಿಂದ ಹೋಗಿರತಕ್ಕ ಲೋಕಸಭೆಯ ಸದಸ್ಯರು ಒಂದು ನಿಲುವನ್ನು ತೆಗೆದುಕೊಂಡಿದ್ದಾರೆ. ಮಹಾರಾಷ್ಟ್ರ ಸ್ನೇಹಿತರು ಏನು ಹೇಳುತ್ತಾರೆಂದರೆ, ಮೊದಲು ಜೂಬಿಲೆಂಟ್ ಆಗಿದ್ದರು, ಒಂದು ರೂಮರ್ ಬಂತು ಎಂದು ಖುಷಿಪಟ್ಟರು. ಆದರೆ ಆ ಭಾಗಗಳು ವರದಿಯ ಪ್ರಕಾರ ನಮಗೆ ಬರಬೇಕು ಎಂದು ಗೊತ್ತಾದ ಕೂಡಲೇ ನಮ್ಮವರು ಖುಷಿಪಟ್ಟರು, ಅವರಿಗೆ ಕಸಿವಿಸಿಯಾಯಿತು, ಮತ್ತು ಈ ವರದಿಯಿಂದ ನಮಗೆ ಏನೂ ಬಂದಿಲ್ಲ ಎನ್ನುವ ತೀರ್ಮಾನಕ್ಕೆ ಮಹಾರಾಷ್ಟ್ರ ಸ್ನೇಹಿತರು ಬಂದರು. ಇದರಲ್ಲಿ ಕರ್ನಾಟಕದವರಿಗೆ ಬಹಳ ಸಿಕ್ಕಿಬಿಟ್ಟಿತು. ಆದುದರಿಂದ ಬಹಳ ಖುಷಿಯಾಗಿ ಇದನ್ನು ಈಗಲೇ, ಹೀಗೆಯೇ ಕಾರ್ಯಗತ ಮಾಡಿ ಎಂದು ಒತ್ತಾಯಪಡಿಸುತ್ತಿದ್ದಾರೆ ಎನ್ನುವ ಒಂದು ಅಭಿಪ್ರಾಯವನ್ನು ಹುಟ್ಟಿಸುತ್ತಿದೆ. ಅದು ಖಂಡಿತ ಸುಳ್ಳುಮಾತು. ಏಸ್.ಆರ್ ಆಕ್ಟ್ ಪ್ರಕಾರ ಇದ್ದಂಥ ಪ್ರದೇಶಗಳಲ್ಲಿ ನಿಪ್ಪಾಣಿ ಕೈಬಿಟ್ಟು ಹೋಗುತ್ತದೆ, ಬೆಳಗಾಂನ ಕೆಲವು ಹಳ್ಳಿಗಳು ಹೋಗುತ್ತವೆ, ಖಾನಾಪುರ ತಾಲ್ಲೂಕು



ಬಹುಮಟ್ಟಿಗೆ, ಬಾನಾಪುರ ಮತ್ತು ನಂದಗಡ ಎರಡೂ ನಗರಗಳೂ ಸೇರಿ ಆ ತಾಲ್ಲೂಕು ಹೋಗುತ್ತದೆ ಇನ್ನು ಜತ್‌ನ ಕೆಲವು ಭಾಗಗಳು ಹೋಗುತ್ತವೆ, ಮಂಗಳವೇಡೆ ಮನಗೆ ಬರುವುದಿಲ್ಲ. ದಕ್ಷಿಣ ಶೋಲಾಪುರ ಈ ಭಾಗಗಳು ಹೋಗುತ್ತವೆ. ನಾವು ಏನು ಖುಷಿ ಮಾಡಿದೆವು ಎಂದು ಗೊತ್ತಾಗುವುದಿಲ್ಲ. ವರದಿಯನ್ನು ಇನ್ ಟೋಟೋ ಒಪ್ಪಿಕೊಳ್ಳುವುದಕ್ಕೆ ನಮಗೆ ಹೊಸದಾಗಿ ಏನು ಬಂದಿದೆ? ಇನ್ ಟೋಟೋ ಒಪ್ಪಿಕೊಳ್ಳುವುದಕ್ಕೆ ಪ್ರಶ್ನೆ ಇಲ್ಲ. ನಮ್ಮ ಅಭಿಪ್ರಾಯವನ್ನು ಸ್ಪಷ್ಟವಾಗಿ ಹೇಳೋಣ. ಇದರಲ್ಲಿ ತಪ್ಪು ಅಭಿಪ್ರಾಯಕ್ಕೆ ಅವಕಾಶವಿಲ್ಲ. ನಿಪ್ಪಾಣಿಯನ್ನು ಉಳಿಸಿಕೊಳ್ಳುವುದು, ನಿಪ್ಪಾಣಿ ಕರ್ನಾಟಕದಲ್ಲಿರುವುದು, ನಿಪ್ಪಾಣಿಯ ವ್ಯಾಪಾರದೊಳಗಿನ ದೃಷ್ಟಿಯಿಂದ ನಮ್ಮ ಸ್ನೇಹಿತರಾದ ಶ್ರೀಮಾನ್ ಮಾನ್ವಿಯವರು ದೃಷ್ಟಿಯಿಂದಲೂ ಒಳ್ಳೆಯದು. ನಿಪ್ಪಾಣಿಯು ಚಿಕ್ಕೋಡಿ ತಾಲ್ಲೂಕಿನಲ್ಲಿದ್ದರೆ ಶ್ರೀ ಮಾನ್ವಿಯವರಿಗೆ ಹೆಚ್ಚು ಅನೂಕೂರವಾದೀತು. ಅಲ್ಲಿ ಎರಡು ಭಾಷೆಯ ಜನರೂ ಇರುತ್ತಾರೆ. ನಿಪ್ಪಾಣಿ ತಂಬಾಕು ಬಹಳ ಉತ್ತಮವಾದುದು. ಅದರಿಂದ ಮೂರುವರೆ ಕೋಟಿ ರೂಪಾಯಿ ಬರುತ್ತದೆ. ನಿಪ್ಪಾಣಿಯು ಚಿಕ್ಕೋಡಿ ತಾಲ್ಲೂಕಿನ ಬಂಗಾರದ ಕುರಿ ಇದ್ದ ಹಾಗೆ. ಆ ಬಾಗವನ್ನು ಮಹಾಜನ್‌ರು- ಅವರ ಮೇಲೆ ನಾನು ಏನೂ ಹೇಳುತ್ತಿಲ್ಲ-ಆ ಭಾಗದ 40 ಹಳ್ಳಿಗಳನ್ನೂ ಹಾಗೂ ನಿಪ್ಪಾಣಿಯನ್ನೂ ಮಹಾರಾಷ್ಟ್ರಕ್ಕೆ ಕೊಟ್ಟಿದ್ದೇನೆ ಎಂದು ಹೇಳಿದ್ದಾರೆ. ನಾನು ಹೇಳುವುದು ಒಂದು ತತ್ವದ ಮೇಲೆ ಆಕ್ಟ್ ಮಾಡಬೇಕು, ನಿಪ್ಪಾಣಿ ಮತ್ತು 40 ಹಳ್ಳಿಗಳನ್ನು ಕರ್ನಾಟಕದಲ್ಲಿ ಉಳಿಸಬೇಕು. ಚಂದಗಡ ತಾಲ್ಲೂಕನ್ನು ಎಸ್.ಆರ್. ಕಮಿಷನ್ ಅವರು ಕೊಟ್ಟರು. ಅದು ಆ ಭಾಗದಲ್ಲಿದೆ ಎಂದು ನಾವು ಒಪ್ಪಿಕೊಂಡಿದ್ದೇವೆ. ಖಾನಾಪುರ ತಾಲ್ಲೂಕನ್ನು ಮಹಾರಾಷ್ಟ್ರಕ್ಕೆ ಕೊಟ್ಟಿದ್ದಾರೆ. ಇದಕ್ಕೆ ಯಾವ ಕಾರಣವೂ ಕಂಡುಬರುವುದಿಲ್ಲ. ಅಲ್ಲಿರತಕ್ಕ ಅರಣ್ಯ ಸಂಪತ್ತಿನಿಂದ ಮತ್ತು ಅಲ್ಲಿ ನಾವು ಈಗಾಗಲೇ ಆರಂಭ ಮಾಡಿರತಕ್ಕ ಕೆಲಸಕಾರ್ಯಗಳಿಂದ ಅದು ಕರ್ನಾಟಕದಲ್ಲಿಯೇ ಇರಬೇಕು. ಇಲ್ಲಿ ನಾವು ಈಗಾಗಲೇ ಅನೇಕ ನೀರಾವರಿ ಕೆಲಸ ಕಾರ್ಯಗಳನ್ನು ಮಾಡಿದ್ದೇವೆ. ಖಾನಾಪುರದವರು ಹೆಚ್ಚು ಕಡಿಮೆ ರಾಜ್ಯದ ಜನತೆ ಆಗುವುದಕ್ಕೆ ಒಪ್ಪಿಕೊಂಡಿದ್ದರು. ಅವರನ್ನು ಮಹಾಜನ್ ಅವರು ಅಲ್ಲಿಗೆ ಕಳಿಸಿದ್ದಾರೆ. ಹಾಗೆಯೇ ನಿಪ್ಪಾಣಿ ಪ್ರಶ್ನೆ ಕೂಡ. ಚಂದಗಡ ತಾಲ್ಲೂಕನ್ನು ಬಿಟ್ಟು ಬೆಳಗಾಂ ಜಿಲ್ಲೆಯ ಜನಸಂಖ್ಯೆ 1951 ಸೆನ್ಸಸ್ ಪ್ರಕಾರವಾಗಿ 17, 26, 908. ಚಂದಗಡ ತಾಲ್ಲೂಕಿನ ಜನಸಂಖ್ಯೆ 80,000. ಅದನ್ನು ಕಳೆದು 16 ಲಕ್ಷ ಜನ ಇರತಕ್ಕ ಒಂದು ಜಿಲ್ಲೆ. ಇದರಲ್ಲಿ ಕನ್ನಡ ಮಾತನಾಡುವರರು ಶೇ. 67 ರಷ್ಟಿದ್ದಾರೆ. ಅಂದರೆ 11 ಲಕ್ಷ ಜನ ಇದ್ದಾರೆ. 3.85 ಲಕ್ಷ ಜನರು ಮರಾಠಿ ಮಾತನಾಡುವವರು, ಉಳಿದವರು ಇತರರು ಇದ್ದಾರೆ. ಖಾನಾಪುರ ತಾಲ್ಲೂಕನ್ನು ನಾನು ನೋಡಿದ್ದೇನೆ. ಅದು ದಿನ ಬೆಳಗಾದರೆ ಬೆಳಗಾಂ ಮತ್ತು ಬೈಲಹೊಂಗಲ ಈ ಎರಡೂ ತಾಲ್ಲೂಕುಗಳ ಜೊತೆ ಸಂಪರ್ಕವನ್ನು ಹೊಂದಿದೆ. ಅಲ್ಲಿನ ಜನರು ಮರಾಠಿ ಮಾತನಾಡುತ್ತಾರೆ, ಕನ್ನಡವನ್ನೂ ಮಾತನಾಡುತ್ತಾರೆ. ಇದನ್ನು ಮಹಾರಾಷ್ಟ್ರಕ್ಕೆ ಕೊಟ್ಟಿರುವುದರ ಬಗ್ಗೆ ನನ್ನ ವಿರೋಧವಿದೆ. ಇದರ ತಿದ್ದುಪಡಿಯಾಗಬೇಕು. ಪಾರ್ಲಿಮೆಂಟಿನಲ್ಲಿ ನಿಪ್ಪಾಣಿ ಮತ್ತು 40 ಹಳ್ಳಿಗಳೂ ಸಹ ಮೈಸೂರಿನಲ್ಲಿಯೇ ಉಳಿಯಬೇಕು. ಆದ್ದರಿಂದ ಕೆಲವು ತಿದ್ದುಪಡಿಯಾಗಬೇಕೆಂದು ನಾನು

ಹೇಳುತ್ತೇನೆ. ಶ್ರೀಮತಿ ಇಂದಿರಾ ಗಾಂಧೀಜಿಯವರನ್ನು, ಶಿವಮೂರ್ತಿಶಾಸ್ತ್ರಿಗಳು, ನಮ್ಮ ಗೆಳಯರಾದ ಪಾಟೀಲರು ಮತ್ತು ನಾನು ಹೋಗಿ ಕಮಿಷನ್ ನೇಮಕವಾಗುವುದಕ್ಕೆ ಮುಂಚೆ ನೋಡಿದ್ದೆವು. ಮಹಾಜನ್ ಕಮಿಷನ್ ನೇಮಕ ಮಾಡಿದಾಗ Belgaum is a live issue ಎಂದು ಪದೇ ಪದೇ ಅವರು ಹೇಳಿದರು. ಮಡಕಸಿರಾ, ತಾಳವಾಡಿ, ಪಿರ್ಕ ಮುಂತಾದುವುಗಳ ವಿಚಾರದಲ್ಲೂ ಅಂಧ್ರ ಮತ್ತು ಮದ್ರಾಸಿನವರಿಗೂ ನಮಗೂ ಭಿನ್ನಾಭಿಪ್ರಾಯವಿದೆ. ನಮಗೆ ಸೇರಬೇಕಾದ ಎಲ್ಲಾ ಭಾಗಗಳೂ ಸೇರಿಲ್ಲ. ಕೇವಲ ಮಹಾರಾಷ್ಟ್ರದ ಒತ್ತಡಕ್ಕಾಗಿ ಕಮಿಷನ್ ರಚಿಸಿ Belgaum is a live issue, ಎಂದು ಹೇಳಿರುತ್ತಾರೊ. ಯಾರು ಅದನ್ನು ಲೈವ್ ಇಷ್ಯೂ ಆಗಿ ಇಟ್ಟರು ಎಂಬುದನ್ನು ಹೇಳುವುದಿಲ್ಲ. ಕದಂರವರು ಕಾರವಾರವನ್ನು ಪ್ರತಿನಿಧಿಸುವ ಸದಸ್ಯರು. ಕಾರವಾರ, ಹಳಿಯಾಳ ತಾಲ್ಲೂಕು ಮತ್ತು ಸುಪೇಟ್ ಮಹಾರಾಷ್ಟ್ರಕ್ಕೆ ಸೇರಿಸಿದ್ದಾರೆ. ಕಾರವಾರ ಕೆಳಮಟ್ಟದ ಬಂದರು, ಅಭಿವೃದ್ಧಿಯಾದರೆ ಒಳ್ಳೆಯ ಬಂದರು, ಅದನ್ನು ನೋಡಿದ್ದೇನೆ. ಕಾರವಾರ ನೂರು ವರ್ಷಗಳ ಹಿಂದೆ ಬ್ರಿಟಿಷರ ಕಾಲಕ್ಕೆ ಹಿಂದೆ ಉತ್ತರ ಕೆನರಾದ ಬಂದರು, ಅದನ್ನು ಅಭಿವೃದ್ಧಿ ಮಾಡಬಹುದು. ಹಳಿಯಾಳ ಮತ್ತು ಸುಪೇಟ್‌ಗಳಲ್ಲಿ ಮರಾಠಿ ಮತ್ತು ಕೊಂಕಣಿ ಮಾತನಾಡುವರಿದ್ದಾರೆ; ಅದಕ್ಕೂ ಮಹಾರಾಷ್ಟ್ರಕ್ಕೂ ಸಂಬಂಧವಿಲ್ಲ. ಕಾಂಟಿಗ್ಯೂಟ್ ಇಲ್ಲ, ಅದು ಒಳ್ಳೆಯ ಫಾರೆಸ್ಟ್ ಏರಿಯಾ, ಅಲ್ಲಿ ಅತ್ಯುತ್ತಮವಾದ ನಾಟ ಉಂಟು. ಕಾಳಿ ಯೋಜನೆ ಇಲ್ಲಿ ಬರುತ್ತದೆ. ಮಹಾಜನ್ ಅವರು ಕೊಂಕಣಿಯು ಮರಾಠಿಯ ಉಪಭಾಷೆಯಲ್ಲ ಎಂದು ಸ್ಪಷ್ಟವಾಗಿ ಹೇಳಿದ್ದಾರೆ. ಅದಿ ಮರಾಠಿಯ ಡಯಲೆಕ್ಟ್ ಅಲ್ಲಿ ಎಂದು ಅನೇಕ ತಜ್ಞರು, ಪಂಡಿತರು ಮುಂತಾದ ತಿಳಿದವರೆಲ್ಲಾ ಸೇರಿಸಿ ತೀರ್ಮಾನ ಮಾಡಿದ್ದಾರೆ. ಆ ಕಾರಣದಿಂದ ನಾವು ಕಾರವಾರ, ಸೂಪ ಅಥವಾ ಹಳಿಯಾಳ ಈ ಯಾವುದನ್ನು ಮಹಾರಾಷ್ಟ್ರಕ್ಕೆ ಬಿಟ್ಟುಕೊಡುವುದಕ್ಕಾಗುವುದಿಲ್ಲ. ಕದಂರವರು ಮಾತನಾಡುವವರಿದ್ದಾರೆ ಬಹುಶಃ ಅವರೂ ಇದಕ್ಕೆ ಒಪ್ಪುತ್ತಾರೆ. ಕಾರವಾರ ಯಾವತ್ತೂ ಮಹಾರಾಷ್ಟ್ರದ ಭಾಗವಾಗುವುದಕ್ಕೆ ಸಾಧ್ಯವಿಲ್ಲ. ಆಗಬಾರದು, ಮತ್ತು ಕಾರವಾರ ಜಿಲ್ಲೆಯ ಭವಿಷ್ಯ ಕರ್ನಾಟಕದಲ್ಲಿ ಉಜ್ವಲವಾಗಿದೆ; ಎಂದು ಅಭಿಪ್ರಾಯವಿದೆ. ಇನ್ನು ಜನಸಂಖ್ಯೆ ನೋಡಿದರೆ 8-9 ಲಕ್ಷವಾಗುತ್ತದೆ. ಕಾರವಾರದಿಂದ ಬೆದರೆವರೆಗೆ ಸುಮಾರು 200 ಮೈಲಿ ಹೋಗಿ ತೀರ್ಮಾನಮಾಡಿದ್ದಾರೆ. ಮೈಗ್ರೇಷನ್ ಆಫ್ ಪಾಪ್ಯುಲೇಷನ್ ವಿಚಾರ ಹೇಳಿದ್ದಾರೆ. ಕೋದಂಡರಾಯರು ಆದನ್ನೂ ಗಮನಕ್ಕೆ ತೆಗೆದುಕೊಳ್ಳಬಹುದೆಂದು ಹೇಳಿದ್ದಾರೆ. ಕೊಂಕಣಿ ಮರಾಠಿ ಭಾಷೆಯ ಉಪಭಾಷೆ ಎಂದು ವಾದ ಮಾಡಿದ್ದನ್ನು ಮಹಾಜನ್‌ರವರು ತಿರಸ್ಕರಿಸಿದ್ದಾರೆ. ಒಂದು ಕಡೆ ಇರುವವರು ಇನ್ನೊಂದು ಕಡೆಗೆ ಹೋಗಬಹುದು. ಮಹಾಜನರ ವಾದವನ್ನು ನಾನು ಸಮರ್ಥನೆ ಮಾಡುತ್ತೇನೆ. ಮಹಾರಾಷ್ಟ್ರದವರ ವಾದದಲ್ಲಿ ಹುರುಳಿಲ್ಲ. ಈ ದಿನದ ಇಂಡಿಯಾದೇಶದ ಯಾವುದೇ ಪಟ್ಟಣವನ್ನು ತೆಗೆದುಕೊಂಡರೂ ಮುಂಬಯಿ, ಅಹಮದಬಾದು, ದೆಹಲಿ, ಲಕ್ನೋ, ಅಲಹಾಬಾದ್, ಕಲ್ಕತ್ತ, ಮದ್ರಾಸು, ಬೆಂಗಳೂರು ಮುಂತಾದ ದೊಡ್ಡ ನಗರಗಳಲ್ಲಿ ಒಂದೇ ಭಾಷೆ ಮಾತನಾಡುವವರು ಇದ್ದಾರೆಯೇ, 1951ನೆಯ ಇಸವಿಯ ಇನ್ಸಸ್ ಪ್ರಕಾರ ಬೆಂಗಳೂರಿನಲ್ಲಿ 61 ಭಾಷೆ



ಮಾತನಾಡುವ ಜನರಿದ್ದಾರೆ. ಸಾಮಾನ್ಯವಾಗಿ ಈ ದಿನಸ ಹಳ್ಳಿಗಳಲ್ಲೂ, ಪಟ್ಟಣಗಳಲ್ಲೂ, ಬೇರೆ ಬೇರೆ ಭಾಷೆಗಳವರು, ಜಾತಿಯವರು ಇದ್ದಾರೆ; ಎಲ್ಲಾ ಸೇರ್ಪಡೆಯಾಗಿದೆ, ವಿಲೀನವಾಗಿದೆ. ನಾವು ಪದೇ ಪದೇ ಭಾರತದ ಐಕ್ಯತೆಯ ವಿಚಾರದಲ್ಲಿ ಮಾತನಾಡುತ್ತೇವೆ. ಈಚೀಚೇಗೆ ಜನರನ್ನು ಒಂದು ಕಡೆಯಿಂದ ಇನ್ನೊಂದು ಕಡೆಗೆ ವರ್ಗಾಯಿಸುವುದು ಅತಿಯಾಗಿದೆ. ಇಂದು ಪಾಕೀಸ್ತಾನ ಮತ್ತು ಭಾರತ ಬೇರೆ ಬೇರೆಯಾದ ಮೇಲೆ ಅನೇಕ ಕಷ್ಟಗಳನ್ನು ಅನುಭವಿಸುತ್ತಿದ್ದೇವೆ. ಈ ಎರಡು ಸಾರ್ವಭೌಮ ರಾಷ್ಟ್ರಗಳಿಗೆ ಘರ್ಷಣೆಯಾಗುತ್ತಿದೆ. ಆದರೆ ಅದರ ಪ್ರಶ್ನೆಯೇ ಬೇರೆ. ನಾವು ಒಂದು ದೇಶದ ಜನ, ಎಲ್ಲರೂ ಬಾರತದಲ್ಲಿದ್ದೇವೆ. ಹೀಗಿರುವಾಗ ಹೊರಗಿನವರ ಘರ್ಷಣೆಯೇ ಜಾಸ್ತಿಯಿರುವಾಗ ನಾವು ನಾವು ಕಿತ್ತಾಡಿದರೆ ಭಾರತದ ಐಕ್ಯತೆಗೆ ಧಕ್ಕೆ ಬರುತ್ತದೆ.

ಇನ್ನೊಂದು ಪೂಲ್ ರಿಸಲ್ಟಿನ ವಿಚಾರ. ಚುನಾವಣೆಯಲ್ಲಿ ತಾವು ಗೆದ್ದು ಬಂದಿರುವುದರಿಂದ ಕೆಲವು ಭಾಗಗಳು ಗೆದ್ದಿರುವ ಕ್ಷೇತ್ರದಲ್ಲಿರುವುದು ಮಹಾರಾಷ್ಟ್ರಕ್ಕೆ ಹೋಗಬೇಕು ಎಂಬುದು ಕದಂರವರ ಅಭಿಪ್ರಾಯ. ಆದರೆ ಚುನಾವಣೆಗಳು ಕೇವಲ ಭಾಷೆಯ ಆಧಾರದ ಮೇಲೆ ನಡೆಯುವುದಿಲ್ಲ. ಅದಕ್ಕೆ ಬೇರೆ ಬೇರೆ ಕಾರಣಗಳಿರುತ್ತವೆ. ಇದನ್ನು ಗಣನೆಗೆ ತೆಗೆದುಕೊಳ್ಳಬಾರದು ಎಂದು ಮಹಾಜನ್‌ರವರೂ ಕೂಡ ಹೇಳಿದ್ದಾರೆ. ಸ್ಪಷ್ಟಪಡಿಸಿದ್ದಾರೆ, ಇದನ್ನು ನಾನು ಸಮರ್ಥನೆ ಮಾಡುತ್ತೇನೆ. ಗೋವಾದಲ್ಲಿ ತೆಗೆದುಕೊಂಡಾಗ ಏನಾಯಿತೆಂಬುದು ಗೊತ್ತಿದೆ. ಈ ಸಮಸ್ಯೆಯನ್ನು ಜನರಿಗೇ ಬಿಟ್ಟರೆ, ಅವರ ಅಭಿಪ್ರಾಯ ಕೊಡಿ ಎಂದರೆ ಕೆಲವರು ತಾವು ಕನ್ನಡಿಗರಲ್ಲ, ಮರಾಠಿಯವರು ಎಂದು ಮತ್ತೆ ಕೆಲವರು ನಾವು ಮರಾಠಿಯರಲ್ಲ ಕನ್ನಡಿಗರು ಎಂದು, ಕೆಲವರು ಹೇಳುವ ಪ್ರಸಂಗ ಬರುತ್ತದೆ. ಈ ಗಡಿ ವಿವಾದ ಪ್ರಾರಂಭವಾಗಿ ಸುಮಾರು ಹತ್ತು ವರ್ಷವಾಯಿತು. ನಾವೆಲ್ಲರೂ ಭಾರತೀಯರು ಎಂಬಂದನ್ನು ಮರೆಯಬಾರದು. ದಾಯಾಧಿಗಳ ಹಾಗೆ ಕಾದಾಡಬಾರದು, ಇದಕ್ಕೆ ಮುಕ್ತಾಯ ಹಾಡಬೇಕು. ಆದುದರಿಂದ ಜನಾಭಿಪ್ರಾಯ ಸಂಗ್ರಹ ಮಾಡಬೇಕು, ಒಪೀನಿಯನ್ ಮೇಲೆ ತೆಗೆದುಕೊಳ್ಳಬೇಕು ಎಂಬ ಅಬಿಪ್ರಾಯಗಳನ್ನು ವ್ಯಕ್ತಪಡಿಸುವುದು ಈ ಸಂದರ್ಭದಲ್ಲಿ ಸೂಕ್ತವಾದುದಲ್ಲ. ನಿರ್ದಿಷ್ಟವಾದ ತತ್ವಗಳಿಗನುಗುಣವಾಗಿ ನಡೆಯುವುದು ಒಳ್ಳೆಯದು . ಈ ಮಾತನ್ನು ಕೂಡ ಮಹಾಜನ್‌ರವರು ಒಂದು ಕಡೆ ಪ್ರಸ್ತಾಪಮಾಡಿದ್ದಾರೆ. ಅವರ ವರದಿಯಂತೆ ನಮಗೆ ಬಂದಿರುವುದು ನಮ್ಮಿಂದ ಹೋಗಿರುವುದನ್ನು ತಮ್ಮ ಗಮನಕ್ಕೆ ತರುತ್ತೇನೆ:

"The following areas have been recommended for transfer from Mysore to Maharashtra:-

The town of Nippani with 40 villages of Nippani in Chikkodi taluk of Belgaum District. The population recommended for transfer is 1,17,783, out of which 89, 893 is

Marathi speaking, the percentage being 76.3.

Belgaum:-

9 villages of Hukkeri taluk in Belgum district out of 18 villages claimed ..........

The result is that out of 260 villages offered by Bombay State to Mysore in 1957. 227 villages covering an area of 1368 sq. miles are recommended for transfer. The population of the area recommended for transfer is 3,49,000 Kannada speaking, percentage being 57.9%."

ಈ ವಿವರಗಳು ಹಳ್ಳಿಗಳು ಎಷ್ಟು ಬಂದಿದೆ ಎಂಬುದನ್ನು ನಾನು ಹೇಳುವುದಿಲ್ಲ. ಈಗ ಉಳಿದಿರುವುದು ಈ ವರದಿಯನ್ನು ಏನು ಮಾಡಬೇಕು ಎಂಬುದು. ನಾನು ಹೇಳುತ್ತೇನೆ ಈ ವರದಿ ವರದಿಯೇ. ಯಾರಾದರೂ ಅವಾರ್ಡ್ ಅಂತ ವರ್ಣಿಸಿರಬಹುದು. This must be accepted in toto ಅಂತ ಹೇಳಬಹುದು. ನಾನು ಹೇಳುತ್ತೇನೆ ಕರ್ನಾಟಕದಿಂದ ಹೋಗಿರುವ ಖಾನಾಪುರ, ನಿಪ್ಪಾಣಿ ಈ ಭಾಗಗಳು ಇಲ್ಲಿಯೇ ಉಳಿಯಬೇಕು. ಇನ್ನು ಮಹಾರಾಷ್ಟ್ರದವರಿಗೆ ಕೊಡುತ್ತೇವೆ ಅಂತ ಹೇಳಿರತಕ್ಕ ಹಳ್ಳಿಗಳು ನಮಗೆ ಬರಬೇಕು. ಜೊತೆಗೆ ನಮಗೆ ಇನ್ನು ಬರಬೇಕಾದಂತಹ ಬೇರೆ ಭಾಗಗಳು ಏನಿದೆ ಅವನ್ನು ಪಡೆದುಕೊಳ್ಳುವುದಕ್ಕೆ ಈ ಸರ್ಕಾರ ಕ್ರಮತೆಗೆದುಕೊಳ್ಳಬೇಕು. ಕೇಂದ್ರದವರು ಅದನ್ನು ಒಪ್ಪಬೇಕು. ಈ ಗಡಿತಂಟೆಯನ್ನು ಬಗೆಹರಿಸುವುದಕ್ಕೆ ಒಂದು ಪಕ್ಷ ಉಚ್ಚ ಆಯೋಗ ನೇಮಕ ಮಾಡಲೇಬೇಕಾಗಬಹುದು ಇದನ್ನು ಮುಗಿಸೋಣ ಎಂದು ಕೆಲವರು ಹೇಳುತ್ತಾರೆ, ಅದು ಮುಗುಯಿವುದಿಲ್ಲ. ಈ ಹಿಂದೆ ಕಮಿಷನ್ ವರದಿಯನ್ನು ಒಪ್ಪಿದರೂ ಕೂಡ ಮುಗಿಯುವುದಿಲ್ಲ. ಕಾಸರಗೋಡಿನ ವಿಷಯದಲ್ಲಿ ಈಗಾಗಲೇ ನಂಬೂದ್ರಿಪಾದರವರ ಸರ್ಕಾರದವರು ಅವರ ಅಸ್ತಿತ್ವದಲ್ಲಿಲ್ಲದೇ ಇರುವಾಗ ಈ ಕಮಿಷನ್‌ನ್ನು ನೇಮಕ ಮಾಡಿದ ಒಂದು ಕಾರಣ ಮಾಡಿ ನಾವು ಈ ಒಂದು ಅವಾರ್ಡ್ ಬದ್ಧರಾಗುವುದಿಲ್ಲ ಎಂದು ಹೇಳಿ ಆಯಿತು. ಈಗಾಗಲೇ ಅಲ್ಲಿ ಎರಡು ಜನ ನಿರಪರಾಧಿಗಳ ಪ್ರಾಣ ಕೂಡ ಹೋಯಿತು. ಇನ್ನೂ ಏನೇನು ಈ ಗಡಿ ಭಾಗದಲ್ಲಿ ಆಗುತ್ತದೆಯೋ, ನಿಪ್ಪಾಣಿ ಅವರಿಗೆ ಬಂದಿದ್ದರೂ, ಅಲ್ಲಿನ ಜನರು ಬಹಳ ವ್ಯಥೆಯಿಂದ ಹೇಳಿಕೊಂಡು ಹೋಗಿದ್ದಾರೆ. ನಮ್ಮನ್ನೆಲ್ಲಾ ಕೈಬಿಡಬೇಡಿ ಎಂದು, ಅವರಿಗೆ ಏನು ಆಶ್ವಾಸನೆ ಈ ಸಬೆ ಮತ್ತು ಈ ಸರ್ಕಾರ ಕೊಡುತ್ತದೆ ಗೊತ್ತಿಲ್ಲ. ನನಗೆ ಯಾರಾದರೂ ಹೇಳಬಹುದು, ಅವರಿಗೇನೋ ಟೆರಿಟೋರಿಯಲ್ ಆಂಬಿಷನ್ ಅಂತ, ನನಗೆ ಅದೇನೂ ಇಲ್ಲ. ಹಿಂದೇನೋ 200-300 ಜನಗಳನ್ನು ಕಟ್ಟಿಕೊಂಡು ವೆಲ್ಲೂರು, ಮಧುರೆ ತನಕ ಹೋದರೂ, ಅವರ ಭುಜಬಲ, ಪರಾಕ್ರಮ, ಕತ್ತಿ ಕಠಾರಿ ಬಲದ ಮೇಲೆ ಹೋಗುತ್ತಿದ್ದರು. ಈಗ ಭಾರತದಲ್ಲಿ ನಾವು ಪ್ರಾಜಾಪ್ರಭುತ್ವದಲ್ಲಿದ್ದೇವೆ,



ನಮ್ಮ ರಾಜ್ಯವನ್ನು ದೊಡ್ಡ ರಾಷ್ಟ್ರವನ್ನಾಗಿ ವಿಸ್ತಿರಸಬೇಕೆಂಬ ಅಕಾಂಕ್ಷೆ ನಮಗೆ ಇಲ್ಲ. ವಿದ್ಯಾಭ್ಯಾಸಕ್ಕೆ ಅನುಕೂಲವಾಗಬೇಕು, ಪ್ರಜಾಪ್ರಭುತ್ವದಲ್ಲಿ ಮೈಸೂರು ರಾಜ್ಯ, ಸರ್ಕಾರ ಕನ್ನಡದಲ್ಲಿ ಹೊರಡಿಸಿರತಕ್ಕ ಹೊರಡಿಸತಕ್ಕ ಪ್ರಕಟಣೆಗಳು ಜನಕ್ಕೆ ಅರ್ಥವಾಗಬೇಕು. ಅವರು ಯಾವ ಪಟ್ಟಣದ ಕಡೆ ಅಬಿಮುಖವಾಗಿರುತ್ತರೋ ಆ ಕಡೆಗೆ ಬರುವುದಕ್ಕೆ ಅನುಕೂಲವಾಗಿರಬೇಕು, ಸಂಪರ್ಕ ವ್ಯವಸ್ಥೆಯಾಗಬೇಕು, ವ್ಯಾಪಾರಕ್ಕೆ ಮತ್ತು ಸಾಧ್ಯಾವಾದ ಮಟ್ಟಿಗೂ ತಮ್ಮ ರಾಜ್ಯದ ಕೇಂದ್ರಕ್ಕೆ ಬಂದು ವ್ಯವಹಾರ ಮಾಡುವುದಕ್ಕೆ ಒಂದು ಒಳ್ಳೆಯ ವ್ಯವಸ್ಥೆ ಇರಬೇಕು, ಈ ಅಂಶಗಳನ್ನು ನಾವು ಗಮದಲ್ಲಿಟ್ಟುಕೊಂಡು ಗಡಿ ಭಾಗದಲ್ಲಿರತಕ್ಕ ಪ್ರದೇಶಗಳನ್ನು ಈ ಭಾಷೆಯ ಆಧಾರದ ಮೇಲೆ ಮೆಜಾರಿಟಿ ಮತ್ತು ಮೈನಾರಿಟಿ ಏನಿದ್ದಾರೂ ಅದನ್ನು ಬಗೆಹರಿಸುವುದಕ್ಕೆ ಪ್ರಯತ್ನ ಮಾಡಬೇಕು. ಎಷ್ಟೇ ಬಗೆಹರಿಸಿದರೂ, ಈ ಪಾಪ್ಯುಲೇಷನ್ ಎಕ್ಸ್‌ಚೇಂಜ್ ಮಾಡುವಂತಹ ಕೆಟ್ಟ ಒಂದು ನೀತಿಯನ್ನು ಅನುಸರಿಸದೇ ಮೈನಾರಿಟಿಸ್‌ಗೆ ರಕ್ಷಣೆಯನ್ನು ಕೊಡಬೇಕಾದ್ದು ಬಹಳ ಅವಶ್ಯಕವಾಗಿರುತ್ತದೆ. ಅದಕ್ಕೆ ನಾನು ಈ ಸಭೆಯ ಮೂಲಕ ಹೇಳುತ್ತೇನೆ ಸ್ವಾಮಿ, ಈ ಗಡಿಬಡಿಯಲ್ಲಿ ಒತ್ತಾಯ ಅಂದು ಅನುಚಿತವಾದ ರೀತಿಯಲ್ಲಿ ವರ್ತಿಸಿ, ಏನೊ ಮಹಾರಾಷ್ಟ್ರದ ಭಾಗಗಳನ್ನೆಲ್ಲಾ ಕರ್ನಾಟಕದವರು ತೆಗೆದುಕೊಂಡುಬಿಟ್ಟದ್ದಾರೆ ಅನ್ನುವ ರೀತಿಯಲ್ಲಿ ಹೋರಾಟ, ಚಳುವಳಿ ಮಾಡಿ ಕೇಂದ್ರ ಸರ್ಕಾರದವನ್ನು - ಜೋನಲ್ ಕೌನ್ಸಿಲ್ ಇದ್ದಮೇಲೆ ಮತ್ತೊಂದು ಕಮಿಷನ್ ನೇಮಕ ಮಾಡಿದ್ದೇ ತಪ್ಪು ಅಂತ ನಮ್ಮ ಸ್ನೇಹಿತರ ಹೇಳುತ್ತಾರೆ - ಅದು ಏನೇ ಇರಲಿ, ಮಾಡಿದ ಮೇಲೆ ತಾವು ಬೇಕು ಅಂತ ಕೇಳಿದಂತಹ ಬೆಳಗಾಂ ತಮಗೆ ಬಂದಿಲ್ಲ ಎಂಬ ಎಂದೇ ಕಾರಣಕ್ಕಾಗಿ ಇವತ್ತು ಶ್ರೀಮಾನ್ ಚವಾಣ್ ಮತ್ತು ಅವರ ಇತರ ಸ್ನೇಹಿತರು ಏನೊಂದು ನಿಲುವನ್ನು ತೆಗೆದುಕೊಂಡಿದ್ದಾರೆ ಅದು ಖಂಡನೀಯ, ಅದನ್ನು ಅವರು ಬಿಡಬೇಕು ಮತ್ತು - ರಾಷ್ಟ್ರೀಯ ಅಬಿಮತವನ್ನು ರೂಪಿಸುತ್ತೇನೆ ಅಂತ ಚವಾಣ್‌ರವರು ಏನು ಹೇಳಿದ್ದಾರೆ. ಅದಕ್ಕೆ ಮುಂಚೆಯೇ ಅವಕಾಶ ಇತ್ತು, ಅದನ್ನು ಮೊದಲು ರೂಪಿಸಬಹುದಾಗಿತ್ತು. ಆಗ ಎಲ್ಲಾ ಕಾಂಗ್ರೆಸ್ ಮುಖಂಡರೂ ಇದ್ದರಲ್ಲಾ, ಕಾಂಗ್ರೆಸ್‌ನವರೇ ಪ್ರಧಾನಿಗಳು, ಕಾಂಗ್ರೆಸ್‌ನವರೇ ಗೃಹ ಮಂತ್ರಿಗಳು, ಕಾಂಗ್ರೆಸ್‌ನವರೇ ಮಹಾರಾಷ್ಟ್ರದಲ್ಲೂ ಮುಖ್ಯಮಂತ್ರಿಗಳು ಇಲ್ಲೂ ಕಾಂಗ್ರೆಸ್ಸಿನವರೇ ಮುಖ್ಯಮಂತ್ರಿಗಳು ಕೇರಳದಲ್ಲಿ ಒಂದು ಕಡೆ ಬಿಟ್ಟರೆ ಬಾಕಿ ಕಡೆ ಎಲ್ಲಾ ಅವರೇ, ಅವರ ಜೊತೆಯಲ್ಲಿ ಮಾತನಾಡಿ ತೀರ್ಮಾನ ಮಾಡಿ ಅಭಿಮತವನ್ನು ರೂಪಿಸಬಹುದಾಗಿತ್ತು. ಈಗ ರಾಷ್ಟ್ರ ಅಭಿಮತವನ್ನು ರೂಪಿಸುತ್ತೇನೆ ಅಂತ ಹೇಳುವುದು, ತಾವೇ ಮೊದಲು ಒಪ್ಪಿಕೊಂಡಂಥ, ಬದ್ಧವಾಗಿದ್ದಂಥ ವಚನವನ್ನು ತಾವೇ ಮುರಿದು, ಈ ಒಂದು ಸ್ಥಿತಿಯನ್ನು ತಪ್ಪಿಸಿಕೊಳ್ಳುವುದಕ್ಕೆ ತೊಡಗುತ್ತಾ ಇರತಕ್ಕ ಒಂದು ಸಂಚು ಇದು ಎಂದು ಹೇಳುತ್ತೇನೆ. ಇದನ್ನು ವಿರೋಧಿಸುತ್ತಾ, ಶ್ರೀಮತಿ ಇಂದಿರಾ ಗಾಂಧೀಜಿಯವರ ಮೇಲೆ ತಮ್ಮ ಅಧಿಕಾರ ಇದೆ ಅಂತ ಹೇಳಿ ಚವಾಣ್‌ರವರು ಒತ್ತಾಯ ಮಾಡಿದರೆ, ತನ್ನ ಅಧಿಕಾರದ ಎಲ್ಲಿ ಹೋಗುತ್ತದೆಯೋ ಎನೋ ಅಂತ ಅವರು ಭಯಪಡದೇ ಅವರು ವಚನ ಕೊಟ್ಟಂತೆ ಈ ವರದಿಯನ್ನು ಕಾನೂನುಗೊಳಿಸುವುದಕ್ಕೆ ಕ್ರಮತೆಗೆದುಕೊಳ್ಳಬೇಕು. ನಾನು ಸೂಚನೆ ಮಾಡುವುದು ಇಷ್ಟೆ. ಅದಕ್ಕೆ ತಕ್ಕ ತಿದ್ದುಪಡಿಗಳನ್ನು ಕೊಡುತ್ತೇನೆ, ಇತರ

ಭಾಗಗಳು ಎಂದರೆ ಎಸ್.ಆರ್.ಕಮಿಷನ್‌ರವರು ಕೊಟ್ಟಿರತಕ್ಕ ಭಾಗಗಳು, ಎನಿದೆ ಅದನ್ನು ಮಹಾಜನ್ ಕಮಿಷನ್ ರಿಪೋರ್ಟಿನ ಆಧಾರದ ಮೇಲೆ ಕರ್ನಾಟಕದಿಂದ ಹೊರಗೆ ತಳ್ಳುವದು ಸೂಕ್ತವಾಗುವದಿಲ್ಲ. ಆ ಭಾಗಗಳನ್ನು ಉಳಿಸಿಕೊಳ್ಳಬೇಕು, ಇನ್ನು ಬರಬೇಕಾದ ಭಾಗಗಳನ್ನು ನಾವು ಪಡೆದುಕೊಳ್ಳುವದಕ್ಕೆ ಪ್ರಯತ್ನ ಮಾಡಬೇಕು ಎಂದು ಈ ಸಂದರ್ಭದಲ್ಲಿ ತಿಳಿಸಿ ನನಗೆ ಈ ವರದಿಯ ಮೇಲೆ ಮಾತನಾಡುವುದಕ್ಕೆ ಮೊದಲು ಮಾತನಾಡುವಂತಹ ಅವಕಾಶವನ್ನು ಕೊಟ್ಟದ್ದಕ್ಕಾಗಿ ಮಾನ್ಯ ವಿರೋಧ ಪಕ್ಷದ ಗೆಳೆಯರಿಗೂ ಮತ್ತು ತಮಗೂ ವಂದಿಸಿ ನನ್ನ ಮಾತನ್ನು ಮುಗಿಸುತ್ತೇನೆ.



## ರೈತರ ಸ್ಥಿತಿಗತಿಗಳನ್ನು ಕುರಿತು (1970)

ನಮ್ಮ ಪಕ್ಷದ ಸದಸ್ಯರಾದ ಶ್ರೀಮಾನ್ ಎಂ. ನಾಗಪ್ಪನವರು ಅನೇಕ ಖೋತಾ ನಿರ್ಣಯಗಳನ್ನು ಕೊಟ್ಟಿದ್ದಾರೆ. ಅವರು ಈವೊತ್ತು ಡೆಲ್ಲಿಗೆ ಹೋಗಿರುವುದರಿಂದ ಅವರ ಪರವಾಗಿಯೂ ಕೂಡ ನಾನು ಮಾತನಾಡಲು ಇಚ್ಛಿಪಡುತ್ತೇನೆ.

ಮೊದಲನೆಯದಾಗಿ ರಾಜಸ್ವ ಖಾತೆ ರೆವಿನ್ಯೂ ಇಲಾಖೆ ಏನು ಇದೆ ಅದರ ಬಗ್ಗೆ ನಾನು ಕೆಲವು ಮಾತುಗಳನ್ನಾಡುತ್ತೇನೆ. ರಾಜ್ಯದಲ್ಲಿ 235 ಲಕ್ಷ ಜನರು ಇದ್ದಾರೆ. ಒಂದೆರಡು ಕೋಟಿ ಭೂಮಿ ಸಾಗುವಳಿ ಆಗತಕ್ಕಂಥಾದ್ದು ಇದೆ. ಆ ಪ್ರಕಾರ ಭೂಮಿಯನ್ನು ಅವಲಂಭಿಸಿ ಜೀವನ ಮಾಡತಕಂಥ ಜನರಿಗೆ ಎಲ್ಲ ಭೂಮಿಯನ್ನೂ ಹಂಚುವುದಾದರೆ ತಲಾ ಒಬ್ಬರಿಗೆ ಒಂದು ಎಕರೆ ಬರುತ್ತದೆ. ಹಾಗಾದರೆ 5 ಜನರ ಕುಟುಂಬಕ್ಕೆ 5 ಎಕರೆ ಬರುತ್ತದೆ. ಆದುದರಿಂದ ಸಾಮಾನ್ಯವಾಗಿ ಒಂದು ರೈತ ಕುಟುಂಬಕ್ಕೆ 5 ಎಕರೆ ಇರಬೇಕು, 7 ಎಕರೆ ಇರಬೇಕು ಹೆಚ್ಚು ಎಂದರೆ 21 ಎಕರೆ ಇರಬೇಕು. ಬೇಕಾದರೆ 30 ಎಕರೆ ಬೇಕಾದರೂ ಇರಬಹುದು. ಕನಿಷ್ಠ ಮಿತಿ ಎಷ್ಟು ಹಾಕಿದ್ದೀರೋ ಅದರ ಮೂರು ಪಟ್ಟು ಜಮೀನು ಕೆಲವರ ಹತ್ತಿರ ಇರಬಹುದು. ಒಂದು ಬೇಸಾಯದ ಕುಟುಂಬಕ್ಕೆ ನಿಯಮಕ್ಕಿಂತ ಹೆಚ್ಚು ಭೂಮಿಯನ್ನು ಬಿಡುವಂತಹ ಭೂಸುಧಾರಣಾ ನೀತಿಯನ್ನು ನಾನು ವಿರೋಧ ಮಾಡುತ್ತೇನೆ. ಹಿಂದೆ ಸರ್ಕಾರದವರು ಈಗಿರುವ ರೀತಿಯಲ್ಲಿ ಕಂದಾಯವನ್ನು ರದ್ದು ಮಾಡುತ್ತೇವೆಂದು ಹೇಳಿದ್ದರು. ಕಾರಣಾಂತರದಿಂದ ಅದನ್ನು ಕಾರ್ಯಗತ ಮಾಡಲಿಲ್ಲ. ಅನಾರ್ಥಿಕವಾದಂಥ ಭೂಹಿಡುವಳಿಯ ಮೇಲೆ ಭೂಕಂದಾಯವನ್ನು ರದ್ದು ಮಾಡಬೇಕು ಎಂಬುದೇ ನಮ್ಮ ಬೇಡಿಕೆಯಾಗಿದೆ. ಭೂಕಂದಾಯವನ್ನು ರದ್ದು ಮಾಡುತ್ತೀರೋ ಇಲ್ಲವೋ ಮಾಡುವುದಾದರೆ ಯಾವಾಗ ಮಾಡುತ್ತೀರಿ? ಮಾಡದಿದ್ದರೆ ಕಾರಣ ಏನು ಎಂಬುದನ್ನು ಮಾನ್ಯ ಮಂತ್ರಿಗಳು ತಿಳಿಸಬೇಕು. ಮತ್ತು ಈಗ ಎಷ್ಟು ಬೂಕಂದಾಯ ಬರುತ್ತಿದೆ ಎಂಬುದನ್ನು ಸಹ ತಿಳಿಸಬೇಕು. ಈ ದೇಶದಲ್ಲಿ ಭೂ ಸಮಸ್ಯೆಯನ್ನು ಕಳೆದ 22 ವರ್ಷಗಳಿಂದಲೂ ಕೂಡ ಪರಿಹರಿಸದೇ ಇರುವುದರಿಂದ ಇವತ್ತು ಭೂಮಾಲೀಕರಿಗೂ ಮತ್ತು ಗೇಣಿದಾರರಿಗೂ ಜಗಳವಾಗುವುದಕ್ಕೆ ಕಾರಣವಾಗಿದೆ. ಇದೇ ಪರಿಸ್ಥಿತಿ ಭೂಹೀನರಿಗೂ, ಅಲ್ಪಸ್ವಲ್ಪ ಭೂಮಿ ಇರುವವರಿಗೂ, ನೀರಾವರಿ ಸೌಕರ್ಯ ಇಲ್ಲದಿರುವವರಿಗೂ ಉಂಟಾಗಿದೆ. ಇದರಿಂದ ಒಬ್ಬರಿಗೊಬ್ಬರಿಗೆ ವಾದವಿವಾದವಾಗುವುದಕ್ಕೆ ಜಗಳವಾಗುವುದಕ್ಕೆ ಅಶಾಂತಿಯುಂಟಾಗುವುದಕ್ಕೆ ಕಾರಣವಾಗಿದೆ. ಇದನ್ನು ಸಕಾರ್ಕರದವರು ಪರಿಹರಿಸುತ್ತಾರೆಂದು ನಾವು ಕಳೆದ 22 ವರ್ಷಗಳಿಂದಲೂ ಕಾದೆವು. ಇನ್ನು ಕಾಯುವುದು ಸಾಧ್ಯವಿಲ್ಲ. ಮುಂದಿನ ಸಾಲಿನಿಂದ ಗೇಣಿಯನ್ನು ಬೂಮಾಲೀಕರಿಗೆ ಕೊಡುವುದಿಲ್ಲ ಎಂಬುದನ್ನು ನಾನು ಗೇಣಿದಾರರ ಪರವಾಗಿ ಮತ್ತೊಮ್ಮೆ ಹೇಳುತ್ತೇನೆ. ಕಳೆದ 22 ವರ್ಷಗಳಿಂದ ಗೇಣಿಯನ್ನು ಕೊಟ್ಟಿದ್ದಾಗಿದೆ. ಇನ್ನು ಮುಂದೆ ಕೊಡುವುದಕ್ಕಾಗುವುದಿಲ್ಲ. ಭೂಮಾಲೀಕರು ಇನ್ನು ಮುಂದೆ ನೇರವಾಗಿ ಸರ್ಕಾರದಿಂದ ಪರಿಹಾರವನ್ನು ಪಡೆದುಕೆಳ್ಳಬೇಕೆಂದು ಹೇಳುತ್ತೇನೆ. ಸಣ್ಣ ಭೂಮಾಲೀಕರು, ವಿಧವೆಯರು,

---

ವಿಧಾನ ಸಭೆ ನಡವಳಿಕೆ: ದಿನಾಂಕ 18.3.1970

ಅಪ್ರಾಪ್ತವಯಸ್ಕರು, ಬುದ್ಧಿವಿಕಲ್ಪವಾಗಿರುವವರು ತಾವೇ ಸ್ವತಃ ಜಮೀನನ್ನು ಸಾಗುವಳಿ ಮಾಡಲು ಶಕ್ತಿ ಇಲ್ಲದಿರುವವರು ಯಾರಿದ್ದಾರೆ ಅವರು ಪುನರ್ ವ್ಯವಸ್ಥೆ ಮಾಡಿಕೊಳ್ಳಲು ಸರ್ಕಾರದವರು ಅವರಿಗೆ ಪರಿಹಾರ ಕೊಡಬೇಕು. 50 ,ಸಾವಿರ ರೂಪಾಯಿಗಳಿಂದ ಒಂದು ಲಕ್ಷ ರೂಪಾಯಿಗಳವರೆಗೆ ಯಾರು ಯಾರಿಗೆ ಪರಿಹಾರ ಕೊಡಬೇಕಾಗುತ್ತದೋ ಅಂಥವರಿಗೆ ಸರ್ಕಾರದವರು ಒಂದೇ ಗಂಟಿನಲ್ಲಿ ಹಣವನ್ನು ಕೊಡಬಹುದು. ಎಂದರೆ ಅವರು ಪುನರ್‌ವ್ಯವಸ್ಥೆ ಮಾಡಿಕೆಳ್ಳುವುದಕ್ಕೆ ಅನುಕೂಲವಾಗುತ್ತದೆ. ಒಂದು ಲಕ್ಷದ ಮೇಲೆ ಪರಿಹಾರ ಕೊಡಬೇಕಾದವರಿಗೆ ಅದನ್ನು 20 ವರ್ಷಕ್ಕೆ ಕಂತುಗಳಲ್ಲಿ ಕೊಡಬೇಕೆಂದು ಹೇಳುತ್ತೇನೆ. ಅವರು ವರ್ಷ ವರ್ಷೇ ತೆಗೆದುಕೊಳ್ಳುವುದಕ್ಕೆ ವ್ಯವಸ್ಥೆ ಮಾಡಬೇಕು. ಇಂಥವರಿಗೆ ನಗದಾಗಿ ಕೊಡುವ ಪ್ರಶ್ನೆ ನಮ್ಮ ಮುಂದೆ ಉದ್ಭವಿಸುವುದಿಲ್ಲ. ಪರಿಹಾರ ಕೊಡಬೇಕಾದರೆ 64 ಕೋಟಿ ಠೂಪಾಯಿಗಳು ಬೇಕಾಗುತ್ತದೆಂದು ಹೇಳುತ್ತಾರೆ. ಇಷ್ಟು ಹಣ ಕೊಡಲು ಸರ್ಕಾರ ಆರ್ಥಿಕವಾಗಿ ಉತ್ತಮ ಸ್ಥಿತಿಯಲ್ಲಿ ಇಲ್ಲ. ಆದ್ದರಿಂದ ಪರಿಹಾರವನ್ನು ಬಾಂಡ್ ರೂಪದಲ್ಲಿ ಕೊಡಬಹುದೆಂದು ಸೂಚಿಸುತ್ತೇನೆ. ಈ ಭೂ ಸಮಸ್ಯೆಯನ್ನು 1970ರ ಆಖೈರೊಳಗೆ ಮುಗಿಸಬೇಕೆಂದು ಹೇಳುತ್ತೇನೆ. ನಾಲ್ಕು ಲಕ್ಷ ಪಟ್ಟಾ ಪುಸ್ತಕಗಳನ್ನು ಪ್ರಿಂಟ್ ಮಾಡಿಸಿ ರೈತರಿಗೆ ಹಂಚುತ್ತೇವೆಂದು ಹೇಳಿದರು. ಕೆಲವರಿಗೆ ಹಂಚಿಕೆಯಾಗಿದೆ, ಮತ್ತೆ ಕೆಲವರಿಗೆ ಹಂಚಿಕೆಯಾಗಿಲ್ಲ. ಈ ವಿಚಾರದಲ್ಲಿ ತುರ್ತು ಕಾರ್ಯಕ್ರಮ ಕೈಗೊಳ್ಳಬೇಕೆಂದು ಹೇಲುತ್ತೇನೆ. ನಮ್ಮ ಹಳೆಯ ಮೈಸೂರು ಭಾಗದಲ್ಲಿ ರೆಕಾರ್ಡ್ ಆಫ್ ರೈಟ್ಸ್ ಅಸ್ತವ್ಯಸ್ತವಾಗಿದೆ. ಕಳೆದ 22 ವರ್ಷಗಳಿಂದ ಸರಿಯಾಗಿ ಪಹಣಿ ಲೆಕ್ಕವನ್ನು ಬರೆದಿಲ್ಲ. ಇದನ್ನು ಸರಿಪಡಿಸಬೇಕು. ಭಾರೀ ನೀರಾವರಿ ಯೋಜನೆಗಳಿಗಾಗಿ ನೆನ್ನೆ ತಾನೆ ಈ ಸಭೆ ಬಾರಿ ಹಣವನ್ನು ಮಂಜೂರು ಮಾಡಿತು. ನಮ್ಮ ರಾಜ್ಯದಲ್ಲಿ ನೀರಾವಟ ಒಳಪಟ್ಟಂತಹ ಬೂಮಿ ಬಹಳ ಕಡಿಮೆ ಇದೆ. ಯೋಜನೆಗಳನ್ನು ಕೈಕೊಳ್ಳಲು ಅನೇಕ ಅಡ್ಡಿಗಳು ಬರುತ್ತಿವೆ. ಆದರೂ ಈ ಯೋಜನೆಗಳನ್ನು ಮುಗಿಸಬೇಕಾಗಿದೆ. ಈಗ ವಾಟರ್ ರೇಟನ್ನು ಹಾಕುತ್ತಿದ್ದೀರಿ. ಪಾಳೆಗಾರರು, ಮಹಾರಾಜರು ಕಟ್ಟಿಸಿರತಕ್ಕಂಥ ಕೆರೆಕಟ್ಟೆಗಳ ನೀರಿಗೆ ಮತ್ತು ಮಳೆಯ ಆಶ್ರಯದಲ್ಲಿ ಬೆಳೆಯತಕ್ಕಂಥ ಬೆಳೆಗಳಿಗೆ ವಾಟರ್ ರೇಟನ್ನು ಹಾಕಬಾರದೆಂದು ಇಂಟಿಗ್ರೇಷನ್‌ಆಗುವುದಕ್ಕೆ ಮುಂಚೆ ಸರ್ಕಾರ ಒಂದು ಕಾನೂನನ್ನು ಮಾಡಿತ್ತು. ಮತ್ತು ಆ ರೀತಿ ಆಶ್ವಾಸನೆ ಕೊಟ್ಟಿದ್ದರೂ ಕೂಡ ಕಾನೂನನ್ನು ತಿದ್ದುಪಡಿ ಮಾಡಿ ಈ ಕೆರೆಕಟ್ಟೆಗಳ ಆಶ್ರಯದಲ್ಲಿ ಬೆಳೆಯತಕ್ಕಂಥ ಜಮೀನಿನ ಮೇಲೂ ವಾಟರ್ ರೇಟನ್ನು ಹಾಕುತ್ತಿದ್ದೀರಿ. ಇದು ನ್ಯಾಯವಲ್ಲ, ಧರ್ಮವಲ್ಲ. ಆ ರೀತಿ ಹಾಕುವುದಕ್ಕೆ ನಿಮಗೆ ಹಕ್ಕೂ ಕೂಡ ಬರುವುದಿಲ್ಲ. 1947ರಿಂದೀಚೆಗೆ ಸಾರ್ವಜನಿಕರ ಹಣದಿಂದ ಯಾವ ಕೆರೆಕಟ್ಟೆಗಳನ್ನು ಮತ್ತು ಪ್ರಾಜೆಕ್ಟ್‌ಗಳನ್ನು ಕಟ್ಟಿಸಿದ್ದಿರೋ ಅಂತಹ ಭಾಗಗಳಲ್ಲಿ ಮಾತ್ರ ನೀರಿನ ತೆರಿಗೆಯನ್ನು ವಿಧಿಸುವುದಕ್ಕೆ ನಿಮಗೆ ಹಕ್ಕಿದೆಯೇ ಹೊರತು ಹಳೆಯ ಕಾಲದ ಕೆರೆಗಳ ನೀರನ್ನು ಮತ್ತು ಸ್ವಾಭಾವಿಕವಾಗಿ ಬರುವ ಮಳೆಯ ನೀರನ್ನು ಉಪಯೋಗಿಸಿಕೊಂಡು ವ್ಯವಸಾಯ ಮಾಡುವವರ ಮೇಲೆ ವಾಟರ್ ರೇಟನ್ನು ಹಾಕುವುದಕ್ಕೆ ಕಾನೂನು ಪ್ರಕಾರ ನಿಮಗೆ ಅಧಿಕಾರವಿಲ್ಲ. ಆದ್ದರಿಂದ ಸರ್ಕಾರದವರು ಇದನ್ನು ಪುನರ್ವಿಮರ್ಶೆ ಮಾಡಿ ಸೂಕ್ತ ಕಾನೂನನ್ನು ಮಾಡಬೇಕು. ಇದು ಅಗತ್ಯವಾಗಿ ಆಗಬೇಕಾದ ಕೆಲಸ. ಇವತ್ತು



ಕಂದಾಯ ವಸೂಲಿ ಮಾಡುವ ವಿಚಾರದಲ್ಲಿ ಕಳ್ಳಾಟ ಮಾಡುತ್ತಿದ್ದೀರಿ. ಕೆಲವು ಕಡೆಗಳಲ್ಲಿ ಕ್ಷಾಮ ಇದೆ ಎಂದು ಕಂದಾಯವನ್ನು ಮಾಫಿ ಮಾಡುತ್ತೀರಿ. ಮಳೆ ಬೆಳೆ ಆಗದೆ ಆ ವರ್ಷದಲ್ಲಿ ಮಾಫಿ ಮಾಡಿದ ಕಂದಾಯವನ್ನು ಸಹ ವಸೂಲಿ ಮಾಡುವುದಕ್ಕೆ ಹೊರಡುತ್ತೀರಿ. ಬ್ರಿಟೀಷರ ಕಾಲದಲ್ಲಿ ಸರ್ವೆಯಾದ ಮೇಲೆ ಮತ್ತೆ ತಾವು ಸರ್ವೆ ಮಾಡಿಸಿಲ್ಲ. ಕಳೆದ 5-6 ವರ್ಷಗಳಲ್ಲಿ ಬೇಜವಾಬ್ದಾರಿಯುತವಾದ ಸರ್ವೆ ಮಾಡಿ ಹಿಂದೆ ಏನು ಸರ್ವೆ ಮಾಡಿದ ಲೆಕ್ಕ ಇತ್ತೋ ಅದರ ಲೆಕ್ಕವನ್ನು ತೆಗೆದುಕೊಂಡು ಗುಣಾಕಾರ ಮಾಡಿ 20 ರೂಪಾಯಿ ಕಂದಾಯ ಇದ್ದ ಕಡೆ 40 ರೂಪಾಯಿ ಎಂದು 40 ರೂಪಾಯಿ ಇದ್ದ ಕಡೆ 80 ರೂಪಾಯಿಗಳು ಎಂದು ನಿಗದಿ ಮಾಡಿದ್ದೀರಿ. ಯಾವ ಜಮೀನನ್ನು ಕೂಡ ಸರಿಯಾಗಿ ಅಳತೆ ಮಾಡಿಲ್ಲ. ನಿಮ್ಮ ಹತ್ತಿರ ಸರಿಯಾದ ಸರ್ವೆ ನಂಬರಾಗಲೀ ನಕಾಶೆಯಾಗಲೀ ಇಲ್ಲ. ಒಂದು ಬಾಳೆ ಮರ ಇದ್ದರೆ ಆ ಭಾಗವನ್ನು ಬಾಗಾಯಿತ್ತು ಜಮೀನು ಎಂದು ಟ್ರೀಟ್ ಮಾಡಿ 20 ರೂಪಾಯಿ ಕಂದಾಯವನ್ನು 60 ರೂಪಾಯಿ ಮಾಡಿದ್ದೀರಿ. ಈ ಪ್ರಕಾರ ಹೊಲಸು ಮಾಡಿ ಇಟ್ಟಿದ್ದೀರಿ. ರೆವಿನ್ಯೂ ಭೂಮಿ ಎಷ್ಟಿದೆ, ಫಾರೆಸ್ಟ್ ಭೂಮಿ ಎಷ್ಟಿದೆ, ಬಗರೆ ಹುಕುಂ ಆಗುತ್ತಿರುವ ಭೂಮಿ ಎಷ್ಟು ಇದೆ, ಹಂಚಿಕೆಯಾಗುವುದಕ್ಕೆ ಯೋಗ್ಯವಾದ ಭೂಮಿ ಎಷ್ಟು ಇದೆ, ಖಾಸಗೀ ಜಮೀನು ಎಷ್ಟಿದೆ ಇದನ್ನೆಲ್ಲಾ ಸರಿಯಾಗಿ ಸರ್ವೆ ಮಾಡಿ ಒಂದು ವಿವರವಾದ ಪಟ್ಟಿಯನ್ನು ನಮ್ಮ ಮುಂದೆ ಇಡಬೇಕು. ಭೂಸುಧಾರಣೆ ಸಂಬಂಧದಲ್ಲಿ ಜತ್ತಿ ಸಮಿತಿಯವರು ಕೊಟ್ಟಿರುರ ಅಂಕಿಅಂಶಗಳು ಸಮರ್ಪಕವಾಗಿಲ್ಲ. ಅದರಲ್ಲಿ ರಿಪರೀತ ಹೆಚ್ಚು ಕಡಿಮೆಯಾಗಿದೆ. ಶಾನುಭೋಗರು ಸರಿಯಾಗಿ ಲೆಕ್ಕ ಬರೆಯದ ಕಾರಣ ಖುಷ್ಕಿ ಜಮೀನು ತರಿ ಜಮೀನಾಗಿದೆ, ತರಿ ಜಮೀನು ಬಾಗಾಯಿತು ಆಗಿದೆ. ಆದಕಾರಣ ಸರಿಯಾದ ಸರ್ವೆ ಆಫೀಸರನ್ನು ನೇಮಕ ಮಾಡಿ ಮೈಸೂರು ರಾಜ್ಯದಲ್ಲಿ ಖುಷ್ಕಿ ಜಮೀನು ಎಷ್ಟಿದೆ, ತರಿ ಜಮೀನು ಎಷ್ಟಿದೆ, ಬಾಗಾಯಿತು ಎಷ್ಟಿದೆ ಮತ್ತು ನಿಮ್ಮ ಸ್ಟ್ಯಾಂಡರ್ಡ್ ಎಕರೆ ಪ್ರಕಾರ ಎಷ್ಟೆಷ್ಟು ಜಮೀನು ಇದೆ, ಪಾರೆಸ್ಟ್‌ಗೆ ಸಂಬಂಧಪಟ್ಟಂತೆ ಸಾಗುವಳಿಗೆ ಯೋಗ್ಯವಾದ ಬೂಮಿ ಎಷ್ಟಿದೆ ಇದನ್ನೆಲ್ಲಾ ಲೆಕ್ಕ ಮಾಡಿ ಸಭೆಯ ಮುಂದೆ ಇಡಬೇಕು.

1970ನೆಯ ಇಸವಿಯಲ್ಲಿ ಆಖೈರಾಗಿ ಸರ್ಕಾರ ಸಂಪೂರ್ಣವಾಗಿ ಇದರ ಲೆಕ್ಕ ಮಾಡಿಸಬೇಕು. ಲೆಕ್ಕ ಕನ್ನಡಿ ಇದ್ದ ಹಾಗೆ ಇರಬೇಕು. ಶಿವಮೊಗ್ಗ ಜಿಲ್ಲೆಯಲ್ಲಿ ಆರಗ ಗ್ರಾಮದಲ್ಲಿ ಹಿರೇಕೆರೆ ಇದೆ. ಅಲ್ಲಿ ನೀರು ಇದೆಯೇ, ಅದರ ಅಚ್ಚುಕಟ್ಟು ಎಷ್ಟು, ಖುಷ್ಕಿ ಎಷ್ಟು ಎಕರೆ ಇದೆಯೆಂದು ಕೇಳಿದರೆ ಕೂಡಲೇ ಹೇಳುವ ಹಾಗೆ ಇರಬೇಕು. ಪುಸ್ತಕ ನೋಡಿ ಹೇಳುತ್ತೇನೆ ಎಂದು ಹೇಳಿದರೆ ಅದನ್ನು ಕೇಳುವುದಕ್ಕಾಗುವುದಿಲ್ಲ. ಈಗಾಗಲೇ 22 ವರ್ಷಗಳು ಕಳೆದಿವೆ. ಈ ಬಗ್ಗೆ ಇನ್ನೂ ಏನೂ ಮಾಡಿಲ್ಲ. 25 ಸಾವಿರ ಹಳ್ಳಿಗಳಲ್ಲಿ ವಾಸ ಮಾಡತಕ್ಕವರು ಸುಮಾರು ಎರಡು ಕೋಟಿ ಜನರು ಇದ್ದಾರೆ. ಒಂದು ಕೋಟಿ 20 ಲಕ್ಷ ಜನ ಭೂಮಿಯನ್ನು ಆಶ್ರಯಿಸಿ ಜೀವನ ಮಾಡುತ್ತಿದ್ದಾರೆ. ಶೇಕಡಾ 25 ಪರ್ಸೆಂಟ್ ನೀರಾವರಿ ಮಾಡಿದರೂ ಶೇಕಡಾ 75 ಭಾಗ ಜಮೀನು ಮಳೆ ಬಂದರೆ ಬೆಳೆಯಾಗುತ್ತದೆ. ಇಲ್ಲದಿದ್ದರೆ ಬೆಳೆ ಆಗುವುದಿಲ್ಲ. ಕೆಲವು ಸಂದರ್ಭದಲ್ಲಿ ಬೀಜ ಕೂಡ ಕೈಗೆ ಸಿಕ್ಕುವುದಿಲ್ಲ.

ಜೋಳದ ಬೆಳೆ ಹಾಳಾಗಿ ಹೋಗುತ್ತದೆ. ಗಂಡ ಹೆಂಡತಿ ಇಬ್ಬರೂ ಉತ್ತು ಬಿತ್ತು ವ್ಯವಸಾಯ ಮಾಡುತ್ತಾರೆ. ಆದರೆ ಅವರಿಗೆ ಅವರು ಪಡತಕ್ಕ ಶ್ರಮಕ್ಕೆ ತಕ್ಕ ಪ್ರತಿಫಲ ಸಿಕ್ಕುವುದಿಲ್ಲ. ಹೀಗಿರುವಾಗ ಇವೊತ್ತು ದುಪ್ಪಟ್ಟು, ಮೂರು ಪಟ್ಟು, 5 ಪಟ್ಟು ಕಂದಾಯವನ್ನು ವಸೂಲು ಮಾಡಬೇಕೆಂದು ರೈತರಿಗೆ ತಾವು ನೋಟೀಸು ಕೊಡುತ್ತಿದ್ದೀರಿ, ಇದನ್ನು ನಿಲ್ಲಿಸಬೇಕು. ಗ್ರಾಮಾವಾರು ಸರ್ವೆ ಮಾಡಿ ಆದರ ಪ್ರತಿಯೊಂದು ಗಾತ್ರವನ್ನು ವಿಂಗಡಿಸಿ ಆದರ ಆಧಾರದ ಮೇಲೆ ಕಂದಾಯವನ್ನು ವಸೂಲು ಮಾಡುವುದಕ್ಕೆ ತಹಶೀಲ್ದಾರರು, ಶ್ಯಾನುಭೋಗರು, ರೆವಿನ್ಯೂ ಇನ್‌ಸ್ಪೆಕ್ಟರು ಮುಂತಾದ ಕಂದಾಯವನ್ನು ಕಲೆಕ್ಟ್ ಮಾಡತಕ್ಕ ಎಲ್ಲಾ ಅಧಿಕಾರಿಗಳಿಗೂ ಒಂದು ಸ್ಪಷ್ಟವಾದ ಆಜ್ಞೆಯನ್ನು ಸರ್ಕಾರ ಹೊರಡಿಸಬೇಕೆಂದು ನಾನು ರಾಜ್ಯದ ರೈತರ ಪರವಾಗಿ ತಮ್ಮನ್ನು ಒತ್ತಾಯಪಡಿಸುತ್ತೇನೆ. ಈಗ ಶಾಸ್ತ್ರೀಯವಾದ ರೀತಿಯಲ್ಲಿ ಆಯಾ ಜಮೀನಿಗೆ ಅನುಗುಣವಾಗಿ ಕಂದಾಯವನ್ನು ವಸೂಲು ಮಾಡುತ್ತಿಲ್ಲ. ದುಡ್ಡು ಇದ್ದವರು ಕಂದಾಯ ಕೊಡುವುದಕ್ಕೆ ಯೋಗ್ಯತೆ ಇರುವವರು ಕಂದಾಯವನ್ನು ಕೊಡಲಿ, ಅಂಥವರ ಮೇಲೆ ಇವರು ಕಂದಾಯವನ್ನು ರಿಧಿಸುವುದಿಲ್ಲ. ಆದ್ದರಿಂದ ಕಂದಾಯವನ್ನು ವಸೂಲು ಮಾಡುವುದಿಲ್ಲ. ಬಡವರ ಮೇಲೆ ಹೆಚ್ಚು ಕಂದಾಯವನ್ನು ಹಾಕಿ ಅವನಿಗೆ ಹಾಕಿ ಅವನಿಗೆ ಇದ್ದಂತ ಮನೆಯನ್ನು ಹರಾಜು ಮಾಡಿಸಿ ಅವನಿಂದ ಕಂದಾಯವನ್ನು ವಸೂಲು ಮಾಡುತ್ತಾರೆ. ಅನಾರ್ಥಿಕ ಹಿಡುವಳಿಯ ಮೇಲೆ, ಆರ್ಥಿಕವಾಗಿ ಸಬಲವಲ್ಲದೇ ಇರತಕ್ಕ ಸಣ್ಣ ಹಿಡುವಳಿಗಳ ಮೇಲೆ ಕಂದಾಯವನ್ನು ರದ್ದು ಮಾಡಬೇಕು. ಕೃಷಿ ಬೂಮಿಯನ್ನು ಪ್ಲಾಂಟರುಗಳಿಗೆ ಕೊಡಲಾಗಿದೆ. ಈ ರೀತಿಯಾಗಿ ಶಿವಮೊಗ್ಗ ಜಿಲ್ಲೆಯಲ್ಲಿ ಸುಮಾರು 2-3 ಸಾವಿರ ಎಕರೆ ಬೇಸಾಯದ ಜಮೀನನ್ನು ಬೇರೆ ಯಾರು ಯಾರಿಗೋ ಕೊಟ್ಟಿದ್ದಾರೆ. ಶಿವಮೊಗ್ಗಾದಲ್ಲಿ ಷುಗರ್ ಕೇನ್ ಕಂಪೆನಿಯವರು ಸ್ವಂತವಾಗಿ ಕಬ್ಬು ಬೆಳೆಯುತ್ತಾರೆ. ಅವರು ಎಷ್ಟೋ ಸಾವಿರ ರೂಪಾಯಿಗಳ ಕಂದಾಯದ ಬಾಕಿ ಕೊಡಬೇಕಾಗಿದೆ. ಅದನ್ನು ಸಂಬಂಧಪಟ್ಟ ಜಿಲ್ಲಾಧಿಕಾರಿಗಳು ವ್ಯವಹಾರ ಮಾಡುತ್ತಿದ್ದಾರೆ. ಆ ಕಂಪೆನಿಯವರಲ್ಲಿ ಇಷ್ಟು ಕಂದಾಯವನ್ನು ರೈಟ್ ಆಫ್ ಮಾಡಿದರೆ ನನಗೆ ಎಷ್ಟು ಕೊಡುತ್ತೀರಿ, ಎಂದು ಅದಿಕಾರಿಗಲು ಕೇಳುತ್ತಾರೆ. ಇಂಥಾ ವ್ಯವಹಾರವನ್ನು ಮಾಡಿ ದೇಂಶವನ್ನು ಉದ್ಧಾರ ಮಾಡುವುದಕ್ಕೆ ಹೊರಟಿರುವುದರಿಂದ ಬಹಳ ಕಷ್ಟವಾಗುತ್ತದೆ. ಇದರಲ್ಲಿ ಒಂದು ಕ್ರಾಂತಿಕರವಾದ ಬದಲಾವಣೆ ಆಗಬೇಕು. ಇಲ್ಲಿ ಒಂದು ಸ್ಟಾಲಿನ್ ಪದ್ಧತಿಯನ್ನು ಮೆಕಾರ್ಥಿ ಪದ್ಧತಿಯನ್ನು ಅನುಸರಿಸಿ ಕಾಲಹರಣ ಮಾಡುತ್ತಿದ್ದಾರೆ. ಇದರಿಂದ ದೇಶ ಅಗ್ನಿಕುಂಡವಾಗಿದೆ. ಜಮೀನು ಒಬ್ಬನದು, ಸಾಗು ಮಾಡುವರನು ಒಬ್ಬ, ದನ್ನು ಉಪಯೋಗ ಮಾಡುವವನು ಒಬ್ಬ. ಈ ಸ್ಥಿತಿ ದೇಶದಲ್ಲಿ ಬಂದಿದೆ. ಈಗ ನಾನು ಅಸೆಂಬ್ಲಿ ಮೆಂಬರಾಗಿದ್ದೇನೆ ಎಂದು ಕೋರ್ಟಿನಲ್ಲಿ ಸ್ಟೇ ಆರ್ಡರು ತೆಗೆದುಕೊಂಡು ಬಂದು ತೀರ್ಥಹಳ್ಳಿಯಲ್ಲಿ ಯಾರ ಜಮೀನಿನಲ್ಲಿ ಯಾವ ಬೆಳೆಯನ್ನಾದರೂ ಕೊಯ್ದುಕೊಂಡು ಬರಬಹುದು. ಆ ಒಂದು ಪರಿಸ್ಥಿತಿ ಉಂಟಾಗಿದೆ. ಈ ಪದ್ಧತಿ ಇರತಕ್ಕ ರಾಜ್ಯದಲ್ಲಿ ಈ ಸರ್ಕಾರ ಇದೆಯೆಂದು ಹೇಳುವುದಕ್ಕೆ ನಾಚಿಕೆಯಾಗುತ್ತದೆ. ಆದ್ದರಿಂದ ಇಲ್ಲಿ ಇದರ ಬಗ್ಗೆ ವಿಶೇಷವಾದ ಗಮನ ಕೊಡಬೇಕು ಎಂದು ನಾನು ಹೇಳುತ್ತೇನೆ.



ಫ್ಯಾಮಿನ್ ರಿಲೀಫ್ ಬಗ್ಗೆ ಹೇಳಬೇಕಾದರೆ, ಈ ರಿಲೀಫ್ ಕಾಮಗಾರಿಯನ್ನು ಕೈಗೊಳ್ಳುವಾಗ ಶಾಶ್ವತವಾದ ಪರಿಹಾರ ಕಾಮಗಾರಿಗಳನ್ನು ಮಾಡಬೇಕು. ಹಣವನ್ನು ಹಾಳು ಮಾಡಬಾರದು ನಾನು ನೋಡಿದ್ದೇನೆ. ಫ್ಯಾಮಿನ್ ರಿಲೀಫ್ ಎಂದರೆ ಕೆಲವು ಆಫೀಸರು ಯಾರದೋ ಹೆಬ್ಬೆಟ್ಟು ಒತ್ತಿಸಿಕೊಂಡು ಹಣ ಖರ್ಚು ಹಾಕಿ ಕೆಲಸ ಮಾಡದೇ ಇರುವಂಥಾದ್ದು ಉಪಯೋಗವಿಲ್ಲ. ರಿಲೀಫ್ ಕಾಮಗಾರಿಗಳನ್ನು ಮಾಡುವಾಗ ಶಾಶ್ವತವಾದ ಮತ್ತು ಜನಗಳಿಗೆ ಉಪಯೋಗವಾಗುವಂತಹ ಕೆಲಸ ಕಾರ್ಯಗಳನ್ನು ಮಾಡಬೇಕು. ಬಾವಿಯಲ್ಲಿ ನೀರಿಲ್ಲ, ಕಟ್ಟಿರುವ ಕೆರೆಯಲ್ಲಿ ನೀರಿಲ್ಲ. ಹೊಸ ಹೊಸದಾಗಿ ಮಾಡಿರತಕ್ಕ ರಸ್ತೆಗಳಿಗೆ ಸ್ವಲ್ಪ ಮಣ್ಣು ಎರಚಿ ರಸ್ತೆಗಳನ್ನು ಮಾಡಿಸಿದ್ದೇವೆ. ಎಂದು ಬಿಲ್ ಮಾಡಿ ಹಣವನ್ನು ತೆಗೆದುಕೊಳ್ಳುತ್ತಾರೆ. ಬಿದಿರಕ್ಕಿ ಹಾಕತಕ್ಕದ್ದು ಲಾಭದಾಯಕ ಎಂದು ಕೆಲವರು ಹೇಳುತ್ತಾರೆ. ಈ ಮಾತನ್ನು ಹೇಳತಕ್ಕವರಿಗೆ ಗಲ್ಲು ವಿಧಿಸಬೇಕು ಬಡತನವನ್ನು ಮೂದಲಿಸುವುದಕ್ಕೆ ರಾಜ್ಯಾಂಗದಲ್ಲಿ ಅಧಿಕಾರ ಕೊಟ್ಟಿಲ್ಲ, ಆದ್ದರಿಂದ ಬಡತನವನ್ನು ಮೂದಲಿಸುವುದಕ್ಕೆ ಸಾಧ್ಯವಿಲ್ಲ. ಫ್ಯಾಮಿನ್ ರಿಲೀಫ್ ವರ್ಕಿನಲ್ಲಿ ಹತೋಟಿ ಇಟ್ಟುಕೊಂಡು ಹಣ ಖರ್ಚು ಮಾಡಬೇಕು. ಗಲಾಟೆ ಮಾಡತಕ್ಕವರು ಕ್ಷಾಮವಿಲ್ಲದಿದ್ದರೂ ಆ ಪ್ರದೇಶದಲ್ಲಿ ಕೆಲಸಕಾರ್ಯಗಳನ್ನು ತೆಗೆದುಕೊಲ್ಲುವುದಿಲ್ಲ. ಈ ಕೆಲಸ ಮಾಡುವುದರಲ್ಲಿ ಸ್ವಲ್ಪ ತಿದ್ದಿಕೊಳ್ಳಬೇಕು. ಬೂಮಾಲೀಕ ಸರ್ಕಾರದ ಹತ್ತಿರ ಸಂಪರ್ಕವನ್ನು ಇಟ್ಟುಕೊಂಡಿದ್ದಾನೆ. ಗೇಣಿದಾರ ಸರ್ಕಾರದ ಹತ್ತಿರ ಸಂಪರ್ಕವನ್ನು ಇಟ್ಟುಕೊಂಡಿರುವುದಿಲ್ಲ. ಭೂಮಾಲೀಕ ಭೂ ಸೈನ್ಯವನ್ನು ಕಟ್ಟುವುದಾದರೆ ಅವನ ಸವಾಲನ್ನು ಅಂಗೀಕಾರ ಮಾಡುವುದಕ್ಕೆ ಭೂಮಾಲೀಕನಿಗೂ ಗೇಣಿದಾರನಿಗೂ ಒಂದು ದೊಡ್ಡ ಸಂಘರ್ಷಣೆ ನಡೆಯುತ್ತದೆ. ಗೇಣಿದಾರನೂ ಸೈನ್ಯ ಕಟ್ಟುತ್ತಾನೆ. ಆಗ ಮುಂದಿನ ಪರಿಣಾಮ ಏನಾಗುತ್ತದೆ ಎಂಬುದನ್ನು ನಾನು ಸೂಚಿಸುವುದಕ್ಕೆ ಇಷ್ಟಪಡುವುದಿಲ್ಲ. 1970ನೇ ಇಸವಿಯಿಂದ ಯಾರಿಗೂ ಈ ರಾಜ್ಯದಲ್ಲಿ ಗೇಣಿಯನ್ನು ಕೊಡುವುದಿಲ್ಲ. ಬೇಕಾದರೆ ಭೂಮಾಲೀಕನು ಸರ್ಕಾರದಿಂದ ಅದನ್ನು ವಸೂಲು ಮಾಡಿಕೊಳ್ಳಿ. ವಿಧವೆಯರಿಗೆ ಅಪ್ರಾಪ್ತವಯಸ್ಕರಾದವರಿಗೆ, ಬುದ್ಧಿ ವಿಕಲ್ಪರಾದವರಿಗೆ ಪುನರ್ ವ್ಯವಸ್ಥೆಗೆ ಪರಿಹಾರವನ್ನು ತಕ್ಷಣ ಕೊಡಬೇಕು, ಭೂಮಾಲೀಕರ ಪುನರ್ ವ್ಯವಸ್ಥೆಗೆ ಪರಿಹಾರವನ್ನು ಏಕ ಕಂಟಿನಲ್ಲಿ ನಗದು ಹಣವನ್ನು ಕೊಡಬೇಕು. ಪ್ಲಾನ್‌ಟೇಷನ್ ಇವುಗಳನ್ನೆಲ್ಲಾ ನ್ಯಾಷನಲೈಜ್ ಮಾಡಬೇಕು. ಕೃಷಿ ಉತ್ಪನ್ನದ ಮೇಲೆ ಆದಾಯ ತೆರಿಗೆಯನ್ನು ಹಾಕಬೇಕು. ಕೃಷಿ ಉತ್ಪನ್ನ ತೆರಿಗೆಯಲ್ಲಿ ಕನಿಷ್ಠ 10 ಕೋಟಿ ರೂಪಾಯಿಗಳು ಬರುತ್ತದೆ. ಇದನ್ನು ಇವರು ಲೆಕ್ಕ ಮಾಡುವುದಕ್ಕೆ ಹೋಗುತ್ತಿಲ್ಲ. ಇದರಲ್ಲಿ ಇವರಿಗೆ ಹತ್ತಿರದ ನೆಂಟರು, ಬೇಕಾದವರು ಇದ್ದಾರೆ. ಈ ರೀತಿ ಏನೇನೋ ವಿಚಾರಗಳು ಇವೆ. ಇವುಗಳೆಲ್ಲಾ ಸರ್ಕಾರದಲ್ಲಿ ನಡೆಯುತ್ತವೆ. ಬಡವರು ಪಾಪಿಗಳು ಇವರಿಂದ ಏನೂ ಆಗುವುದಿಲ್ಲ. ಇದರಿಂದ ಸುಲಭವಾಗಿ ಓಟು ಹಾಕಿಸಿಕೊಂಡು ಇವರನ್ನು ಅನುಮಾನಕ್ಕೆ ಈಡು ಮಾಡಿದ್ದಾರೆ. ಎಲ್ಲಾ ರೈತರಿಗೂ ಪಟ್ಟಾಗಳನ್ನು ಕೊಡುವುದು, ಭೂಮಿಯನ್ನು ಪುನರ್ ಹಂಚಿಕೆ ಮಾಡುವುದು ಇವುಗಳನ್ನೆಲ್ಲಾ ಯಾವಾಗ ಮಾಡುತ್ತಾರೆಯೋ ಗೊತ್ತಿಲ್ಲ. ಗೇಣಿಯ ವಿಷಯ ವಿವಾದಾಸ್ಪದವಾಗುವುದಿಲ್ಲ. ಇವುಗಳನ್ನು ಮುನ್ಸೀಫರಿಗೆ

ಕೊಟ್ಟಿದ್ದೇವೆ ಅವರು ಇವುಗಳನ್ನೆಲ್ಲಾ ನಿಬಾಲೆ ಮಾಡುತ್ತಾರೆ ಎಂದು ಹೇಳಿದ್ದಾರೆ. ಅವರು ಏನು ನಿಖಾಲೆ ಮಾಡುತ್ತಾರೆಯೋ ಗೊತ್ತಿಲ್ಲ. ಇವರ ನೀತಿ ಬಸವ ಹುಳುವಿನ ವೇಗದಲ್ಲಿ ಹೋಗುತ್ತಿದೆ. ಇದು ಒಂದು ದೊಡ್ಡ ಸಮಸ್ಯೆ. ಎಲ್ಲಾ ಮನೆ ಮನೆಗಳೂ ಹಾಳಾಗಿವೆ, ಇವರು ಈ ರೀತಿ ಮಾಡುತ್ತಾ ಹೋದರೆ ಹುಣ್ಣಿನ ಮೇಲೆ ಎಣ್ಣೆ ಸವರಿದ ಹಾಗೆ ಆಗಿ ಇದು ಆಸ್ಫೋಟನವಾಗುತ್ತದೆ.

ಇದರಿಂದ ಸರ್ಕಾರವು ಕುಸಿದು ಬೀಳುತ್ತದೆ ಮತ್ತು ರಾಜ್ಯದಲ್ಲಿ ಅರಾಜಕತೆ ಮತ್ತಷ್ಟು ಹೆಚ್ಚಾಗುತ್ತದೆ. ಅದಕ್ಕಾಗಿ ನಾನು ಮಂತ್ರಿಯವರಲ್ಲಿ ಕೇಳುವುದು ಇಷ್ಟೆ, ಬಹಳ ನಿರ್ದಿಷ್ಟವಾಗಿ ಕಾನೂನನ್ನು ತಿದ್ದುಪಡಿ ಮಾಡಿ, ಆದಷ್ಟು ಜಾಗ್ರತೆಯಾಗಿ ಜಾರಿಗೆ ಕೊಡುವುದಕ್ಕೆ ತಾವು ಪ್ರಯತ್ನ ಮಾಡಬೇಕು ಮತ್ತು ಭೂಮಾಲೀಕರು ಭೂಸೈನ್ಯ ಕಟ್ಟುವುದನ್ನು ತಡೆಗಟ್ಟಬೇಕು. ಭೂಮಾಲೀಕರಿಗೆ ಪರಿಹಾರ ಕೊಟ್ಟು ಅವರನ್ನು ಭೂಮಿಗೂ ಉಳುಮೆ ಮಾಡುವವರಿಗೂ ಮಧ್ಯಸ್ಥಗಾರರನ್ನಾಗಿ ಮಾಡಬಾರದು. ಉಳುವವನೇ ಭೂಮಿಯ ಒಡೆಯನಾಗಬೇಕೆಂದು ಕಾಗೋಡಿನಲ್ಲಿ ನಡೆದ ಸಭೆಯಲ್ಲಿ ಏನು ಒಂದು ಬೇಡಿಕೆಯನ್ನು ನಾನು ಇಟ್ಟಿದ್ದೇವೆ, ಅದನ್ನು ಸರ್ಕಾರದವರು ಕಾರ್ಯಗತಮಾಡಬೇಕಾಗಿತ್ತು. ನೀವು ಮೊದಲೇ ಟಿಲ್ಲರ್ ಆಫ್ ದಿ ಲ್ಯಾಂಡ್ ಶುಡ್ ಬೀದಿ ಓನರ್ ಎಂದು ಏನು ಹೇಳಿದ್ದೀರಿ, ಅದನ್ನು ನೀವು ಮಾಡಿಲ್ಲ, ಅದು ಎಲ್ಲಾ ರಾಜ್ಯಗಳಲ್ಲಿ ಸರಿಯಾಗಿ ಕಾರ್ಯಗತ ಇನ್ನು ಆಗಿಲ್ಲ. ಅದನ್ನು ನೀವು ಇನ್ನೂ ವಿಳಂಬ ಮಾಡುವುದು ಅಪಾಯಕರ. ಜನರು ಇನ್ನು ಕಾನೂನನ್ನು ನಮ್ಮ ಕೈಯಲ್ಲಿ ತೆಗೆದುಕೊಂಡು ಪಕ್ಷದಲ್ಲಿ ಸರ್ಕಾರದವರು ಅದನ್ನು ನಿಲ್ಲಿಸಲಾಗುವುದಿಲ್ಲ. ಅಷ್ಟೊಂದು ತೀವ್ರಗತಿಯಿಂದ ಬೂಸುಧಾರಣೆಯನ್ನು ಜಾರಿಗೆ ತಂದು, ಭೂಮಾಲೀಕರ ಮತ್ತು ಗೇಣಿದಾರರ ಸಂಬಂಧವನ್ನು ತೊಡೆದುಹಾಕಬೇಕಾಗಿದೆ. ನೀವು ಅನಾರ್ಥಿಕ ಹಿಡುವಳಿಯ ಮೇಲೆ ಭೂಕಂದಾಯ ರದ್ದು ಮಾಡುವುದು ಹಾಗೂ ಕೃಷಿ ಉತ್ಪನ್ನದ ಮೇಲೆ ಕಂದಾಯ ಹಾಕುವುದು, ಇಷ್ಟು ಕೆಲಸಗಳನ್ನು ನೀವು ಮಾಡಬೇಕು ಮತ್ತು ನಿಮ್ಮ ಮಾತನ್ನು ಉಳಿಸಬೇಕು. ಈ ಎಲ್ಲಾ ಕೆಲಸಗಳನ್ನು ಮಾಡದೆ, ಅನಾವಶ್ಯಕರಾಗಿ ಕಾಲಹರಣ ಮಾಡುವುದರಿಂದ ಸುಮ್ಮನೆ ಕಾಗದ ಪತ್ರಗಳನ್ನು ಬೆಳೆಸುವುದರಿಂದ ಏನೂ ಪ್ರಯೋಜನವಿಲ್ಲ ಇಷ್ಟು ಮಾತುಗಳನ್ನು ಹೇಳಿ ಈ ಬೇಡಿಕೆಗಳನ್ನು ವಿರೋಧಿಸುತ್ತಾ ನನ್ನ ಮಾತುಗಳನ್ನು ಮುಗಿಸುತ್ತೇನೆ.

## ಭಾಗ - 3

1. ಗೋಪಾಲಗೌಡರು - ಗಣ್ಯರ ದೃಷ್ಟಿಯಲ್ಲಿ
2. ಗೋಪಾಲಗೌಡರ ಜೀವನದ ಮುಖ್ಯ ಘಟನೆಗಳು

## ಭಾಗ 3
## ಗಣ್ಯರ ದೃಷ್ಟಿಯಲ್ಲಿ ಗೋಪಾಲಗೌಡರು

ನನ್ನ ದೃಷ್ಟಿಯಲ್ಲಿ ಅವರೊಬ್ಬರು ರಾಜಕೀಯ ಜೀವನದಲ್ಲಿ ಶ್ರದ್ಧಾಪೂರ್ಣ ತತ್ವ ನಿಷ್ಠ ಹೋರಾಟಗಾರರು. ಅವರೆಂದೂ ತಾನು ನಂಬಿದ ಧ್ಯೇಯ ಧೋರಣೆಗಳಿಂದ ವಿಮುಖರಾಗಲಿಲ್ಲ. ಆಸೆ-ಆಮಿಷಗಳಿಗೆ ಬಲಿಯಾಗಲಿಲ್ಲ. ಅವರೊಬ್ಬರು ಹುತಾತ್ಮರೆಂದರೂ ತಪ್ಪಾಗಲಾರದು. ರಾಜಕೀಯಕ್ಕಾಗಿ ಅವರು ತಮ್ಮ ಲೌಕಿಕವಾದವುಗಳನ್ನೆಲ್ಲ ಯಜ್ಞ ಮಾಡಿದ್ದಾರೆ. ಅವರು ಸ್ವಲ್ಪ ಸಂಯಮದಿಂದ ಬಾಳಿದ್ದರೆ ಇನ್ನಷ್ಟು ಕಾಲ ನಾಡಿನ ಸೇವೆಗಾಗಿ ಬದುಕಬಹುದಾಗಿತ್ತು.

- ಕುವೆಂಪು.

ಗೋಪಾಗೌಡರನ್ನು ನಾನು ಚಿಕ್ಕ ಹುಡುಗನಿಂದಲೂ ಬಲ್ಲೆ. ಅವರು ಬಡತನದಲ್ಲಿ ಹುಟ್ಟಿದರು, ಬಡತನದಲ್ಲಿ ಬೆಳೆದರು, ಬಡತನದಲ್ಲೀ ಕೊನೆಮುಟ್ಟಿದರು. ಐಶ್ವರ್ಯವನ್ನು ಸಂಪಾದಿಸಬೇಕೆಂದಿದ್ದರೆ ಅವರಿಗೆ ಅನೇಕ ಅವಕಾಶಗಳಿದ್ದವು. ಪ್ರಲೋಭನೆಗಳಿಂದ ಕೂಡಿದ ರಾಜಕಾರಣದಲ್ಲಿ ಅವರು ಕೊನೆಯವರೆಗೂ ಪ್ರಾಮಾಣಿಕರಾಗಿ ಉಳಿದರು.

- ಕಡಿದಾಳ್ ಮಂಜಪ್ಪ.

ಶಾಂತವೇರಿ ಗೋಪಾಲಗೌಡರ ಬದುಕು ನಿಷ್ಠೆಂದ ಕೂಡಿದ ಹೋರಾಟದ ಜೀವನ. ಜನತೆಯ ಸೇವೆಯೇ ತಮ್ಮ ಜೀವನದ ಧ್ಯೇಯವೆಂದು ತಿಳಿದ ವ್ಯಕ್ತಿ ಅವರು, ಸತ್ಯವನ್ನು ಬಿಟ್ಟು ಸ್ವಲ್ಪವೂ ಅಲುಗದೆ ಅರರು ಬಾಳಿದರು. ಬಡವರು, ದೀನರು, ಕೂಲಿಕಾರರ ಸೇವೆಯು ಅತಿ ಪವಿತ್ರವೆಂದು ತಿಳಿದು, ಕೂಲಿಕಾರರ ಸೇವೆಗಾಗಿ ದುಡಿದವರು, ಸಾರ್ವಜನಿಕ ಸೇವೆಗಾಗಿ ತಮ್ಮ ಜೀವನವನ್ನೇ ಮುಡಿಪಾಗಿಟ್ಟರು. ಯಾರಿಗೂ ಕಡಿಮೆ ಇಲ್ಲದಂತೆ ಹೋರಾಟ ನಡೆಸಿದರು. ಕನ್ನಡಕ್ಕಾಗಿ ಅದ್ವಿತೀಯರಾಗಿ ದುಡಿದರು. ಸಾರ್ವಜನಿಕ ಸೇವೆಯಲ್ಲಿ ನಿರ್ಭೀತಿ, ಸೇವೆಕಾಂಕ್ಷಿ, ಅವುಗಳನ್ನು ತಳಹದಿಯಾಗಿ ಇಟ್ಟುಕೊಂಡಿದ್ದರು.

- ಎಸ್.ನಿಜಲಿಂಗಪ್ಪ

ಶ್ರೀಯುತ ಗೋಪಾಲಗೌಡರು ಸಮಾಜವಾದದ ತತ್ವಗಳಲ್ಲಿ ಪೂರ್ಣವಾದ ನಂಬಿಕೆಯುಳ್ಳ ಒಬ್ಬ ವ್ಯಕ್ತಿಯಾಗಿದ್ದರು. ಇಡೀ ಅವರ ರಾಜಕೀಯ ಜೀವನದಲ್ಲಿ ಆತನಿಗಾಗಿ ಆತ ಏನು ಬಯಸುದವರಲ್ಲ. ಅವರ ರಾಜಕೀಯ ಒಂದು ಪೂರ್ಣವಾದ ತ್ಯಾಗ ಜೀವನವೆಂದು ಹೇಳಿ ನಂಬಿದ್ದಂತಹ ವ್ಯಕ್ತಿ ........ ಅವರು ಸಂಸಾರಿಗಳಾದ ಮೇಲೂ ಸಹ ಅವರಿಗೆ ತಮ್ಮ ಸಂಸಾರಕ್ಕಾಗಿ ಏನಾದರೂ ಕೂಡಿಡಬೇಕು ಎಂಬ ಭಾವನೆ ಅವರ

ಮನಸ್ಸಿನಲ್ಲಾಗಲೀ ನಮಗೆ ಎಲ್ಲೂ ಕಂಡು ಬರಲಿಲ್ಲ. ಅವರ ಕೊನೆಯ ಉಸಿರಿರುವ ಅಷ್ಟು ಪೂರ್ಣ ತ್ಯಾಗಮಾಡಿದಂತಹ ರಾಜಕಾರಣಿಗಳು ತುಂಬಾ ವಿರಳ. ನಮ್ಮ ದುರಾದೃಷ್ಟದಿಂದ ನಾವು ಸಮಾಜವಾದವನ್ನು ಜಾರಿಗೆ ತರಲು ಹೊರಟಂತಹ ಕಾಲದಲ್ಲಿ ಮತ್ತು ಸಮಾಜದ ಯುಗ ಈಗ ತಾನೇ ಪ್ರಾರಂಭವಾಗುತ್ತಿರುವ ಸಮಯದಲ್ಲಿ ಅವರಂತಹ ಒಬ್ಬ ತ್ಯಾಗಿ, ಪ್ರಾಮಾಣಿಕ ಮತ್ತು ತತ್ವನಿಷ್ಠೆಯ ರಾಜಕಾರಣಿ ನಮ್ಮ ಜೊತೆಯಲ್ಲಿದ್ದರೆ ಚೆನ್ನಾಗಿತ್ತು. ಅಷ್ಟೇ ಅಲ್ಲ ನಮಗೆ ಆಗಿಂದಾಗ್ಗೆ ಅವರ ಮಾತು ಅವರ ನಡೆವಳಿಕೆಗಳು ಮಾರ್ಗದರ್ಶನವಾಗುತ್ತಿದ್ದವು.

- ಡಿ.ದೇವರಾಜ ಅರಸು
ಮುಖ್ಯಮಂತ್ರಿಗಳು
ವಿಧಾನ ಸಭೆಯಲ್ಲಿ

ಅವರು ಒಂದು ಸಾರಿ ಅನಾರೋಗ್ಯದ ಕಾಲದಲ್ಲಿ ಮಾತನಾಡುತ್ತಾ "ನಾವು ಬಡತನವನ್ನು ನಿರ್ಮೂಲನೆ ಮಾಡಬೇಕೆಂಬಹಂಬಲವನ್ನು ಇಟ್ಟುಕೊಂಡಿದ್ದೇವೆ. ಅದನ್ನು ನಾನು ನನ್ನ ಜೀವನದಲ್ಲಿ ಕಾಣುತ್ತೇನೋ, ಇಲ್ಲವೋ" ಎಂದು ಹೇಳುತ್ತಿದ್ದರು. ಇಂದು ರಾಜಕೀಯ ಜೀವನಕ್ಕೂ ಭ್ರಷ್ಟಾಚಾರಕ್ಕೂ ಬಹಳ ಹತ್ತಿರದ ಸಂಬಂಧವಿದೆ. ಆದರೆ ಮಾನ್ಯ ಗೋಪಾಲಗೌಡರ ಜೀವನವನ್ನು ನೋಡಿದರೆ ಅರರು ಅದನ್ನು ಮೆಟ್ಟಿ ನಿಂತು ರಾಜಕೀಯ ಜೀವನದಲ್ಲಿ ನಡೆದಿದ್ದಾರೆ ಎಂದು ನಾನು ತಿಳಿದುಕೊಂಡಿದ್ದೇನೆ.

- ಎಚ್.ಡಿ.ದೇವೇಗೌಡ
ವಿಧಾನ ಸಭೆಯಲ್ಲಿ.

ಮೊದಲ ಸಲ ಸಾರ್ವತ್ರಿಕ ಚುನಾವಣೆಯಲ್ಲಿ ಗೆಳೆಯ ಗೋಪಾಲಗೌಡರು ಸಾಗರ ಕ್ಷೇತ್ರದಿಂದ ಆರಿಸಿ ವಿಧಾನಸಬೆಗೆ ಬಂದರು. ನಮ್ಮ ಪಕ್ಷದ ಉಳಿದ ಅಭ್ಯರ್ಥಿಗಳು ವಿಶೇಷತೆ: ಸದಾಶಿವರಾವ್ ಅಣ್ಣಯ್ಯ ಇವರುಗಳು ನಮ್ಮ ಜಿಲ್ಲೆಯ ಕ್ಷೇತ್ರಗಳಲ್ಲಿ ಪರಾಭವಗೊಂಡು, ರಾಜಕೀಯ ಪ್ರಭೆ ಗೌಡರ ವ್ಯಕ್ತಿತ್ವದ ಮೇಲೆಯೇ ಬೆಳೆದುಕೊಂಡು ಬಂದಿತು. 1957ರ ಚುನಾವಣೆಯ ಹೊತ್ತಿಗೆ ಭಾರತದಲ್ಲಿ ಸೋಷಲಿಸ್ಟ್ ಪಾರ್ಟಿ ಹಲವಾರು ರೂಪಾಂತರಗೊಂಡು ಅಂದರೆ:- ಸೋಷಲಿಸ್ಟ್ ಪಾರ್ಟಿ ಮತ್ತು ಕೆ.ಎಂ.ಸಿ.ಪಿ. ಸೇರಿ ಪಿ.ಎಸ್.ಪಿ. ಆಯಿತು. ಮತ್ತೆ ಪಿ.ಎಸ್.ಪಿಯಲ್ಲಿ ಒಡಕು ಬಂದು ಲೋಹಿಯಾವಾದಿಗಳು ಹೈದಾರಾಬಾಧಿನಲ್ಲಿ ಸೇರಿ ಸೋಷಲಿಸ್ಟ್ ಪಾರ್ಟಿಯನ್ನು ಸ್ಥಾಪಿಸಿಕೊಂಡರು, ಆ ವೇಳೆಗೆ ನಮ್ಮ ರಾಜ್ಯದಲ್ಲಿ ಗೋಪಾಲಗೌಡರ ಪ್ರಭಾವ ವಿಶಿಷ್ಟವಾಗಿತ್ತು. ಗೌಡರ ನಾಯಕತ್ವದಲ್ಲಿ ನಾವೆಲ್ಲ ಲೋಹಿಯಾವಾದಿ ಸೋಷಲಿಸ್ಟ್ ಪಾರ್ಟಿಯಲ್ಲಿ ತೊಡಗಿದೆವು. ಈ ಸಮಯದಿಂದ ರಾಜ್ಯದ ಹಾಗೂ ಜಿಲ್ಲೆಯ ಪಕ್ಷದ ಏರುಪೇರುಗಳು ನನ್ನನ್ನು ಅಣ್ಣಯ್ಯ, ಗೌಡರು ಮತ್ತಿತರ



ಮುಖಂಡರ ಸಮೀಪಕ್ಕೆ ತಂದವು; ಒಟ್ಟಿಗೆ ಬದುಕಿದೆವು. ಇವರುಗಳ ಜೀವನ ಪಕ್ಷದ ಜೀವಾಳವಾಯಿತು. ಪಕ್ಷದ ಜೀವನವೇ ನನ್ನ ಜೀವಾಳವಾಯಿತು.

......... ನಾವು ಬದುಕಿದ್ದು ಕೇವಲ ಲೋಹಿಯಾರವರ ವಿಚಾರ ಬಂಧನದಿಂದ; ಪ್ರಜಾ ಸೋಷಲಿಸ್ಟ್ ಪಾರ್ಟಿ ರಾಜ್ಯದ ಪ್ರಮುಖ ವಿರೋಧ ಪಕ್ಷವಾಯಿತು. ನಮ್ಮ ಪಕ್ಷ ಒಂದು ಸಣ್ಣ ಗುಂಪಾಯಿತು. ಎಷ್ಟೋ ಬಾರಿ ನನ್ನ ಹಿತೈಷಿಗಳು ಆ ಲೋಹಿಯಾ ಒಬ್ಬ ಹುಚ್ಚ. ನಿಮ್ಮ ಗೋಪಾಲಗೌಡ ಇನ್ನೊಬ್ಬ ಹುಚ್ಚ, ಇವರೊಡನೆ ಏಕೆ ನಿನ್ನ ಜೀವನವನ್ನು ಹಾಳು ಮಾಡಿಕೊಳ್ಳುತ್ತೀ ? ಎಂದು ಉಪದೇಶ ಮಾಡಿದ್ದು ಉಂಟು. ಎಂದೆಂದೂ ಅಧಿಕಾರಕ್ಕೆ ಬಾರದ ನಿಶ್ಪ್ರಯೋಜಕರ ತಂಡವಾಯಿತು ನಮ್ಮದು ........

1967ರ ಚುನಾವಣೆಯಲ್ಲಿ ರಾಜ್ಯದಲ್ಲಿ ನಮ್ಮ ಪಕ್ಷ ಹೇಳಿಕೊಳ್ಳುವಂಥ ಸಾಧನೆ ಮಾಡದಿದ್ದರೂ ಜಿಲ್ಲೆಯಲ್ಲಿ ನಾವು ಗಣನೀಯ ಶಕ್ತಿಯಾಗಿ ಹೊರಬಂದೆವು. ಜಿಲ್ಲೆಯ ಸಂಸತ್ ಸದಸ್ಯನಾಗಿ ನಾನೂ ವಿಧಾನ ಸಭಾ ಸದಸ್ಯನಾಗಿ ಶ್ರೀ ಗೋಪಾಲಗೌಡರು, ಅವರ ಜೊತೆಯಲ್ಲಿ ಶ್ರೀಗಳಾದ ಬಂಗಾರಪ್ಪ, ಬಸವಣ್ಣೆಪ್ಪ, ಎನ್.ಜಿ.ಹಾಲಪ್ಪ ಇವರುಗಳೂ ಗೆದ್ದದ್ದು ಮಾತ್ರವಲ್ಲ ಸಾಗರದಲ್ಲಿ ಕಾಗೋಡು ತಿಮ್ಮಪ್ಪ, ಹೊಸ ನಗರದಲ್ಲಿ ಸ್ವಾಮಿರಾವ್, ಶಿವಮೊಗ್ಗ ಕ್ಷೇತ್ರದಿಂದ ಅಣ್ಣಯ್ಯ ಇವರು ಕಡಿಮೆ ಮತಗಳಿಂದ ಸೋತದ್ದು, ಪಕ್ಷದ ವಿಕ್ರಮ ಸಾಧನೆಯಾಯಿತು. ಶಿವಮೊಗ್ಗ ಜಿಲ್ಲೆ ಸೋಷಲಿಸ್ಟ್‌ರ ತೌರು ಎಂಬ ಪ್ರಖ್ಯಾತಿ ಪಡೆಯಿತು.

- ಜೆ.ಹೆಚ್.ಪಟೇಲ್

ಇಂದಿನ ಸಂಕೀರ್ಣ ಸ್ವಾರ್ಥ ರಾಜಕೀಯ ಪ್ರಪಂಚದಲ್ಲಿ ಅವರ ಮೌಲ್ಯಯುತ ಆದರ್ಶ ಬದುಕು ಮಾರ್ಗದರ್ಶಕ ಗೋಪಾಲಗೌಡರ ಸಂಪರ್ಕ ಎಷ್ಟೋ ಜನರ ಜೀವನ ವಿಧಾನಗಳನ್ನೇ ಬದಲಿಸಿದೆ, ರೂಪಿಸಿದೆ. ನನ್ನ ವಿದ್ಯಾರ್ಥಿ ಜೀವನದಲ್ಲಿಯೇ ನಾನು ಗೌಡರ ಪ್ರಭಾವಕ್ಕೆ ಅರಿವಿಲ್ಲದೆ ಮಣಿದು ಹೊರಬಿದ್ದಿದೆ.

ಅವರ ಭಾಷಣ ಶಾಸನ ಸಭೆಯಲ್ಲಿ ಇದೆ ಎಂದರೆ ಆಳುವ ಮತ್ತು ವಿರೋಧ ಪಕ್ಷದ ಸದಸ್ಯರಿಗೆ ಹಬ್ಬ. ಸದನದ ಸದಸ್ಯರು ಅವರ ಭಾಷಣವನ್ನು ತದೇಕ ಚಿತ್ತದಿಂದ ಆಲಿಸುತ್ತಿದ್ದರು. ಗೌಡರ ಭಾಷಣ ಆದ ಮೇಲೆ ತತ್‌ಕ್ಷಣದಲ್ಲಿಯೇ ಶಾಸನಸಭೆಯ ಕುರ್ಚಿಗಳೆಲ್ಲವು ಖಾಲಿಯಾಗಿಬಿಡುತ್ತಿದ್ದವು. ಸಭಾಧ್ಯಕ್ಷರಾದ ಶ್ರೀ ವೈಕುಂಠಬಾಳಿಗರೇ ನನ್ನ ಹತ್ತಿರ ಹೇಳಿದ ಒಂದು ಮಾತು ನೆನಪಿಗೆ ಬರುತ್ತದೆ. ಸಭೆಯಲ್ಲಿ ಕೋರಂ ಬೇಕು ಎಂದಾಗ ಗೌಡರ ಭಾಷಣವಿದೆಯೆಂದು ಹೇಳಿದರೆ ಸಾಕು ಕೋರಂ ಇರುತ್ತದೆ ಎಂದಿದ್ದರು.

- ಎಸ್.ಬಂಗಾರಪ್ಪ

ಗೋವಾ ವಿಮೋಚನಾ ಸರ್ವಪಕ್ಷೀಯ ಚಳವಳಿಗೆ ಶ್ರೀ ಗೋಪಾಲಗೌಡರೇ ಮೂರ್ತ ಸ್ವರೂಪ ಕೊಟ್ಟವರು. ಆಗಲಿ ಆ ಭಾಗ್ಯಜ್ಯೋತಿಯನ್ನು ನಾನು ಮೊದಲ ಕಂಡದ್ದು. ಸಾವಿರಾರು ಸತ್ಯಾಗ್ರಹಿಗಳು ಪಾಲುಗೊಳ್ಳುವಂತೆ ಚಳವಳಿಯನ್ನು ರೂಪಿಸಿದ್ದು ಅವರ ಸಂಘಟನಾ ಶಕ್ತಿಗೆ ದ್ಯೋತಕ.

ಇಂಗ್ಲೆಂಡಿನ ಪಾರ್ಲಿಮೆಂಟಿಗೆ ಎಡ್ಮಂಡ್ ಬರ್ಕ್ ಎಂತೋ ಅಂತೆಯೇ ಕರ್ನಾಟಕ ಶಾಸನಸಭೆಗೆ ಗೋಪಾಲಗೌಡರು, ಅವರು ಎಂದೂ ಮಾತಿಗಾಗಿ ಮಾತಾಡಿದವರಲ್ಲ. ಅವರು ಇಡೀ ಮಾನವ ಕುಟುಂಬದ ಮಾನವೀಯತೆಯ ವಿಕಾಸವನ್ನು ಹಾರೈಸಿದರು. ಅವರ ನಂತರ ಅಂಥ ಮೋಹಕ ವ್ಯಕ್ತಿಯನ್ನಾಗಲಿ ಮಾತಿನ ಗಾರುಡಿಗನನ್ನಾಗಲೀ ಹಾಗೂ ಆದರ್ಶದ ಹೋರಾಟಗಾರರನ್ನಾಗಲೀ ಮತ್ತೊಬ್ಬನನ್ನು ಕಾಣಲಿಲ್ಲ.

- ಎಸ್.ಆರ್.ಬೊಮ್ಮಾಯಿ

ಗೌಡರು ಒಮ್ಮೆ ನಮ್ಮ ಮನೆಗೆ ಬಂದರು; ಆದರಿಸಿದೆ. ಅನಂತರ "ಏನು ಬಸವಲಿಂಗಪ್ಪನವರೇ ....... ನಾನು ಪ್ರಯಾಣ ಮಾಡುವವನಿದ್ದೇನೆ..... ಸ್ವಲ್ಪ ಹಣಬೇಕು.. ಅದನ್ನು ವಾಪಸ್ಸು ಮಾಡುವೆ" ಎಂದರು " ಗೌಡರೆ ಎಷ್ಟು ಹಣ ಬೇಕು ತೆಗೆದುಕೊಂಡು ಹೋಗಿ ದೇಶದ ಕೆಲಸ ಮಾಡುವವರು ನೀವು ವಾಪಸ್ಸು ಕೊಡುವ ಪದ್ಧತಿಯನ್ನು ಇಟ್ಟುಕೊಳ್ಳಬೇಡಿ ಎಂದೆ ಅಲ್ಲದೆ ಅವರ ಹತ್ತಿರ ಅಷ್ಟು ಇಷ್ಟು ಹಣವಿದ್ದಾಗ ತೆಗೆದು ಎಲ್ಲವನ್ನೂ ಸ್ನೇಹಿತರ ಮುಂದಿಟ್ಟು" ಇಷ್ಟರಲ್ಲಿ ನೀವು ಖರ್ಚು ಮಾಡಿಕೊಳ್ಳಿರಿ ಎಂದು ಹೇಳುತ್ತಿದ್ದನ್ನು ಕಂಡಿದ್ದೇನೆ.

ನಿಷ್ಠಾವಂತ, ನಿಗರ್ವಿ, ಸತ್ಯವಂತ, ಸರಳ ಸ್ವಭಾವದವ ಮಹಾ ಮೇಧಾವಿ ಗೋಪಾಲಗೌಡರು ನನ್ನ ದೃಷ್ಟಿಯಲ್ಲಿ ಚೊಕ್ಕ ಚಿನ್ನ; ನಮ್ಮ ಅವಧಿಯಲ್ಲಿ ಇಂಥವರನ್ನು ಮತ್ತೆ ಕಾಣಲಾರೆವೆಂದೇ ನನ್ನ ಭಾವನೆ.

- ಬಿ.ಬಸವಲಿಂಗಪ್ಪ

ಸಮಾಜವಾದದ ಬಗ್ಗೆ ತತ್ವ ನಿಷ್ಠೆಯೊಡನೆ ಭಾವನಾತ್ಮಕವಾಗಿಯೂ ತಲ್ಲೀನನಾಗಿದ್ದು, ಜೊತೆಗೆ ಅತ್ಯಂತ ಮಾನವೀಯತೆಯನ್ನು ಉಳಿಸಿಕೊಂಡಿದ್ದ ಗೋಪಾಲಗೌಡರು ಅಪರೂಪದ ಸಮಾಜವಾದಿ ನಾಯಕರು.

- ಸಿ.ಜಿ.ಕೆ.ರೆಡ್ಡಿ



ದಲಿತ ಮತ್ತು ದುರ್ಬಲರಿಗಾಗಿ ಸದಾ ದುಡಿದ ಹೋರಾಟಗಾರ ಎಂಥ ಸಂದರ್ಭ ಬಂದರೂ, ಈ ದಾರಿಯನ್ನು ಬಿಡದ ಪ್ರಾಮಾಣಿಕ ರಾಜಕಾರಣ.

- ಕೆ.ಎಚ್.ರಂಗನಾಥ್

ಗೋಪಾಲಗೌಡರಿಲ್ಲದ ಸಭೆ ವಿಧಾನ ಸಭೆಯಲ್ಲಿ, ಇವರಂಥ ಸಮಾಜವಾದಿ ಇನ್ನು ಹುಟ್ಟೋದಿಲ್ಲ.

- ವಾಟಾಳ್ ನಾಗರಾಜ್

ಗೋಪಾಲಗೌಡರಂಥ ರಾಜಕಾರಣಿಗಳು ಐದು ಜನ ಸಿಕ್ಕರೆ ಸಾಕು; ನಾನು ಈ ರಾಜ್ಯವನ್ನು ರಾಮರಾಜ್ಯವನ್ನಾಗಿ ಮಾಡುತ್ತೇನೆ.

- ವೈಕುಂಠ ಬಾಳಿಗ

ಅಧ್ಯಾಯಗಳೆದುರು ಪ್ರತಿಭಟನೆ, ಉದ್ವೇಗ - ಉದ್ರೇಕ, ಬುಸುಗಟ್ಟಿದರೂ ಕಚ್ಚದಿರುವ ವಿವೇಕ ಸತ್ಯದಾವೇಶಗೊಂಡಾಗ, ವಿಧಾನಸೌಧ ಗಡಗಡ.

- ಕೋಣಂದೂರು ಲಿಂಗಪ್ಪ

ನಾಡಿನ ರಾಜಕೀಯ ಕ್ಷೇತ್ರದಲ್ಲಿ ಕಾಣಿಸದ ಒಬ್ಬ ಅಪೂರ್ವ ಪ್ರತಿಭಾಶಾಲಿ, ರಾಜಕಾರಣಿಯಾಗಿದ್ದ ಗೋಪಾಲಗೌಡರ ಆದರ್ಶಯುತವಾದ ನಡೆ ನುಡಿ ಸಾಧನೆಯನ್ನು ನಾಡಿನ ಜನರು ಎಂದೂ ಮರೆಯುವಂತಿಲ್ಲ. ಅವರ ತತ್ವನಿಷ್ಠೆ, ದಿಟ್ಟತನ ಪ್ರಾಮಾಣಿಕ ಹೋರಾಟ, ನಿರಂತರ ಮೆಚ್ಚುಗೆಗೆ ಪಾತ್ರವಾಗಿವೆ.

- ಶಿವರಾಮ ಕಾರಂತ

ಧೀರೋದಾತ್ತ ನಾಯಕನ ಪಾತ್ರಕ್ಕಾಗಿ ಜನಿಸಿಯು ಕೂಡ. ಹುತಾತ್ಮ ಪಾತ್ರವನ್ನಾಯ್ದುಕೊಂಡ ವೀರ, ಶತಕ್ಷತವಾದರು ಶರೀರ ತೆವಳುತ್ತಲೇ ಇತ್ತು, ಕಂಡ ಕಣಸಿನ ಗುರಿಗೆ ನೇರ ಬೇರ,

- ಗೋಪಾಲಕೃಷ್ಣ ಅಡಿಗ

ಬಡಜನರಿಂದ ದುಡ್ಡನ್ನು ಓಟನ್ನು ಕೇಳಿ, ಚುನಾವಣೆ ನಡೆಸಿ, ಪ್ರತಿ ಶ್ರೀಮಂತ ಅಭ್ಯರ್ಥಿಯನ್ನು ಸೋಲಿಸಿ ನಮ್ಮೂರಿಂದ ಚುನಾಯಿತರಾಗುತ್ತ ಗೌಡರು ಬರುತ್ತಿರುವುದರಿಂದಲೇ ನನಗೆ ಡೆಮಾಕ್ರಸಿಯಲ್ಲಿ ನಂಬಿಕೆ ಉಳಿದುಬಂದಿರುವುದು.

- ಯು.ಆರ್.ಅನಂತಮೂರ್ತಿ

ಗೋಪಾಲ್ ತೀರಿಕೊಂಡದ್ದು 1972ರ ಜೂನ್ 9 ರಂದು: ಕೇವಲ ನಲವತ್ತೊಂಬತ್ತು ವರ್ಷ ಬದುಕಿ ಕಣ್ಣುಮುಚಿದ ಈ ಮಹಾದಿಟ್ಟ ವ್ಯಾಮೋಹದ ಸಿಟಿಜನ್ ಸಜ್ಜನಿಕೆಯ ವರ್ಣರಂಜಿತ ಸಂಭಾವಿತನ ಬಗ್ಗೆ ಒಂಬತ್ತರಂದೇ (9-6-1997) ಈ ಟಿಪ್ಪಣಿ ಬರೆದ್ದಿದ್ದೇನೆ.

ಇದನ್ನು ಬರೆಯುವಾಗ ಈ ಗೋಪಾಲ್ ಎಷ್ಟು ಸುಂದರ ವ್ಯಕ್ತಿ ಎನಿಸುತ್ತದೆ. ಮಹಾ ಘನತೆಯನ್ನು ಈ ನಾಯಕನಿಗೆ ನಾನು ಕೊಡಬೇಕಾದಷ್ಟು ಪ್ರೀತಿ, ವಿಶ್ವಾಸ ಕೊಡಲಾಗಲಿಲ್ಲ ಎಂದು ಅಳುಕಾಗುತ್ತದೆ...... ಗೋಪಾಲ್ ರಾಜಕೀಯ ನಾಯಕರಾಗಿದ್ದುದರಿಂದ ಹಸಿವೆಯಿಂದ ಬಳಲುತ್ತಿರುಬಹುದು ಎಂದು ನಾನು ಊಹಿಸಲಿಲ್ಲ ಕೂಡ.

ಸೌಂದರ್ಯ ವ್ಯಕ್ತಿತ್ವದಲ್ಲಿರುತ್ತದೇ, ಚರ್ಮದಲ್ಲಲ್ಲ; ಗೋಪಾಲ್ ಈ ರೀತಿಯಲ್ಲಿ ಸುಂದರ.

- ಪಿ.ಲಂಕೇಶ್

(ಆಧಾರ : ಶಾಂತವೇರಿ ಗೋಪಾಲಗೌಡರ ನೆನಪಿನ ಸಂಪುಟ (1997) ಸಂ. ಪ್ರೊ. ಕಾಳೇಗೌಡ ನಾಗವಾರ, ಜಿ.ವಿ.ಆನಂದಮೂರ್ತಿ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.)

--------



## ಎಸ್.ಗೋಪಾಲಗೌಡರ ಜೀವನದ ಮುಖ್ಯ ಘಟನೆಗಳು

1923 - ಮಾರ್ಚ್, 14 ಜನನ.

1941 - ಸ್ವಾತಂತ್ರ್ಯ ಚಳವಳಿಗೆ ಪ್ರವೇಶ

1942 - ಕ್ವಿಟ್ ಇಂಡಿಯ ಚಳವಳಿಯಲ್ಲಿ ಭಾಗಿ, ಶಿವಮೊಗ್ಗ ಜೈಲಿನಲ್ಲಿ ಸೆರೆವಾಸ ಹರಿಜನರಿಗಾಗಿ ರಾತ್ರಿ ಶಾಲೆ ನಡೆಸಿದ್ದು.

1946 - ನಂಜನಗೂಡಿನಲ್ಲಿ ನಡೆದ ವಿದ್ಯಾರ್ಥಿ ಕಾಂಗ್ರೆಸ್ ಸಮಾವೇಶದಲ್ಲಿ ಭಾಗಿ, ಇಂಟರ್ ಮೀಡಿಯೇಟ್ ಶಿಕ್ಷಣಕ್ಕೆ ವಿದಾಯ.

1947 - ಶಿವಮೊಗ್ಗದಲ್ಲಿ ವಿದ್ಯಾಥೀ ಕಾಂಗ್ರೆಸ್ ಸಮಾವೇಶದ ಸಂಘಟನೆ ಭೂಗತರಾಗಿ ಹೋರಾಟ.

1948 - ಕಾಂಗ್ರೆಸ್ ಪಕ್ಷ ತೊರೆದು ಸಮಾಜವಾದಿ ಪಕ್ಷ ಸೇರ್ಪಡೆ. ಶಿವಮೊಗ್ಗದಲ್ಲಿ ಕರ್ನಾಟಕ ರಾಜ್ಯ ಸಮಾಜವಾದಿ ಪಕ್ಷದ ಪ್ರಥಮ ಸಮಾವೇಶದ ಸಂಘಟನೆ.

1949 - ದಾವಣಗೆರೆಯಲ್ಲಿ ನಡೆದ ಕರ್ನಾಟಕ ಏಕೀಕರಣ ಸಮ್ಮೇಳನದಲ್ಲಿ ಭಾಗಿ.

1951 - ಕಾಗೋಡು ರೈತರ ಸತ್ಯಾಗ್ರಹದ ನೇತೃತ್ವ ವಹಿಸಿ ಸಫಲವಾದದ್ದು. ಡಾ:ರಾಮಮನೋಹರ ಲೋಹಿಯಾವರು ಕಾಗೋಡಿಗೆ ಭೇಟಿ ನೀಡಿದ್ದು ಜಯಪ್ರಕಾಶ್ ನಾರಾಯಣರು ಭೇಟಿ ನೀಡಿದ್ದು.

1952 - ಮೈಸೂರು ವಿಧಾನಸಭೆಗೆ ಸಾಗರ - ಹೊಸನಗರ ಕ್ಷೇತರದಿಂದ ಆಯ್ಕೆ.

1955 - ಸಮಾಜವಾದಿ ಪಕ್ಷದ ರಾಷ್ಟ್ರೀಯ ಕಾರ್ಯಕಾರಿ ಸಮಿತಿಗೆ ಆಯ್ಕೆ.

1957 - ರಾಜ್ಯವಿಧಾನ ಸಭೆಗೆ ತೀರ್ಥಹಳ್ಳಿ ಕ್ಷೇತ್ರದಿಂದ ಸ್ಪರ್ಧಿಸಿ ಸೋಲಾದುದ್ದು ಕರ್ನಾಟಕದಲ್ಲಿ ಸಮಾಜವಾದಿ ಯುವ ಜನ ಸಭಾ ಸ್ಥಾಪನೆ.

1960 - ಗೋವಾ ವಿಮೋಚನಾ ಚಳವಳಿಯಲ್ಲಿ ಭಾಗಿ-ಸಮಾಜವಾದಿ ಪಕ್ಷದ 'ಮಾರ್ಗದರ್ಶಿ' ಪತ್ರಿಕೆ ಪ್ರಕಟಣೆ

1962 - ರಾಜ್ಯ ವಿಧಾನ ಸಭೆಗೆ ತೀರ್ಥಹಳ್ಳಿ ಕ್ಷೇತ್ರದಿಂದ-ಆಯ್ಕೆ ಸಾಗರದಲ್ಲಿ ರಾಜ್ಯ ಸಮಾಜವಾದಿ ಪಕ್ಷದ ಸಮ್ಮೇಳನದ ಸಂಘಟನೆ.

1964 - ಶ್ರೀಮತಿ ಸೋನಕ್ಕ ಅವರೊಡನೆ ವಿವಾಹ.

1967 - ರಾಜ್ಯ ವಿಧಾನಸಭೆಗೆ ತೀರ್ಥಹಳ್ಳಿ ಕ್ಷೇತದಿಂದ ಮರು ಆಯ್ಕೆ.

1972 - 1972ರ ಜೂನ್ 9 ರಂದು ನಿಧನ.

**ಎಸ್.ಗೋಪಾಲಗೌಡರನ್ನು ಕುರಿತು ಪ್ರಕಟವಾಗಿರುವ ಗ್ರಂಥಗಳು**

1. ಶಾಸನ ಸಭೆಯಲ್ಲಿ ಶಾಂತವೇರಿ (1971) ಸಂ:ಕೋಣಂದೂರು ಲಿಂಗಪ್ಪ ಸಮಾಜ ಯುವಜನ ಸಭಾ, ಮೈಸೂರು.

2. ಕಾಗೋಡು ಸತ್ಯಾಗ್ರಹ (1980) : ಜಿ.ರಾಜಶೇಖರ್, ಅಕ್ಷರ ಪ್ರಕಾಶನ, ಸಾಗರ

3. ಜೀವಂತ ಜ್ವಾಲೆ (1981) : ಕೋಣಂದೂರು ವೆಂಕಟಪ್ಪಗೌಡ, ಯಶಸ್ವಿ ಪ್ರಕಾಶನ, ಹನುಮಂತನಗರ, ಬೆಂಗಳೂರು.

4. ಕಾಗೋಡು ಕ್ರಾಂತಿ (1981) : ಪ್ರಧಾನ ಸಂಪಾದಕರು : ಎನ್.ಕೆ.ಸೀತಾರಾಮ ಅಯ್ಯಂಗಾರ್, ಸಾಗರ.

5. ಗೋಪಾಲಗೌಡರ ಡೈರಿ, ಪತ್ರಗಳು ಇತ್ಯಾದಿ (1982) ಸಂ : ಎಚ್.ವಿ.ವಿಷ್ಣುಮೂರ್ತಿ, ಅನನ್ಯ ಪ್ರಕಾಶನ, ನಜರ್‌ಬಾದ್, ಮೈಸೂರು.

6. ಶಾಂತವೇರಿ ಗೋಪಾಲಗೌಡ ನೆನಪಿನ ಸಂಪುಟ (1997) ಸಂ : ಕಾಳೇಗೌಡ ನಾಗವಾರ, ಜಿ.ವಿ. ಆನಂದಮೂರ್ತಿ, ಕನ್ನಡ ವಿಶ್ವವಿದ್ಯಾನಿಲಯ, ಹಂಪಿ.



* * * * *



ಸರ್ಕಾರಿ ಮುದ್ರಣಾಲಯ, ಬೆಂಗಳೂರು - 560 001